# ಗೌಡ ಜನಾಂಗ

## ಇತಿಹಾಸ ಮತ್ತು ಸಂಸ್ಕೃತಿ

ಸಂಪಾದಕರು
ಡಾ. ಕೆ. ಚಿನ್ನಪ್ಪ ಗೌಡ



# ಗೌಡ ಜನಾಂಗ

## ಇತಿಹಾಸ ಮತ್ತು ಸಂಸ್ಕೃತಿ

ಸಂಪಾದಕ

**ಡಾ. ಕೆ. ಚಿನ್ನಪ್ಪ ಗೌಡ**

**ಸಲಹಾ ಸಮಿತಿ**

ಶ್ರೀ ಯದುಪತಿ ಗೌಡ

ಡಾ. ಜಿ.ಪಿ. ಶಿವರಾಮ

ಶ್ರೀ ಮನೋಹರ ದೇವಸ್ಯ

ಶ್ರೀ ಎನ್. ರಾಮಚಂದ್ರ ಗೌಡ

ಶ್ರೀ ಲೋಕಯ್ಯ ಗೌಡ

ಶ್ರೀ ವಾಸುದೇವ ಗೌಡ

೨೦೦೩




ಬೆಳ್ಳಿಹಬ್ಬ ಆಚರಣಾ ಸಮಿತಿ

ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ

ಮಂಗಳೂರು

Price : **Rs. 200**

Pages : 330

Published by :
Silver Jubilee Celebration Committee
Okkaligara Yaane Gowdara Seeva Sangha
Mangalore

First Impression :
2003



**GOWDA JANAANGA - ITHIHAASA MATTU SAMSKRITI**
A collection of sixteen research papers on
History and Culture of Gowda Community

Editor
Dr. K. Chinnapa Gowda
Reader, Department of Kannada
for Post Graduate Studies and Research
Mangalore University, Mangalagangothri - 574 199

Typeset & Printed at
Aakrithi Computers
Mangalore - 1
✆ : 443002

# ಪ್ರಸ್ತಾವನೆ

ಹದಿನಾರು ಲೇಖನಗಳನ್ನೊಳಗೊಂಡ **ಗೌಡ ಜನಾಂಗ - ಇತಿಹಾಸ ಮತ್ತು ಸಂಸ್ಕೃತಿ** ಎಂಬ ಗ್ರಂಥವನ್ನು ಜನಾಂಗ ಮತ್ತು ಸಂಸ್ಕೃತಿ ಪ್ರಿಯರ ಕೈಗೆ ಒಪ್ಪಿಸಲು ಸಂತೋಷಪಡುತ್ತಿದ್ದೇನೆ. ಮಂಗಳೂರಿನ ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘವು ತನ್ನ ಬೆಳ್ಳಿ ಹಬ್ಬವನ್ನು ಆಚರಿಸುತ್ತಿದೆ. ಬೆಳ್ಳಿ ಹಬ್ಬದ ಅಂಗವಾಗಿ ಶ್ರೀ ಆದಿಚುಂಚನಗಿರಿ ಮಹಾ ಸಂಸ್ಥಾನ ಮಠದ ಪೀಠಾಧ್ಯಕ್ಷರಾದ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮೀಜಿಯವರ ಐವತ್ತೆಂಟನೆಯ ಹುಟ್ಟುಹಬ್ಬವನ್ನು ಆಚರಿಸುವುದರ ಜೊತೆಗೆ ಗೌಡರ ಜಿಲ್ಲಾ ಮಟ್ಟದ ಬೃಹತ್ ಸಮ್ಮೇಳನವನ್ನು ಸಂಘವು ಆಯೋಜಿಸಿದೆ. ಇಂತಹ ವಿಶಿಷ್ಟ ಮತ್ತು ವಿಶೇಷ ಸಂದರ್ಭದ ಸವಿನೆನಪಿಗಾಗಿ ಈ ಆಕರ ಗ್ರಂಥವನ್ನು ಪ್ರಕಟಿಸಲಾಗಿದೆ.

ಈ ಗ್ರಂಥದಲ್ಲಿ ಮೂರು ವಿಭಾಗಗಳಿವೆ. ಮೊದಲನೆಯ ವಿಭಾಗವನ್ನು ಅಭಿವಂದನ -ಅಭಿನಂದನ ಎಂದು ಹೆಸರಿಸಲಾಗಿದ್ದು ಇದರಲ್ಲಿ ಮೂರು ಲೇಖನಗಳಿವೆ. **ಆದಿಚುಂಚನಗಿರಿಯ ಸಾಂಸ್ಕೃತಿಕ ಅವಲೋಕನ** (ಡಾ. ಕೆ. ರಾಜೇಶ್ವರಿ ಗೌಡ) ಎಂಬ ಲೇಖನದಲ್ಲಿ ಆದಿಚುಂಚನಗಿರಿ ಮಹಾಸಂಸ್ಥಾನದ ಪೌರಾಣಿಕ, ಐತಿಹಾಸಿಕ, ಜಾನಪದ, ಧಾರ್ಮಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಆಯಾಮಗಳ ಸಾಧನೆಗಳನ್ನು ಸಮರ್ಪಕವಾಗಿ ವಿವರಿಸಲಾಗಿದೆ. ಸಂಶೋಧನ ಶಿಸ್ತಿನಿಂದ ಈ ಲೇಖನವನ್ನು ಡಾ. ಕೆ. ರಾಜೇಶ್ವರಿ ಗೌಡ ಅವರು ರಚಿಸಿದ್ದಾರೆ. ಧಾರ್ಮಿಕ ಕೇಂದ್ರವೊಂದು ವರ್ತಮಾನ ಕಾಲಘಟ್ಟದಲ್ಲಿ ಪ್ರಸ್ತುತವಾಗಬೇಕಾದ ಅಗತ್ಯ ಮತ್ತು ಸಾಧ್ಯತೆಗಳನ್ನು ಈ ಲೇಖನದಲ್ಲಿ ಬಿಂಬಿಸಿದ್ದಾರೆ.

ಸಂಶೋಧನ ಮಹಾಪ್ರಬಂಧಕ್ಕೆ ಒಳಪಟ್ಟಿರುವ ವಿಷಯವನ್ನು ಒಂದು ಲೇಖನದ ವ್ಯಾಪ್ತಿಯ ಒಳಗಡೆ ಅಳವಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಗೌಡ ಜನಾಂಗ ಮಾತ್ರವಲ್ಲ ಕರ್ನಾಟಕದ ಒಟ್ಟು ಧಾರ್ಮಿಕ ಪರಂಪರೆಗಳಲ್ಲಿ ತನ್ನ ವಿಶಿಷ್ಟ ಕಾರ್ಯಯೋಜನೆಗಳಿಂದ ಅನನ್ಯ ಸ್ಥಾನ ಗಳಿಸಿರುವ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರಿಗೆ ಅಭಿವಂದಿಸುವ ರೂಪದಲ್ಲಿರುವ ಲೇಖನವನ್ನು ಈ ಸಂಪುಟದಲ್ಲಿ ಅಳವಡಿಸಲಾಗಿದೆ.

ಈ ವಿಭಾಗದ ಇನ್ನೆರಡು ಲೇಖನಗಳು - ೧. **ಗೌಡ ಜನಾಂಗದ ಮೇರು ವ್ಯಕ್ತಿ - ಶ್ರೀ ಕುರುಂಜಿ ವೆಂಕಟ್ರಮಣ ಗೌಡ** (ಪ್ರೊ. ಡಿ. ಜವರೇ ಗೌಡ) ಮತ್ತು ೨. **ವಿದ್ಯಾನಗರ ಕುರುಂಜಿ ಬಾಗ್ - ಶಿಕ್ಷಣ ಹರಿಕಾರ ಶ್ರೀ ಕುರುಂಜಿಯವರ ವ್ಯಕ್ತಿತ್ವ ದರ್ಶನ** (ಪೂವಪ್ಪ ಕಣಿಯೂರು, ಪ್ರೊ. ಕೆ.ವಿ. ದಾಮೋದರ ಗೌಡ). ಕರಾವಳಿ ವಲಯದ ಶಿಕ್ಷಣ ರಂಗದಲ್ಲಿ ಅಪೂರ್ವ ಸಾಧನೆ ಮಾಡಿದ ಶ್ರೀ ಕುರುಂಜಿಯವರನ್ನು ಸಮ್ಮೇಳನದಲ್ಲಿ ಸನ್ಮಾನಿಸಲಾಗುತ್ತಿದೆ. ಅವರ ಸನ್ಮಾನದ ಆಶಯಕ್ಕೆ ಅನುಗುಣವಾಗಿ ಈ ಲೇಖನಗಳನ್ನು ಸಿದ್ಧಪಡಿಸಲಾಗಿದೆ. ಶಿಕ್ಷಣ ಸಂಸ್ಥೆಗಳ ಸ್ಥಾಪನೆ ಮತ್ತು ಅವುಗಳ ಕಾರ್ಯಕಲಾಪಗಳಲ್ಲಿ ಪೂರ್ಣವಾಗಿ ತೊಡಗಿಸಿಕೊಂಡಿರುವ ಶ್ರೀ ಕುರುಂಜಿಯವರ ಬದುಕು ಮತ್ತು ಯೋಚನಾ ಶೈಲಿ ಅಧ್ಯಯನಯೋಗ್ಯವಾದುದು. ಕೃಷಿಯ ಉತ್ಪಾದನೆಯನ್ನು ಶಿಕ್ಷಣಕ್ಕೆ ಮೂಲ ಮತ್ತು ಮುಖ್ಯ ಬಂಡವಾಳವನ್ನಾಗಿ ತೊಡಗಿಸಿದವರು ಬಹಳ ವಿರಳ. ಇಂತಹ ವಿರಳ ಪಂಕ್ತಿಯ ಅಪೂರ್ವ ಸಾಧಕರ ಯೋಚನೆಗಳನ್ನು ಅವರದೇ ಮಾತುಗಳಲ್ಲಿ ಹಿಡಿದಿಡುವ ಪ್ರಯತ್ನವನ್ನು ಇಲ್ಲಿನ ಲೇಖನಗಳು ಸೊಗಸಾಗಿ ಮಾಡಿವೆ. ಮೆಚ್ಚುಗೆ ಮತ್ತು ಗೌರವದ ಮುಖ್ಯ ಭಾವವಿದ್ದರೂ ಅಭಿವಂದನ - ಅಭಿನಂದನ ಭಾಗದ ಲೇಖನಗಳು ಗೌಡ ಜನಾಂಗದ ಸಾಧಕರ ಅಪೂರ್ವ ನೆಲೆಯನ್ನು ಶೋಧಿಸುವಲ್ಲಿ ಯಶಸ್ವಿಯಾಗಿವೆ.

ಈ ಗ್ರಂಥದ ಎರಡನೆಯ ಭಾಗ **ಗೌಡ ಜನಾಂಗ - ಹಿನ್ನೆಲೆ, ಇತಿಹಾಸ, ಅನನ್ಯತೆ** ಎಂಬುದು. ಈ ಭಾಗದಲ್ಲಿ ಒಟ್ಟು ಏಳು ಲೇಖನಗಳಿವೆ : **ಗೌಡರ ಏಳು ಬೀಳು - ಚಾರಿತ್ರಿಕ ಅವಲೋಕನ** (ಎನ್.ಎಸ್. ದೇವಿಪ್ರಸಾದ್ ಸಂಪಾಜೆ), **ಸುಳ್ಯ ಪರಿಸರದ ಗೌಡರು** (ಡಾ. ಪುರುಷೋತ್ತಮ ಬಿಳಿಮಲೆ), **ನಾಮಧಾರಿ ಒಕ್ಕಲಿಗರು** (ಡಾ. ಅಂಬಳಿಕೆ ಹಿರಿಯಣ್ಣ) **ಮಲೆನಾಡು ಶೈವ ಒಕ್ಕಲಿಗರು ಅಥವಾ ವಿಭೂತಿ ಗೌಡರು** (ಡಾ. ವೈ.ಸಿ. ಭಾನುಮತಿ) **ಗಂಗಡಿಕಾರ ಒಕ್ಕಲಿಗರು- ಒಂದು ಸಮೀಕ್ಷೆ** (ಡಾ. ನಲ್ಲೂರು ಪ್ರಸಾದ್) **ಕನ್ನಡನಾಡಿನ ಒಕ್ಕಲಿಗರು** (ಪ್ರೊ. ಹ.ಕ. ರಾಜೇಗೌಡ) ಮತ್ತು **ಶಾಸನೋಕ್ತ ಒಕ್ಕಲಿಗ ವೀರರು** (ಪ್ರೊ. ಡಿ. ಕೆ. ರಾಜೇಂದ್ರ). ಗೌಡ ಜನಾಂಗದ ಹಿನ್ನೆಲೆ, ಇತಿಹಾಸ ಮತ್ತು ಸಾಂಸ್ಕೃತಿಕ ಅನನ್ಯತೆಯನ್ನು ಕರ್ನಾಟಕದ ವ್ಯಾಪ್ತಿಯಲ್ಲಿ ಪರಿಭಾವಿಸುವುದಕ್ಕೆ ಸಹಾಯಕವಾಗುವ ರೀತಿಯಲ್ಲಿ ಈ ಏಳು ಲೇಖನಗಳಿವೆ. ಗೌಡ ಜನಾಂಗದಲ್ಲಿ ಹತ್ತಾರು ಪ್ರಭೇದಗಳಿವೆ. ಕೆಲವು ಪ್ರಭೇದಗಳ ಕುರಿತಂತೆ ಅಧ್ಯಯನಗಳು ನಡೆದಿವೆ. ಕೃತಿಗಳು, ಲೇಖನಗಳು ಪ್ರಕಟವಾಗಿವೆ. ಇನ್ನು ಕೆಲವು ಪ್ರಭೇದಗಳ ಬಗ್ಗೆ ಇನ್ನಷ್ಟೇ ಅಧ್ಯಯನಗಳು ಆಗಬೇಕಾಗಿವೆ. ಈ ಸ್ಥಿತಿಯಲ್ಲಿ ಅಖಿಲ ಕರ್ನಾಟಕ ಗೌಡ ಜನಾಂಗದ ಕುರಿತಂತೆ ಸಮಗ್ರವಾಗಿ, ಅಧಿಕೃತವಾಗಿ ಹೇಳಲು

ಸಾಧ್ಯವಿಲ್ಲ. ಗೌಡ ಜನಾಂಗದ ಪ್ರಾಚೀನತೆ, ಐತಿಹಾಸಿಕ ಕಾಲಘಟ್ಟಗಳಲ್ಲಿ ಅವರು ನಡೆಸಿದ ಹೋರಾಟ, ಸಾಮಾಜಿಕ ಇತಿಹಾಸ, ಸಾಂಸ್ಕೃತಿಕ ಅನನ್ಯತೆ ಈ ವಿಷಯಗಳ ಕುರಿತಂತೆ ಓದುಗರಲ್ಲಿ ಆಸಕ್ತಿ ಮತ್ತು ಒಳನೋಟಗಳನ್ನು ಒದಗಿಸುವ ದೃಷ್ಟಿಯಿಂದ ಇಲ್ಲಿನ ಲೇಖನಗಳು ಮುಖ್ಯವಾಗುತ್ತವೆ. ಚಾರಿತ್ರಿಕ ದಾಖಲೆಗಳನ್ನು ಸಮರ್ಥ ಆಧಾರವಾಗಿ ಶ್ರೀ ಎನ್. ಎಸ್. ದೇವಿಪ್ರಸಾದ್ ಸಂಪಾಜೆ ಬಳಸಿಕೊಂಡಿದ್ದಾರೆ. ಸಾಂಸ್ಕೃತಿಕ ವಿವರಗಳ ಮೂಲಕ ಸುಳ್ಯ ಪರಿಸರದ ಗೌಡರ ಲೋಕದೃಷ್ಟಿಯನ್ನು ಡಾ. ಪುರುಷೋತ್ತಮ ಬಿಳಿಮಲೆಯವರು ಸೈದ್ಧಾಂತಿಕವಾಗಿ ಅನಾವರಣಗೊಳಿಸಿದ್ದಾರೆ. ಡಾ. ಅಂಬಳಿಕೆ ಹಿರಿಯಣ್ಣ, ಡಾ. ವೈ. ಸಿ. ಭಾನುಮತಿ ಮತ್ತು ಡಾ. ನಲ್ಲೂರು ಪ್ರಸಾದ್ ಅವರ ಲೇಖನಗಳು ಅನುಕ್ರಮವಾಗಿ ನಾಮಧಾರಿ, ಶೈವ ಒಕ್ಕಲಿಗರು ಮತ್ತು ಗಂಗಡಿಕಾರ ಒಕ್ಕಲಿಗರ ಜನಾಂಗೀಯ ವೈಶಿಷ್ಟ್ಯಗಳನ್ನು ತಿಳಿಸುತ್ತವೆ. ಪ್ರೊ. ಹ.ಕ. ರಾಜೇಗೌಡ ಅವರು ತಮ್ಮ ಲೇಖನದಲ್ಲಿ ಕನ್ನಡ ನಾಡಿನ ಒಕ್ಕಲಿಗರ ಒಟ್ಟು ನಾಡಿಮಿಡಿತವನ್ನು ಗ್ರಹಿಸಿದ್ದಾರೆ. ಒಕ್ಕಲಿಗರ ಜನಾಂಗದ ವೀರರು ಶಾಸನಗಳಲ್ಲಿ ದಾಖಲಾದ ಬಗೆ ಮತ್ತು ಕಾರಣಗಳನ್ನು ಪ್ರೊ. ಡಿ. ಕೆ. ರಾಜೇಂದ್ರ ತಮ್ಮ ಲೇಖನದಲ್ಲಿ ವಿವರಿಸಿದ್ದಾರೆ.

**ಗೌಡ ಜನಾಂಗ - ಕೃಷಿ, ಸಾಹಿತ್ಯ, ಸಂಸ್ಕೃತಿ** ಭಾಗದಲ್ಲಿ ಆರು ಲೇಖನಗಳಿವೆ. ಪ್ರಾದೇಶಿಕವಾಗಿ ಈ ಲೇಖನಗಳು ದಕ್ಷಿಣ ಕನ್ನಡ ಜಿಲ್ಲೆಯ ಗೌಡರಿಗೆ ಸಂಬಂಧಪಟ್ಟಿವೆ. **ಕೃಷಿ ಜಗತ್ತಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಗೌಡರು** (ಎ.ಕೆ. ಹಿಮಕರ) ಲೇಖನದಲ್ಲಿ ಗೌಡ ಜನಾಂಗವು ಕೃಷಿ ಪರಂಪರೆಯ ಕುರಿತಂತೆ ಹೊಂದಿರುವ ದೇಶಿಯ ಜ್ಞಾನ ಮತ್ತು ತಿಳುವಳಿಕೆಯನ್ನು ವ್ಯವಸ್ಥಿತವಾಗಿ ಪ್ರಸ್ತಾವಿಸಿದ್ದಾರೆ. ಇದೊಂದು ಹೊಸ ಬಗೆಯ ಲೇಖನ. ಕಳೆದುಕೊಳ್ಳುವ ಆತಂಕ ಮತ್ತು ಪಡೆದುಕೊಳ್ಳುವ ಸಂಭ್ರಮವನ್ನು ಜನಾಂಗವೊಂದು ಅನುಭವಿಸುತ್ತಿರುವ ಪ್ರಕ್ರಿಯೆಗೆ ಈ ಲೇಖನವು ಅತ್ಯುತ್ತಮ ಮಾದರಿಯಾಗಿದೆ. ಗೌಡರ ವಿಶಿಷ್ಟವಾದ ಭೌತಿಕ ರಚನೆಯಾದ ಐನ್ ಮನೆಗಳ ಕುರಿತಂತೆ ಕ್ಷೇತ್ರಕಾರ್ಯ ನಡೆಸಿ ಆ ಮೂಲಕ ಸಂಗ್ರಹಿಸಿದ ಮಾಹಿತಿಗಳನ್ನು ಆಧರಿಸಿ ಶ್ರೀ ಪೂವಪ್ಪ ಕಣಿಯೂರು ಅವರು **ದಕ್ಷಿಣ ಕನ್ನಡ ಜಿಲ್ಲೆಯ ಗೌಡರ ಐನ್ ಮನೆಗಳು** ಲೇಖನವನ್ನು ರಚಿಸಿದ್ದಾರೆ. ತೌಲನಿಕ ಅಧ್ಯಯನ ವಿಧಾನವು ಈ ಲೇಖನದ ಮುಖ್ಯ ವೈಶಿಷ್ಟ್ಯ. ಬದುಕು - ಕುಟುಂಬ - ಕೃಷಿ- ಆಚರಣೆ - ಪ್ರಾಕೃತಿಕ ಸಂಪನ್ಮೂಲಗಳು ಐನ್ ಮನೆಗಳ ನಿರ್ಮಾಣವನ್ನು ಪ್ರಭಾವಿಸಿರುವುದನ್ನು ಒಂದು ತಾತ್ವಿಕತೆಯಾಗಿ ಲೇಖಕರು ಮಂಡಿಸಿದ್ದಾರೆ. ಭೂ ವ್ಯವಸಾಯವು ಗೌಡರ ಬದುಕು ಮತ್ತು ಸಂಸ್ಕೃತಿಯ ಜೀವಸೆಲೆಯಾಗಿರುವುದು ಈ ಲೇಖನಗಳಿಂದ ಸ್ಪಷ್ಟವಾಗುತ್ತದೆ.

ಗೌಡ ಜನಾಂಗದ ಸಾಹಿತಿಗಳು ಮತ್ತು ಅವರ ಬರವಣಿಗೆಗಳನ್ನೂ ಪ್ರವೇಶ ದ್ವಾರವನ್ನಾಗಿ ಮಾಡಿಕೊಂಡು ದಕ್ಷಿಣ ಕನ್ನಡ ಜಿಲ್ಲೆಯ ಸಾಹಿತ್ಯ ಲೋಕವನ್ನು ಪ್ರವೇಶಿಸುವ ಮತ್ತು ಪರಿಚಯಿಸುವ ಕೆಲಸವನ್ನು **ಕನ್ನಡದ ಕಟ್ಟಾಳು ಕೊಳಂಬೆ ಪುಟ್ಟಣ್ಣ ಗೌಡ - ನೂರರ ನೆನಪು** (ಪ್ರೊ. ಎಂ. ಶಿವಣ್ಣ ನೆಲಮನೆ) ಮತ್ತು **ದಕ್ಷಿಣ ಕನ್ನಡ ಜಿಲ್ಲೆಯ ಗೌಡ ಜನಾಂಗದ ಸಾಹಿತಿಗಳು** (ಸಂಜೀವ ಕುದ್ಪಾಜೆ) ಎಂಬ ಎರಡು ಲೇಖನಗಳಲ್ಲಿ ಮಾಡಲಾಗಿದೆ. ಸಾಹಿತ್ಯವನ್ನು ಜಾತಿಯ ನೆಲೆಯಲ್ಲಿ ಮೌಲ್ಯಮಾಪನ ಮಾಡುವ ಉದ್ದೇಶ ಈ ಲೇಖನಗಳಲ್ಲಿಲ್ಲ. ಬದಲಾಗಿ ಜನಾಂಗೀಯ ಅಂಶಗಳು ಸಾಹಿತ್ಯವನ್ನು

ರೂಪಿಸುವ, ಪ್ರಭಾವಿಸುವ ಪ್ರೇರಕ ಶಕ್ತಿಗಳಾಗಿರುವ ಬಗೆಯನ್ನು ಶೋಧಿಸುವ ಮಾದರಿಗಳಾಗಿ ಈ ಲೇಖನಗಳಿವೆ. ಗೌಡರಾಗಿದ್ದರೂ ಅವರು ಕನ್ನಡದ ಲೇಖಕರು ಎಂಬುದು ಇಲ್ಲಿ ಮುಖ್ಯ.

ಗೌಡರ ಜಾನಪದ ಜಗತ್ತನ್ನು ಬಿಂಬಿಸುವ **ಗೌಡರು - ಜನಾಂಗ ಮತ್ತು ಕುಣಿತ** (ಯದುಪತಿ ಗೌಡ), ಜನಪದ ಕಥೆಗಳಲ್ಲಿ **ಗೌಡ ಜನಾಂಗದ ಸಾಂಸ್ಕೃತಿಕ ಅನನ್ಯತೆ** (ಡಾ. ವಿಶ್ವನಾಥ ಬದಿಕಾನ) ಎಂಬ ಎರಡು ಲೇಖನಗಳು ಇಲ್ಲಿವೆ. ಪುರುಷ ಕುಣಿತ ಮತ್ತು ಸಿದ್ಧವೇಷವನ್ನು ಕೇಂದ್ರವಾಗಿಟ್ಟುಕೊಂಡು ಗೌಡ ಜನಾಂಗದ ಪ್ರತಿಭಟನೆಯ ನೆಲೆಗಳನ್ನು ಯದುಪತಿ ಗೌಡರು ವಿಶ್ಲೇಷಿಸಿದ್ದಾರೆ. ಕುಣಿತಗಳು ಮನೋರಂಜನೆಗಾಗಿ ಮಾತ್ರ ಇರುವಂತವುಗಳಲ್ಲ, ಅವುಗಳು ಜನಾಂಗ ಅಧ್ಯಯನದ ಆಕರ ಸಾಮಾಗ್ರಿಗಳಾಗಬಲ್ಲವು ಎಂಬ ಅಂಶವನ್ನು ಈ ಲೇಖನವು ಒಂದು ತಾತ್ವಿಕತೆಯಾಗಿ ಮುಂದಿಡುತ್ತದೆ. ಗೌಡ ಜನಾಂಗದ ಹಿನ್ನೆಲೆ, ಕುಟುಂಬ ಪದ್ಧತಿ, ಆಡಳಿತ ಪದ್ಧತಿ ಈ ಅಂಶಗಳನ್ನು ಹಿನ್ನೆಲೆಯಾಗಿ ವಿವರಿಸಿ ಗೌಡ ಜನಾಂಗದಲ್ಲಿ ಪ್ರಚಲಿತಲಿರುವ ಜನಪದ ಕಥೆಗಳ ಪಠ್ಯಗಳನ್ನು ನೀಡಿ ಈ ಜನಾಂಗದ ಸಾಂಸ್ಕೃತಿಕ ಅನನ್ಯತೆಯನ್ನು ಸೂಕ್ಷ್ಮವಾಗಿ ಡಾ. ವಿಶ್ವನಾಥ ಬದಿಕಾನ ಅವರು ತಮ್ಮ ಲೇಖನದಲ್ಲಿ ಪ್ರಸ್ತುತಪಡಿಸಿದ್ದಾರೆ. ಜನಾಂಗಕ್ಕೂ ಜನಪದ ಕತೆಗಳಿಗೂ ಇರುವ ಮತ್ತು ಇರಬಹುದಾದ ಸಂಬಂಧಗಳನ್ನು ತಿಳಿಸುವ ದೃಷ್ಟಿಯಿಂದ ಈ ಲೇಖನ ಇತರ ಜನಾಂಗದ ಕಥೆಗಳ ಅಧ್ಯಯನದ ಕಡೆಗೆ ಪ್ರೇರೇಪಿಸುವಂತಿದೆ.

ಈ ಸಂಪುಟದ ಲೇಖನಗಳು ಮುಖ್ಯವಾಗಿ ಗೌಡ ಜನಾಂಗಕ್ಕೆ ಸಂಬಂಧಪಟ್ಟಿವೆ ಎಂಬುದು ನಿಜ. ಇಲ್ಲಿಯ ಕೆಲವು ಲೇಖನಗಳ ಫಲಿತಾಂಶಗಳು ಜನಾಂಗಗಳು ಮತ್ತು ಅವುಗಳ ಸಂಸ್ಕೃತಿಯನ್ನು ಹೆಚ್ಚು ವ್ಯಾಪಕವಾಗಿ ಗಮನಿಸಬೇಕಾದ ಅಗತ್ಯದ ಕಡೆಗೆ ನಮ್ಮನ್ನು ಒತ್ತಾಯಿಸುತ್ತವೆ. ಈ ದೃಷ್ಟಿಯಿಂದ ಇಲ್ಲಿಯ ಲೇಖನಗಳಿಗೆ ಸಂಸ್ಕೃತಿ ಮತ್ತು ಜಾನಪದ ಸಂಶೋಧನೆಯಲ್ಲಿ ವಿಶಿಷ್ಟ ಸ್ಥಾನವಿದೆ.

ಜನಾಂಗವೊಂದರ ಕುರಿತಂತೆ ಗ್ರಂಥವನ್ನು ತರುವುದು ಬಹಳ ಕಷ್ಟದ್ದು ಮತ್ತು ಸೂಕ್ಷ್ಮದ್ದು. ಈ ಕಷ್ಟ ಮತ್ತು ಸೂಕ್ಷ್ಮಗಳನ್ನು ನಾನಿಲ್ಲಿ ವಿವರಿಸಲು ಹೋಗುವುದಿಲ್ಲ. ಸಾಮಾನ್ಯವಾಗಿ ಇಂತಹ ಗ್ರಂಥಗಳ ಬಗ್ಗೆ, ಅವುಗಳು ಸಮಗ್ರವಾಗಿಲ್ಲ, ಮಾಹಿತಿಗಳ ದೃಷ್ಟಿಯಿಂದ ಅಪೂರ್ಣವಾಗಿವೆ, ಅವರಿವರ ಹೆಸರುಗಳು ಬಿಟ್ಟು ಹೋಗಿವೆ - ಈ ಬಗೆಯ ಅಸಮಾಧಾನದ ಆಕ್ಷೇಪಗಳು ಕೇಳಿ ಬರುವುದುಂಟು. ಈ ಸಂಪುಟಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಇದರಲ್ಲಿಯೂ ಮಿತಿಗಳಿವೆ ಎಂಬುದು ನಿಜ. ಈ ಸಂಪುಟದ ಲೇಖಕ ತಪ್ಪು ಮಾಡಿರಬಹುದು, ಆದರೆ ಉದ್ದೇಶಪೂರ್ವಕವಾಗಿ ಖಂಡಿತಕ್ಕೂ ಸುಳ್ಳು ಹೇಳಿರಲಾರರು ಎಂದು ನಾನು ಸಂಪಾದಕನ ನೆಲೆಯಲ್ಲಿ ಹೇಳಬಯಸುತ್ತೇನೆ. ಓದುಗರು ಇಲ್ಲಿರುವ ಲೇಖನಗಳ ಮಿತಿಗಳನ್ನು ತಿಳಿಸಬಹುದು. ಲೇಖನಗಳಲ್ಲಿರುವ ಮಿತಿಗಳನ್ನು ಮೀರುವ ಸಲುವಾಗಿ ಅಧ್ಯಯನವನ್ನು ಕೈಗೊಳ್ಳಬಹುದು. ಸಂಶೋಧನೆಯ ಕೆಲಸವು ಪ್ರಕ್ರಿಯೆಯ ರೂಪದಲ್ಲಿ ನಡೆಯಬೇಕಾಗಿದೆ ಎಂದು ನಾನು ಆಶಿಸುತ್ತೇನೆ. ಲಭ್ಯವಿದ್ದ ಸೀಮಿತ ಅವಧಿಯಲ್ಲಿ ಸಾಧ್ಯವಾದಷ್ಟು ವೈವಿಧ್ಯಮಯವಾಗಿರುವ ಲೇಖನಗಳನ್ನು ಅಳವಡಿಸಿ ಈ ಸಂಪುಟವನ್ನು ಪ್ರಾಮಾಣಿಕ

ವಾಗಿ ಸಿದ್ಧಪಡಿಸಲಾಗಿದೆ ಎಂದು ವಿನಮ್ರವಾಗಿ ಸೂಚಿಸಬಯಸುತ್ತೇನೆ. ದಯವಿಟ್ಟು ತಪ್ಪುಗಳನ್ನಷ್ಟೇ ಹುಡುಕಬೇಡಿ. ತಪ್ಪುಗಳಾಗಿದ್ದರೆ ಕ್ಷಮಿಸಿ. ಈ ಸಂಪುಟದ ಧನಾತ್ಮಕ ಅಂಶಗಳನ್ನು ಪರಿಗಣಿಸಿ ಈ ಆಕರ ಗ್ರಂಥದ ಪ್ರಕಟನೆಯ ಶ್ರಮವನ್ನು ಸೂಕ್ತವಾಗಿ ಗುರುತಿಸುತ್ತೀರಿ ಎಂಬ ವಿಶ್ವಾಸ ನನಗಿದೆ.

ಈ ಸಂಪುಟದ ಲೇಖಕರು ನನ್ನ ನಿತ್ಯದ ಒತ್ತಾಯವನ್ನು ಅರ್ಥ ಮಾಡಿಕೊಂಡು, ಜನಾಂಗ ಮತ್ತು ಸಂಸ್ಕೃತಿಯ ಮೇಲಿನ ಪ್ರೀತಿಯಿಂದ ಲೇಖನಗಳನ್ನು ಶ್ರದ್ಧೆಯಿಂದ ಬರೆದು ಕೊಟ್ಟಿದ್ದಾರೆ. ಟಿಪ್ಪಣಿಯ ರೂಪದಲ್ಲಿ ಸಹಾಯಕವಾಗುವ ಛಾಯಾಚಿತ್ರಗಳನ್ನೂ, ರೇಖಾಚಿತ್ರಗಳನ್ನೂ ಕಳುಹಿಸಿಕೊಟ್ಟಿದ್ದಾರೆ. ಎಲ್ಲಾ ಲೇಖಕರನ್ನು ಮಂಗಳೂರು ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘದ ಪರವಾಗಿ ಮತ್ತು ವೈಯಕ್ತಿಕವಾಗಿ ಅಭಿನಂದಿಸಿ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಸಮ್ಮೇಳನದ ಸಮಯಕ್ಕೆ ಸಪಿಸೆನಪಿನ ಸ್ಮರಣಸಂಚಿಕೆಯ ಜೊತೆಗೆ ಗೌಡ ಜನಾಂಗದ ಕುರಿತಂತೆ ಅಧ್ಯಯನಪೂರ್ಣ ಆಕರ ಗ್ರಂಥವೊಂದನ್ನು ತರಬೇಕೆಂಬ ನನ್ನ ಅಭಿಪ್ರಾಯವನ್ನು ಒಪ್ಪಿ ಈ ಯೋಜನೆಗೆ ನೈತಿಕ ಬೆಂಬಲ ನೀಡಿ ಮಾರ್ಗದರ್ಶನ ಮಾಡಿದ ಆದಿಚುಂಚನಗಿರಿ ಮಂಗಳೂರು ಶಾಖಾ ಮಠದ ಶ್ರೀ ಧರ್ಮಪಾಲನಾಥ ಸ್ವಾಮೀಜಿಯವರಿಗೆ ಗೌರವಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ. ಆಕರ ಗ್ರಂಥ ಪ್ರಕಟಣೆಯ ಸಮುದ್ದೇಶವನ್ನು ಬೆಂಬಲಿಸಿ ಸರ್ವ ರೀತಿಯ ಪ್ರೋತ್ಸಾಹ, ಉತ್ತೇಜನವನ್ನು ನೀಡಿರುವ ಮಂಗಳೂರು ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘದ ಅಧ್ಯಕ್ಷರು ಮತ್ತು ಎಲ್ಲ ಪದಾಧಿಕಾರಿಗಳಿಗೆ, ಬೆಳ್ಳಿಹಬ್ಬ ಆಚರಣಾ ಸಮಿತಿಯ ಸರ್ವ ಸದಸ್ಯರಿಗೆ ವಿಶ್ವಾಸ ಪೂರ್ವಕ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಈ ಸಂಪುಟದ ಸಿದ್ಧತೆಯ ಎಲ್ಲಾ ಹಂತಗಳಲ್ಲಿ ನನ್ನ ಜೊತೆ ದುಡಿದು ಸಹಕರಿಸಿದ ಶ್ರೀ ಯದುಪತಿ ಅವರನ್ನು ಸ್ನೇಹಪೂರ್ವಕವಾಗಿ ಸ್ಮರಿಸುತ್ತೇನೆ.

ಈ ಆಕರ ಗ್ರಂಥವನ್ನು ವಿಶೇಷ ಮುತುವರ್ಜಿ ವಹಿಸಿ ಸೂಕ್ತ ಮುಖಪುಟ ವಿನ್ಯಾಸಗೊಳಿಸಿ ಮುದ್ರಿಸಿಕೊಟ್ಟಿರುವ ಆಕೃತಿ ಕಂಪ್ಯೂಟರ್ಸ್‌ನ ಶ್ರೀ ಕಲ್ಲೂರು ನಾಗೇಶ ಮತ್ತು ಬಳಗದವರಿಗೆ ಕೃತಜ್ಞನಾಗಿದ್ದೇನೆ.

ಹಲವು ಕಾರಣಗಳಿಂದ ನಮ್ಮ ಭವಿಷ್ಯವು ಕರಾಳವಾಗಿದೆ ಎಂಬ ಸನ್ನಿವೇಶವು ರೂಪು ಗೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ, ಸಮಾಜದ ಎಲ್ಲರಿಗೂ, ನಿರ್ದಿಷ್ಟವಾಗಿ ಗೌಡ ಜನಾಂಗದ ಯುವ ಪೀಳಿಗೆಗೆ ಈ ಗ್ರಂಥವು ಬದುಕಿನ ಸಂಸ್ಕೃತಿಯನ್ನು ಮರು ಸ್ಥಾಪಿಸಿಕೊಳ್ಳಲು ಅಗತ್ಯವಿರುವ ಶಿಸ್ತು ಮತ್ತು ಚೈತನ್ಯವನ್ನು ಒದಗಿಸುವಂತಾದರೆ ಈ ಗ್ರಂಥ ಪ್ರಕಟನೆಗೆ ವಿನಿಯೋಗವಾದ ಮಾನವ ಮತ್ತು ಆರ್ಥಿಕ ಸಂಪನ್ಮೂಲಗಳು ಸಾರ್ಥಕ ಎಂದು ಭಾವಿಸಿದ್ದೇನೆ.

**ಡಾ. ಕೆ. ಚಿನ್ನಪ್ಪ ಗೌಡ**

ಮಂಗಳೂರು

೧೯.೧.೨೦೦೩

# ಪರಿವಿಡಿ

## ಅಭಿವಂದನ - ಅಭಿನಂದನ



## ಗೌಡ ಜನಾಂಗ ಹಿನ್ನೆಲೆ, ಇತಿಹಾಸ, ಅನನ್ಯತೆ

## ಗೌಡ ಜನಾಂಗ - ಕೃಷಿ, ಸಾಹಿತ್ಯ, ಸಂಸ್ಕೃತಿ



ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳು



ಶ್ರೀ ಕಾಲ ಭೈರವೇಶ್ವರ



ಶ್ರೀ ಗಂಗಾಧರೇಶ್ವರ ಸ್ವಾಮಿ

ಶ್ರೀ ಕ್ಷೇತ್ರ ಆದಿಚುಂಚನಗಿರಿ ಮತ್ತು ಭೈರವ ಪುಷ್ಕರಿಣಿ




ಸರ್ವಧರ್ಮ ಸಮ್ಮೇಳನ



ವನ ಸಂವರ್ಧನ ಯೋಜನೆಯ ಕಾರ್ಯಕ್ರಮ
ಮುಖ್ಯಮಂತ್ರಿ ಎಸ್.ಎಂ. ಕೃಷ್ಣ, ಸುತ್ತೂರು ಶ್ರೀಗಳ ಜೊತೆ ಶ್ರೀ ಸ್ವಾಮೀಜಿಯವರು



ಜಾನಪದ ಕಲಾವಿದರಿಗೆ ಶ್ರೀಗಳಿಂದ ಸನ್ಮಾನ

# ಆದಿಚುಂಚನಗಿರಿಯ ಸಾಂಸ್ಕೃತಿಕ ಅವಲೋಕನ

ಡಾ. ಕೆ. ರಾಜೇಶ್ವರಿ ಗೌಡ

ಭಾರತದ ಅತ್ಯಂತ ಪ್ರಾಚೀನ ಧರ್ಮವಾದ ಶುದ್ಧ ಶೈವದಿಂದ ಕವಲೊಡೆದ ಪಂಥಗಳಲ್ಲಿ ನಾಥ ಪಂಥವೂ ಒಂದು. ಕ್ರಿ.ಶ. ಏಳನೆ ಶತಮಾನದಲ್ಲಿ ಲಾಕುಳ ಶೈವದ ಪ್ರಭಾವದಿಂದ ದೇವಾಲಯಗಳು ಹಾಗೂ ಅವುಗಳಿಗೆ ಹೊಂದಿಕೊಂಡೇ ಇದ್ದ ಮಠಗಳು ಅಸ್ತಿತ್ವಕ್ಕೆ ಬಂದ ಸಂದರ್ಭದಲ್ಲೇ ನಾಥ ಪಂಥವೂ ಭಾರತಾದ್ಯಂತ ಹಬ್ಬಿತ್ತು. ಜನಪರವಾದ ಈ ಭಕ್ತಿ ಚಳವಳಿಯ ಮೂಲವನ್ನು ಕೆಲವರು ಲಕುಲೀಶ ಹಾಗೂ ಪಾಶುಪತಗಳಲ್ಲಿ ಗುರುತಿಸಲೆತ್ನಿಸಿದ್ದಾರೆ. ವಾಸ್ತವವಾಗಿ ನಾಥ ಪಂಥ ಶುದ್ಧ ಶೈವದ ಸದಾಶಯಗಳನ್ನು, ಸಾತ್ವಿಕತೆಯನ್ನು ಮೈಗೂಡಿಸಿಕೊಂಡಿದೆ. ಜಾತೀಯತೆ, ಅಸ್ಪೃಶ್ಯತೆ, ಅಸಮಾನತೆ, ಶೋಷಣೆ ಮೊದಲಾದ ಸಾಮಾಜಿಕ ಅನಿಷ್ಟಗಳನ್ನು ಧಿಕ್ಕರಿಸಿ ಮಾನವೀಯತೆಯನ್ನು ಪುರಸ್ಕರಿಸಿ ಪ್ರಗತಿಪರ ಧೋರಣೆಗಳ ಸಾಕಾರವಾಗಿದೆ. ಸಮಾಜೋದ್ಧಾರಕ್ಕೆ ಬದ್ಧವಾದ ನಾಥ ಪಂಥದ ಪ್ರಮುಖ ಮಠವೇ - ಆದಿಚುಂಚನಗಿರಿ ಮಹಾಸಂಸ್ಥಾನ ಮಠ.

ಪೌರಾಣಿಕ, ಇತಿಹಾಸಿಕ, ಜಾನಪದ, ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ ಮೊದಲಾದ ಆಯಾಮಗಳಲ್ಲಿ ಶ್ರೀ ಮಠಕ್ಕೆ ಸಂಬಂಧಿಸಿದ ಪುರಾವೆಗಳನ್ನು ಮತ್ತು ಸಾಧನೆ ಸಿದ್ಧಿಗಳ ಸಾಕ್ಷಿಗಳನ್ನು ಕಾಣಬಹುದಾಗಿದೆ. 'ಆದಿಚುಂಚನಗಿರಿ' ಎಂಬ ಸ್ಥಳನಾಮದಲ್ಲೇ ಸಾಂಸ್ಕೃತಿಕ ವಿಶೇಷಣವನ್ನು ಗುರುತಿಸಬಹುದಾಗಿದೆ. ನಾಥ ಪಂಥದ ದ್ವಾದಶ ಕ್ಷೇತ್ರಗಳಲ್ಲಿ ಪ್ರಥಮವಾದುದು, ಈ ಪಂಥದ ದ್ರಷ್ಟಾರನಾದ ಪರಶಿವನು ಚುಂಚನಗಿರಿಯಲ್ಲಿ ತಪಸ್ಸು ಮಾಡಿ ತನ್ನ ಯೋಗ ಶಕ್ತಿಯಿಂದ ಸಿದ್ಧಯೋಗಿಯನ್ನು ಸೃಷ್ಟಿಸಿ ಆತನನ್ನು ಇಲ್ಲಿನ ಸಿದ್ಧ ಸಿಂಹಾಸನದ ಪ್ರಪ್ರಥಮ ಪೀಠಾಧಿಕಾರಿಯನ್ನಾಗಿ ನೇಮಿಸಿದನಂತೆ. ಮುಂದೆ ದ್ವಾದಶಪೀಠಗಳಿಗೂ ಪೀಠಾಧಿಪತಿಗಳನ್ನು ನೇಮಿಸುವ ಅಧಿಕಾರ ಚುಂಚನಗಿರಿ ಮಠಕ್ಕೆ ಇದ್ದುದರಿಂದ 'ಆದಿ' ಎಂಬ ಗುಣವಾಚಕ ಬಂದಿತು. ಭೈರವ ಭಕ್ತನಾದ ಚುಂಚನ ಅಧೀನದಲ್ಲಿ ಈ ಪ್ರಾಂತ್ಯ ಇದ್ದಿತು, ಅಲ್ಲದೆ ಇಲ್ಲಿನ ಬಂಡೆಗಳು ಮೇಲ್ಛಾವಣಿಯಂತೆ ಮುಂಚಾಚಿಕೊಂಡಿವೆ. ಕೆಲವು ಪಕ್ಷಿಗಳ ಕೊಕ್ಕಿನಂತೆ ಕಾಣಿತ್ತವೆ, ಚುಂಚ > ಜುಂಜು = ಒರಟು ಕೂದಲುಳ್ಳವನು ಅರ್ಥಾತ್ ಭೈರವಕ್ಷೇತ್ರ ಎಂದು 'ಚುಂಚ' ಶಬ್ದಕ್ಕೆ ಅರ್ಥಗಳಿವೆ. ವನಸ್ಪತಿ ಎಂಬುದಕ್ಕೂ ಅನ್ವಯಿಸುತ್ತದೆ. ಈಗಲೂ ಈ ಬೆಟ್ಟ ಪ್ರದೇಶಗಳಲ್ಲಿ ವನಸ್ಪತಿ ಮರಗಳಿವೆ. ಇವೆಲ್ಲ ಅಂಶಗಳನ್ನು ಒಟ್ಟುಗೂಡಿಸಿ ನೋಡಿದಾಗ 'ಆದಿಚುಂಚನಗಿರಿ' ಎಂದರೆ ''ವನಸ್ಪತಿ ಮೂಲದ ಗಿರಿವನಗಳಿಂದಾವೃತ್ತವಾದ ನಾಥ

ಪರಂಪರೆಯ ಭೈರವಾರಾಧನೆಯ ಆದಿಪೀಠ'' ಎಂಬುದು ಮನವರಿಕೆಯಾಗುತ್ತದೆ.

ಆದಿಚುಂಚನಗಿರಿ ಮಠದ ಎಪ್ಪತ್ತೊಂದನೆಯ ಪೀಠಾಧಿಪತಿಗಳಾದ ಪರಮ ಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು ''ಸಮಾಜ ಸೇವೆಯೇ ಭೈರವಪೂಜೆ'' ಎಂದು ಭಾವಿಸಿರುವರು, ಅದಕ್ಕೆ ತಕ್ಕಂತೆ ನಡೆದುಕೊಂಡು ಬರುತ್ತಿರುವರು. ''ಮಠಗಳಿರುವುದು ಗುರುಗಳಿಗಲ್ಲ, ಜನರಿಗೆ'' ಎಂಬ ಅವರ ಮಾತುಗಳಿಂದ ಮಠ ಸಮಾಜದ ನಡುವೆ ಇರಬೇಕಾದ ಸೌಹಾರ್ದ ಸಂಬಂಧವನ್ನು ಮನವರಿಕೆ ಮಾಡಿಕೊಳ್ಳಬಹುದಾಗಿದೆ.

ಇಲ್ಲಿಯವರೆಗೆ ಎಪ್ಪತ್ತು ಮಂದಿ ಪೀಠಾಧಿಕಾರಿಗಳಿದ್ದ ದಾಖಲೆ ಇರುವ ಆದಿಚುಂಚನಗಿರಿ ಮಠಕ್ಕೆ ''ಒಕ್ಕಲಿಗರೇ ಪೀಠಾಧಿಕಾರಿಗಳಾಗಬೇಕೆಂಬ ನಿಯಮವಿದ್ದರೂ'' ಅನ್ಯಮತಸ್ಥರೂ ಪೀಠಾಧ್ಯಕ್ಷರಾದ ನಿದರ್ಶನಗಳಿವೆ. ನಾಥ ಪಂಥದ ಜಾತ್ಯಾತೀತತೆಗೆ ಇದು ಸಾಕ್ಷಿಯಾದರೂ ಚುಂಚನಗಿರಿ ಮಠ ಒಕ್ಕಲಿಗರ ಮಠ ಎಂದೇ ಪ್ರಖ್ಯಾತಿ ಹೊಂದಿದೆ. ಇದು ಒಕ್ಕಲಿಗರ ಮಠವೇ ಹೌದು ಎಂಬುದಕ್ಕೆ ಅರವತ್ತೇಳನೇ ಪೀಠಾಧಿಪತಿಗಳಾಗಿದ್ದ ಶ್ರೀ ತೇಜೋನಾಥರು ೧೯೨೪ರಲ್ಲಿ ತಾವು ಶಿವೈಕ್ಯರಾಗುವ ಮೊದಲು ತಮ್ಮ ಉತ್ತರಾಧಿಕಾರಿಯ ಆಯ್ಕೆ ಕುರಿತು ಹೇಳುವಾಗ ''ಒಕ್ಕಲಿಗರೇ ಆದಿಚುಂಚನಗಿರಿ ಮಠದ ನಿಜವಾದ ವಾರಸುದಾರರು'' ಎಂದು ಹೇಳಿದ ದಾಖಲೆಗಳಿವೆ.

ನಾಥ ಮತದ ಆರಾಧ್ಯ ದೈವ ಶ್ರೀ ಕಾಲಭೈರವೇಶ್ವರ. ಆದಿ ಚುಂಚನಗಿರಿಯಲ್ಲೂ ಭೈರವೇಶ್ವರನಿಗೆ ಪ್ರಥಮ ಪಾಶಸ್ತ್ಯ. 'ಬಯಲು ಹೊಲಗಳ ಯಜಮಾನ'ನಾದ ಭೈರವನಿಗೆ ಕೃಷಿಕರೇ ಪ್ರಧಾನವಾಗಿ ಭಕ್ತರು. ಭೈರವೇಶ್ವರ ಮತ್ತು ಚುಂಚನಗಿರಿಯ ಬಗ್ಗೆ ವಿವಿಧ ಪುರಾಣಗಳಲ್ಲಿ ಉಲ್ಲೇಖಗಳಿವೆ. ಮನುಷ್ಯನ ಅಮೂರ್ತ ಭಾವನೆಗಳ ಮೂರ್ತ ರೂಪದ ಬೆಳವಣಿಗೆಯ ಒಂದು ಘಟ್ಟವಾಗಿರುವ ಪುರಾಣಗಳಲ್ಲಿ ಭೈರವೋತ್ಪತ್ತಿಯ ಕಾರಣಗಳನ್ನು ವೀಕ್ಷಿಸಿದಾಗ ಅನ್ಯಾಯ, ಅಧರ್ಮ, ಅಸಮಾನತೆಗಳ ವಿರುದ್ಧದ ಹೋರಾಟವೇ ಕಾಣಬರುತ್ತದೆ. 'ಆದಿಚುಂಚನಗಿರಿ ಸ್ಥಳ ಮಹಾತ್ಮೆ' ಸ್ಥಳೀಯ ಐತಿಹ್ಯವನ್ನುಳ್ಳ ಜನಾಂಗ ಪುರಾಣ. ಇದಲ್ಲದೆ ಸಂಚಾರಿ ಐತಿಹ್ಯ ಇನ್ನಿತರ ಪುರಾಣಗಳಲ್ಲೂ ಸಿಗುವ ಭೈರವೇಶ್ವರನ ಹಾಗೂ ಚುಂಚನಗಿರಿಯ ಕುರಿತಾದ ಮಾಹಿತಿಗಳು ಸ್ವಾರಸ್ಯಕರವಾಗಿವೆ.

## ಪೌರಾಣಿಕ ವಿವರಣೆ

ವೇದಕಾಲೀನ ಸಂಸ್ಕೃತಿಯ ನಂತರದ ರಾಮಾಯಣ, ಮಹಾಭಾರತಗಳ ಅವಧಿಯನ್ನು ಪೌರಾಣಿಕ ಸಂಸ್ಕೃತಿಯ ಕಾಲ ಎಂದು ಇತಿಹಾಸಕಾರರು ಗುರುತಿಸಿದ್ದಾರೆ. ಆದಿಚುಂಚನಗಿರಿಗೂ ಕ್ರಮೇಣ ಶ್ರೀರಾಮ ಹಾಗೂ ಅರ್ಜುನರ ಆಗಮನವಾಗಿದ್ದು ಶ್ರೀಕ್ಷೇತ್ರಕ್ಕೆ ಸಂಬಂಧಿಸಿದ ಘಟನೆಗಳು ಇವರಿಬ್ಬರೊಂದಿಗೆ ತಳುಕು ಹಾಕಿಕೊಂಡಿವೆ. ಶಿವ ಮತ್ತು ಶ್ರೀರಾಮರ ಭೇಟಿಯ ಪ್ರಸಂಗದಲ್ಲಿ ಶೈವ - ವೈಷ್ಣವ ಧರ್ಮಗಳ ಮುಖಾಮುಖಿಯನ್ನು ಮತ್ತು ಅರ್ಜುನ ಜೋಗಿಯಾಗಿ ಭೈರವನಿಗೆ ನಡೆದುಕೊಂಡ ಕತೆಯಲ್ಲಿ ಜೋಗಿ ದೀಕ್ಷೆಯ ಹಿರಿಮೆ, ಹಳಮೆಗಳನ್ನು ಕಾಣುತ್ತೇವೆ.

'ಸ್ಕಂದ ಪುರಾಣ'ದ ಪ್ರಕಾರ ಲೋಪಮುದ್ರೆಯನ್ನು ಶಿವ ನೋಡಿದನೆಂದು ಮುನಿದ ಶಿವೆಗೆ

ತಾನು ನಿರ್ಮಾಯ, ಕಾಮಾರಿ ಎಂದು ತೋರಿಸಲು ಚುಂಚನಗಿರಿಯಲ್ಲಿ ತಪಸ್ಸಿಗೆ ತೊಡಗಿದನಂತೆ. ನಂತರ ತನ್ನ ಯೋಗಶಕ್ತಿಯಿಂದ ಕಮಂಡಲದಲ್ಲಿ ಸಿದ್ಧಯೋಗಿಯನ್ನು ಸೃಷ್ಟಿಸಿ ತಾನು ಪಂಚರೂಪಿಯಾಗಿ ನೆಲೆ ನಿಂತನಂತೆ. ಆ ಸಿದ್ಧಯೋಗಿಯೇ ಆದಿಚುಂಚನಗಿರಿಯ ಸಿದ್ಧ ಸಿಂಹಾಸನದ ಪ್ರಥಮ ಪೀಠಾಧಿಕಾರಿ ಎಂಬ ಸಂಗತಿಯೊಂದಿಗೆ ಪ್ರಜಾಪೀಡಕರಾಗಿದ್ದ ಕಂಚ ಚುಂಚರನ್ನು ಸಿದ್ಧಯೋಗಿ ತನ್ನ ಯೋಗಶಕ್ತಿಯಿಂದ ನಿಯಂತ್ರಿಸಿದನೆಂದು 'ಆದಿಚುಂಚನಗಿರಿ ಸ್ಥಳ ಮಹಾತ್ಮೆ' ತಿಳಿಸುತ್ತದೆ. ಇದರಿಂದ ಸಿದ್ಧ ಪೀಠದ ಗುರಿ ಲೋಕ ಕಲ್ಯಾಣವೆಂಬುದು ಸ್ಪಷ್ಟವಾಗುತ್ತದೆ.

'ಶಂಕರ ಸಂಹಿತೆ'ಯಲ್ಲಿ ಪ್ರತಿಪಾದಿತವಾಗಿರುವುದೇನೆಂದರೆ - ತ್ರಿಮೂರ್ತಿಗಳಲ್ಲಿ ಶಿವನೇ ಜಗತ್ಕರ್ತನೆಂದು ವಿಷ್ಣ್ವಾದಿ ದೇವತೆಗಳೆಲ್ಲರು ಒಪ್ಪಿದರೂ ಬ್ರಹ್ಮ ಮಾತ್ರ ಅದನ್ನೊಪ್ಪದೆ ತಾನೇ ಶ್ರೇಷ್ಠನೆಂದು ಅಹಂಕಾರದಿಂದ ವರ್ತಿಸಿದಾಗ ಅವನ ಅಹಂಕಾರ ದಮನಕ್ಕೆಂದೇ ಈಶ್ವರನು ಭೈರವನನ್ನು ಸೃಷ್ಟಿಸುತ್ತಾನೆ. ಭೀಷಣ ರೂಪಿಯಾದ ಆತ ಭೀಕರವಾಗಿ (ಭೀರವ > ಭೈರವ - ಭೀಕರವಾಗಿ ಸದ್ದು ಮಾಡುವವನು) ಕಿರುಚುತ್ತಾ ಬ್ರಹ್ಮನ ಶಿರವನ್ನು ಛೇದಿಸಿದಾಗ ಧಾರಾಕಾರವಾಗಿ ರಕ್ತ ಸುರಿದು ಮೂರ್ಛೆ ಹೊಂದುತ್ತಾನೆ. ಪ್ರಜ್ಞೆ ಬಂದನಂತರ ತನ್ನ ತಪ್ಪಿಗೆ ಪಶ್ಚಾತ್ತಾಪಪಟ್ಟು, ಶಿವನ ಕ್ಷಮೆ ಯಾಚಿಸುತ್ತಾನೆ. ತನ್ನ ರುಂಡವನ್ನು ಭೈರವ ಸದಾಕಾಲ ಧರಿಸಬೇಕೆಂದೂ, ತನ್ನ ಕಪಾಲವನ್ನೇ ಭಿಕ್ಷಾಪಾತ್ರೆಯಾಗಿ ಹಿಡಿದು ರಕ್ತಭಿಕ್ಷೆ ಸ್ವೀಕರಿಸಬೇಕೆಂದೂ ಕೋರುತ್ತಾನೆ.

ಇಲ್ಲಿ ವೈದಿಕ -ಅವೈದಿಕ ಧರ್ಮಗಳೊಂದಿಗಿನ ಸೆಣಸಾಟ, ಏಕವ್ರಾತ್ಯನೆಂದೇ ಹೆಸರಾದ ಶಿವನ ಪ್ರಾಬಲ್ಯ ಹಾಗೂ ಜೋಗಿ ದೀಕ್ಷೆಯ ಸಂದರ್ಭದಲ್ಲಿ ರಕ್ತ ಬರುವವರೆಗೆ ದೀಕ್ಷೆ ಪಡೆಯುವ ವಟುವಿನ ಕಿವಿಚುಚ್ಚುವ ಆಚರಣೆಗಳನ್ನು ಗುರುತಿಸಬಹುದುದಾಗಿದೆ.

'ಭೈರವೇಶ್ವರನು ಪರಶಿವನ ಅವತಾರವಲ್ಲದೆ ಬೇರೆ ಅಲ್ಲ' ಎಂಬ ಮಾತು ಶಿವಪುರಾಣದ 'ಶತರುದ್ರ ಸಂಹಿತೆ'ಯಲ್ಲಿ ಬರುತ್ತದೆ. ಶಿವನ ಶರಭರೂಪಿಯಾದ ಶರೀರ ಮಧ್ಯಮದಿಂದ ಭೈರವ ಅವತರಿಸಿದನೆಂದು 'ಮಾರ್ಕಂಡೇಯ ಪುರಾಣ'ದ ಮಾತು.

ಬ್ರಹ್ಮ ತನ್ನ ಮಗಳಾದ ಶಾರದೆಯನ್ನೇ ಮೋಹಿಸಿ ಬೆನ್ನಟ್ಟಿದಾಗ ವ್ಯಗ್ರಳಾದ ಶಾರದೆ, ನಿನಗೆ ಐದು ಮುಖಗಳ ಬದಲು ನಾಲ್ಕು ಮುಖಗಳಿರುವುದೇ ಲೇಸು ಎಂದು ಮಾಯವಾದಳಂತೆ. ಆಗ ಬ್ರಹ್ಮನ ಮೋಹಾಗ್ನಿ ಕ್ರೋಧಾಗ್ನಿಯಾಗಿ ಭುಗಿಲಾದಾಗ ಶಿವನ ಆಣತಿಯಂತೆ ಭೈರವ ಮೈದೋರಿ ಬ್ರಹ್ಮನ ಒಂದು ಶಿರವನ್ನು ಕತ್ತರಿಸಿದನಂತೆ. ಭಯಗೊಂಡ ಬ್ರಹ್ಮ ಭೈರವನನ್ನು ಸ್ತುತಿಸಿ ಶಾಂತಗೊಳಿಸಿದಾಗ 'ಸತ್ಕಾರ್ಯದಲ್ಲಿ ತೊಡಗು' ಎಂದು ಭೈರವ ಆದೇಶಿಸಿದನಂತೆ. ಅಂದಿನಿಂದ ನಾಲ್ಕು ವೇದಗಳ ಪ್ರತೀಕವಾಗಿ ಬ್ರಹ್ಮನಿಗೆ ನಾಲ್ಕು ಶಿರಗಳಿದ್ದ ಸಂಗತಿ 'ಭವಿಷ್ಯ ಮಹಾಪುರಾಣ'ದ್ದಾಗಿದೆ. ಬ್ರಹ್ಮನ ಅನೈತಿಕತೆಯನ್ನು ಖಂಡಿಸಿ ನೈತಿಕತೆಗೆ ಒತ್ತುಕೊಟ್ಟ ನಾಥ ಪಂಥದ ನಿಲುವು ಇಲ್ಲಿ ಇಣುಕಿದೆ.

'ವಾಮನಪುರಾಣ'ದ ಎಪ್ಪತ್ತನೇ ಅಧ್ಯಾಯದಲ್ಲಿ ಬರುವಂತೆ ಶಿವ ಮತ್ತು ಅಂಧಕಾಸುರನ ಸೆಣಸಾಟದಲ್ಲಿ ಅಂಧಕಾಸುರ ಗದೆ ಶಿವನ ತಲೆಗೆ ತಗುಲಿ ರಕ್ತ ಸುರಿದು ಎಂಟು ಕವಲಾದಾಗ ಅಷ್ಟ ಭೈರವರು ಸೃಷ್ಟಿಗೊಂಡು ಅಂಧಕಾಸುರನನ್ನು ವಧಿಸಿದರಂತೆ. ಶಿವನ ರಕ್ತದಿಂದಲೇ ರೂಪ ತಳೆದ

ಅಷ್ಟ ಭೈರವರೆಂದರೆ - ಆದಿ ಭೈರವ, ಕಪಾಲ ಭೈರವ, ರುರು ಭೈರವ, ಕ್ರೋಧ ಭೈರವ, ಚಂಡ ಭೈರವ, ಉನ್ಮತ್ತ ಭೈರವ, ಭೀಷಣ ಭೈರವ, ಸಾತ್ವಿಕಭೈರವ. ನಂತರ ಕಡುಉಗ್ರನಾದ ಆದಿಭೈರವನನ್ನು ಎಲ್ಲರೂ ಸ್ತುತಿಸಿದರಂತೆ. ಇಲ್ಲಿಯೂ ದುಷ್ಟಸಂಹಾರ ನಿಮಿತ್ತವೇ ಭೈರವ ಅವತಾರವಾಯಿತೆಂಬ ತತ್ವವಿದೆ. ಹಿಂದೂಗಳ ಪವಿತ್ರ ಕ್ಷೇತ್ರವಾದ ಕಾಶಿಯ ಕ್ಷೇತ್ರಪಾಲಕನಾದ ಕಾಲಭೈರವೇಶ್ವರ ಖೂಳರನ್ನು ನಾಶ ಮಾಡಿ, ಧರ್ಮವನ್ನು ಸಂರಕ್ಷಿಸುವ 'ಧರ್ಮದೇವತೆ'ಯೆಂದೇ ಪ್ರಸಿದ್ಧ. ಕ್ರಿ.ಶ. ಎಂಟನೇ ಶತಮಾನದ ಆದಿಶಂಕರಾಚಾರ್ಯ ವಿರಚಿತ 'ಭೈರವಾಷ್ಟಕ'ದಲ್ಲಿ ವ್ಯಕ್ತವಾದ ಭೈರವ ಲೀಲಾ ವಿಶೇಷಗಳಲ್ಲಿ ಈ ಅಂಶವೇ ಧ್ವನಿಸುತ್ತದೆ.

ಭೈರವನ ಸ್ವರೂಪ ವರ್ಣನೆ 'ವಿಷ್ಣುಧರ್ಮೋತ್ತರ ಪುರಾಣ'ದಲ್ಲಿ ವಿವರವಾಗಿದೆ. ಪಿಂಗಲನೇತ್ರ, ಕಟವಾಯಿಯಲ್ಲಿ ಕೋರೆದಾಡೆಗಳು, ಕೋಪದಿಂದ ಹೊಳ್ಳೆಗಳು ಅರಳಿದ ನಾಸಿಕ, ಸ್ಥೂಲೋದರ. ರುಂಡಮಾಲಾಧರ, ಸರ್ಪಭೂಷಣ, ಕೃಷ್ಣವರ್ಣ, ಗಜಚರ್ಮಾಂಬರಧಾರಿ, ಶೃಂಗ, ತ್ರಿಶೂಲ ಮೊದಲಾದ ಆಯುಧಗಳನ್ನು ಹಿಡಿದ ತಾಳ ವೃಕ್ಷದಂತೆ ನೀಳಬಾಹುಗಳನ್ನು ಹೊಂದಿದ್ದ ಕೈಗಳಲ್ಲಿ ಹರಿತ ನಖಗಳಿದ್ದ ಭೈರವ ಎದುರಿನಿಂದ ಮಹಾಕಾಲರೂಪಿಯಾಗಿದ್ದು ಎರಡು ಕೈಗಳಲ್ಲಿ ದಂಡ ಮತ್ತು ಮಾದಲ ಫಲಕವನ್ನು ಹಿಡಿದಿದ್ದಾನೆ. ದಂಡ ಮೃತ್ಯುವಿಗೆ, ಮಾದಲ ಫಲ ಸೃಷ್ಟಿಗೆ ಸಂಕೇತವಾಗಿದ್ದು ಭೈರವ ಸೃಷ್ಟಿ-ಲಯಗಳ ಕಾರಣಕರ್ತನೆಂಬುದನ್ನು ಇದು ಸೂಚಿಸುತ್ತದೆ. ಭೈರವೇಶ್ವರನ ಎಡಪಕ್ಕ ಪಾರ್ವತಿ ಇರಬೇಕು, ಎದುರು ಇರಬಾರದು. ಅವಳ ಕೈಯಲ್ಲಿ ಸರ್ಪವಿರಬೇಕು. ಆಕೆ ಕೆಂಪಾಗಿಯೂ, ಬಿಳುಪಾಗಿಯೂ ಇರಬಾರದು. ಮಾತೃಗಣ ಹಾಗೂ ಅನೇಕ ರೂಪಿಗಣಗಳನ್ನು ಪರಿಜನ ವರ್ಗದಲ್ಲಿ ಚಿತ್ರಿಸಬೇಕು ಎಂಬುದಾಗಿ ಶಾಸ್ತ್ರೀಯ ವರ್ಣನೆಯಿದೆ.
ಈ ಎಲ್ಲಾ ಪುರಾಣ ಸಂಗತಿಗಳಿಂದ ಸ್ಫುಟಗೊಳ್ಳುವ ಪ್ರಮುಖ್ಯ ಅಂಶಗಳೆಂದರೆ :

೧. ಬ್ರಹ್ಮನ ಗರ್ವಭಂಗದ ಮುಖ್ಯ ಉದ್ದೇಶವೇ ಭೈರವಾವತಾರದ ಮೂಲ. (ನಾಥ ಪಂಥ ಅವೈದಿಕ ಭಕ್ತಿ ಚಳವಳಿ).
೨. ವಿಷ್ಣುವೂ ಭೈರವನಿಗೆ ಮಣಿದದ್ದು (ಶಿವಪಾರಮ್ಯದ ಸಂಕೇತ).
೩. ಲೋಪಾಮುದ್ರೆ ಪ್ರಸಂಗದಲ್ಲಿ ಯೋಗಸಿದ್ಧಿಯಿಂದ ಮಾಯೆಯನ್ನು ಗೆಲ್ಲಬಹುದೆಂಬ ಅಂಶ. (ನಾಥಪಂಥದಲ್ಲಿ ಬ್ರಹ್ಮಚರ್ಯಕ್ಕೆ, ಯೋಗಕ್ಕೆ ದೊರೆತ ಪ್ರಾಮುಖ್ಯ).
೪. ದುಷ್ಟ ಶಿಕ್ಷಕ ಶಿಷ್ಟ ರಕ್ಷಕನಾದ ಭೈರವ ಧರ್ಮದೇವತೆ.
೫. ಮಹೇಶ್ವರನ ಪರ್ಯಾಯ ರೂಪವೇ ಭೈರವ. ಆದಿರುದ್ರನಾದ ಇವನ ಪತ್ನಿ ಪಾರ್ವತಿ (ಸ್ಥಂಬಾಂಬೆ > ಕಂಬದಮ್ಮ) ಪ್ರೇಯಸಿ ಗಂಗೆ (ಪಾಳಮ್ಮ).

'ಆದಿಚುಂಚನಗಿರಿ ಸ್ಥಳ ಮಹಾತ್ಮ್ಯ'ದಲ್ಲಿ ನಾಥ ಪೀಠಾಧಿಪತಿಗಳು ಶಿಷ್ಯರಿಗೆ ನೀಡುತ್ತಿದ್ದ ನಾಥದೀಕ್ಷಾ ವಿಧಾನವನ್ನು ಋಷ್ಯಶೃಂಗನಿಗೆ ದೂರ್ವಾಸ ಮುನಿ ಹೇಳಿದಂತೆ ತಿಳಿಸಲಾಗಿದೆ. ಅದರ ಪ್ರಕಾರ ಶಿಷ್ಯನಿಗೆ ದೀಕ್ಷೆ ನೀಡುವ ಮಠಾಧಿಪತಿಯು ನದೀಸ್ನಾನದಿಂದ ಶುಭ್ರನಾಗಿ ಭೈರವಸ್ವರೂಪವಾದ ಶಿವನನ್ನು ಭಕ್ತಿಯಿಂದ ಪೂಜಿಸಬೇಕು. ಗೋಮಯದಿಂದ ಶುಭ್ರಗೊಳಿಸಿದ ಸ್ಥಳದಲ್ಲಿ ಮಧ್ಯದಲ್ಲಿ

ಒಂದು ಕಲಶ, ನಾಲ್ಕು ದಿಕ್ಕುಗಳಿಗೆ ನಾಲ್ಕು ಕಲಶಗಳನ್ನಿರಿಸಬೇಕು. ಮಧ್ಯದ ಕಲಶ ಬ್ರಹ್ಮನಿಗೆ, ಪೂರ್ವ ದಿಕ್ಕಿನ ಕಲಶ ಇಂದ್ರನಿಗೆ, ದಕ್ಷಿಣ ದಿಕ್ಕಿನ ಕಲಶ ಯಮನಿಗೆ ಹಾಗೂ ಪಶ್ಚಿಮದ್ದು ವರುಣನಿಗೆ, ಉತ್ತರ ದಿಕ್ಕಿನದು ಕುಬೇರ ಮತ್ತು ಚಂದ್ರನಿಗೆ ಪ್ರತೀಕವಾಗಿದೆ. ಜೋಗಿ ದೀಕ್ಷೆಯ ಜಾನಪದೀಯ ವಿವರದಲ್ಲಿ ಬ್ರಹ್ಮಕಲಶ ಹಾಗೂ ದಿಕ್ಪಾಲಕರ ಕಲಶವಿರುವುದಿಲ್ಲ. ಬದಲಾಗಿ ಶಿವನ ಪ್ರತೀಕವಾಗಿ ತ್ರಿಶೂಲ ಹಾಗೂ ಶಕ್ತಿಯ ಪ್ರತೀಕವಾಗಿ ಕಲಶ ಪೂಜೆಯಿರುತ್ತದೆ. ಆಗಮೋಕ್ತ ದೀಕ್ಷೆಯಲ್ಲಿ ವೈದಿಕ ಪ್ರಭಾವವಿದ್ದರೆ ಜಾನಪದದಲ್ಲಿ ದೇಸಿ ಆಚರಣೆಗಳೊಂದಿಗೆ ನಾಥ ಪಂಥದ ನಾಡಿಮಿಡಿತವಾದ ಶಿವ-ಶಕ್ತಿಯರ ಒಕ್ಕೂಟ ಪೂಜೆಯನ್ನು ಗುರುತಿಸಬಹುದಾಗಿದೆ.

ಕಿವಿ ಚುಚ್ಚುವುದು ಜ್ಞಾನೇಂದ್ರಿಯಗಳನ್ನು ಉದ್ದೀಪಿಸುವ ವೈಜ್ಞಾನಿಕ ರೀತಿ. ಸನ್ಯಾಸ ದೀಕ್ಷೆ ಸನ್ಯಾಸಿಯಾದವನಿಗೆ ಮರುಹುಟ್ಟಿನಂತೆ. ಅದರ ಕುರುಹಾಗಿ ಗುರುವಿನಿಂದ ಶಿಷ್ಯನಿಗೆ ಹೊಸ ಉಡುಗೆ-ತೊಡುಗೆಗಳ ಸಂದಾಯವಿರುತ್ತದೆ.

ಜಾನಪದದಲ್ಲಿ ಭೈರವ ಪಂಥ ಜನಮನದ ಹಾಡಾಗಿ, ಭಕ್ತಿಯ ಹೊನಲಾಗಿ, ಆತ್ಮೀಯತೆಯ ಕಂಪಾಗಿ ಹರಿದು ಹರಡಿದೆ. ಜಾನಪದೀಯ ನೆಲೆಗಟ್ಟಿನಲ್ಲಿ ಶ್ರೀ ಕ್ಷೇತ್ರದ ಹಾಗೂ ಭೈರವೇಶ್ವರನ ವರ್ಣನೆ ತನಿಬನಿಯಾಗಿ ಮೂಡಿಬಂದಿದೆ.

## ಜಾನಪದೀಯ ನಂಬಿಕೆಗಳ ಹಿನ್ನಲೆಯಲ್ಲಿ ಶ್ರೀಕ್ಷೇತ್ರ

ಜನಪದ ಸಾಹಿತ್ಯವೆಂದರೆ ಕಂಠಸ್ಥ ಪರಂಪರೆಯ ಅಲಿಖಿತ ಶಾಸನಗಳು. ಒಂದು ನಾಡಿನ ಪ್ರಾಮಾಣಿಕವಾದ ಸಾಂಸ್ಕೃತಿಕ ಚರಿತ್ರೆಗೆ ಬೇಕಾದ ಸಾಮಾಗ್ರಿಗಳನ್ನು ಜನಪದದಿಂದ ಧಾರಾಳವಾಗಿ ಪಡೆಯಬಹುದಾಗಿದೆ. ಜನಪದದ ಧಾರ್ಮಿಕತೆಯ ನೆಲೆ ಇರುವುದೇ ನಂಬಿಕೆಗಳ ಆಚರಣೆಯಲ್ಲಿ. ಹಾಗಾಗಿ ಅವರ ಯಾವುದೇ ನಂಬಿಕೆಯ, ಆಚರಣೆಯ ಹಿಂದೆ ಒಂದು ಸ್ಪಷ್ಟವಾದ ಉದ್ದೇಶ, ಮಹತ್ವದ ತತ್ವ ಇದ್ದೇ ಇರುವುದು.

'ಅಲೌಕಿಕ ಶಕ್ತಿಗಳ ಬಗ್ಗೆ ವಿಸ್ಮಿತಗೊಂಡ ಮಾನವ ಮನಸ್ಸು ಅವುಗಳ ರಹಸ್ಯವನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದಾಗ ಉಂಟಾದ ಅನುಭವಗಳೇ ಧಾರ್ಮಿಕ ಹಾಡಾಯಿತು'' ಎಂದು ಜಾನಪದ ತಜ್ಞರಾದ ಸಿ.ಎಂ. ಬೌರ ಅವರು ಹೇಳಿದ್ದಾರೆ. ಗುರುರೂಪಿ, ಚೇಳೂರ ಕಂಬದಯ್ಯ, ಅಂದಾನಿ ಭೈರುವ 'ಎಲ್ಲವನೆಲ್ಲವನೆಂದು' ಹುಡುಕುತ್ತಾ 'ನಾಗಮಂಗಲದಾಚೆ ಬೆಳ್ಳೂರ ಬಯಲಾಚೆಯ ಚುಂಚನಗಿರಿಯಲ್ಲಿ ದೊರೆತನ ಮಾಡುವ ಭೈರವ'ನನ್ನು ಕಾಣುತ್ತಾನೆ. ಆತನಾದರೋ 'ಚುಂಚನಕಟ್ಟೆಯಿಂದ ಬಡಗಲ ಸೀಮಿಂದ ಬಂದ ಪಂಚಮುಖದ ದೋರುಗೆಂಪಿನ ಪರದೇಸಿ...' 'ಅಗ್ರಾರಕಿಂತ ಲೇಸೆಂದು' ಚುಂಚನಗಿರಿಯಲ್ಲಿ ನೆಲೆ ನಿಂತ ಸ್ವಾಮಿಗೆ 'ಸಿರಿಮಠ ಕಟ್ಟಿಲು ಬಯಸಿದ ಭಕ್ತರು ಅಂದ ಚೆಂದದ ಚುಂಚನಗಿರಿಯಲ್ಲಿ ಆದಿಭೈರವನನ್ನು' ನೆಲೆಗೊಳಿಸುತ್ತಾರೆ.

'ತೇರುಕರಿಯ ತೇರು ಯಾರ್ಯಾರು ನೂಕಿದ್ರೂ ಮುಲಕದ ತೇರನ್ನು' ಭಕ್ತಿಯಿಂದ ಎಳೆದು ಸಂಭ್ರಮದಿಂದ ನಲಿಯುತ್ತಾರೆ. 'ಭರ್ಜರಿ ತೇರಿನ ಅಂದಗಾರ ಭೈರುವ'ನಿಗೆ 'ಕುಟ್ಟಕ್ಕಿ, ಸಣ್ಣಕ್ಕಿ

ಪೇರ ಹೊಡಕೊಂಡು ಅಡ್ಡೇರಿ ಜೇನುತುಪ್ಪ ಹೆಡಗೇಲಿ ಹಣ್ಣುಕಾಯಿ ಹೊತ್ಕೊಂಡು' ಬಂದು ಸಮೃದ್ಧ ಕಾಣಿಕೆ ನೀಡಿ ಸಂತೃಪ್ತರಾಗುತ್ತಾರೆ. ಬೆಟ್ಟದ ಭೈರುವ, ಚುಂಚನಗಿರಿ ಭೈರುವ, ಅಂದಾನಿ ಭೈರುವ, ಮನೆಸ್ವಾಮಿ ಭೈರುವ, ಬಾಗಿಲು ಭೈರುವ ಎಂದೆಲ್ಲಾ ಜನಪದದಿಂದ ಕರೆಸಿಕೊಂಡ ಭೈರವೇಶ್ವರ ಗುರುವಾಗಿ, ಮದಲಿಂಗನಾಗಿ, ಅಣ್ಣನಾಗಿ ಭಕ್ತರನ್ನು ತಣಿಸಿ ಅವರ ಪಾಲಿನ ನೆಂಟನೂ ಆಗಿದ್ದಾನೆ.

ಚುಂಚಾನಗಿರಿಯಾಗೆ ನಮಗಾರೆ ನೆಂಟರು
ಭೈರುವ ಸ್ವಾಮಿ ದೊಡ್ಡಣ್ಣ ಇರುವಾಗ
ನಾನು ಇನ್ನೊಂದು ಇರುಳು ಇರುವೇನು

ಎನ್ನುವಲ್ಲಿ ದೇವರನ್ನು ಆತ್ಮೀಯವಾಗಿ ಕಂಡ ಭಕ್ತಿಭಾವ, ಸ್ನೇಹ ಸಲಿಗೆಗಳು ವ್ಯಕ್ತವಾಗಿದೆ. ಇಂತಹ ಅನೇಕ ತ್ರಿಪದಿಗಳಲ್ಲಿ ಭೈರವೇಶ್ವರನ ಲೀಲಾ ಮಹಿಮೆಗಳು ಸಹಜ ಸುಂದರವಾಗಿ ಹೆಪ್ಪುಗಟ್ಟಿವೆ.

ಬ್ರಹ್ಮಹತ್ಯಾದೋಷದಿಂದ ಭೂಮಿಗೆ ಬಂದ ಭೈರುವ ಸೇದಿ ಬಿಟ್ಟ ಭಂಗಿಯ ಹೊಗೆಯಿಂದ ಗರ್ಭಿಣಿಯಾದ ಲಕ್ಷ್ಮಿ ಭೈರವನ ಬಳಿ ಬಂದು ವಿಷಯ ತಿಳಿಸಿ 'ಪ್ರೀತಿಗೆ ಪತಿಬೇಕು, ಸೇವ್ಯಕೆ ಸತಿ ಬೇಕು' ಎಂದಾಗ ಭೈರವ 'ನೀನಾರೋ ನಾನಾರೋ... ಜೋಗಿಗು, ರೋಗಿಗು ಹೆಂಡತಿ ಯಾಕಮ್ಮಾ... ಬಂದ ದಾರಿಲೆ ಹಿಂದಕೆ ಹೋಗು...' ಎಂದುಬಿಡುತ್ತಾನೆ. ಅವಳು ದುಃಖ, ಕೋಪಗಳಿಂದ ತನ್ನ ಅಣ್ಣ ಚುಂಚನ ಹತ್ತಿರ ಹೋಗಿ ಇದನ್ನು ತಿಳಿಸಿದಾಗ ಪ್ರೀತಿಯ ತಂಗಿಗೆ ಅಪಮಾನಿಸಿದ ಭೈರುವನಿಗೆ ಬುದ್ಧಿ ಕಲಿಸಲು ಬರುತ್ತಾನೆ.

ಪರಾಕ್ರಮಿಯೂ, ಮೃಗದೇಹಿಯೂ ಆತ ಚುಂಚ ಭೈರವನ ಭಕ್ತ. ಹೋರಾಟದಲ್ಲಿ ಚುಂಚನ ಕೋಡನ್ನು ಭೈರವ ಮುರಿದಾಗ ಈತ ತನ್ನ ಆರಾಧ್ಯ ದೈವ ಭೈರವನೇ ಎಂದು ಭಕ್ತಿಯಿಂದ ಚುಂಚ ಮಣಿಯುತ್ತಾನೆ. ಇಲ್ಲಿ ಭೈರವನ ಅಧೀನತೆಗೆ ಚುಂಚ ಒಳಗಾದ ಚಿತ್ರಣವನ್ನೇ ಗುರುತಿಸುತ್ತೇವೆ.

ಚುಂಚ ತನ್ನ ಸ್ವಾಮಿಗೆ ತಟ್ಟಿದ ಬ್ರಹ್ಮಕಪಾಲ ಬಾಧೆಯನ್ನು ನಿವಾರಿಸಲು ಶ್ವಾನ ರೂಪವನ್ನು ತಾಳಿ ಬ್ರಹ್ಮಕಪಾಲಕ್ಕೆ ಬಾಯಿ ಹಾಕಲು ಬಂದಾಗ ಅದು ಹೆದರಿ ಭೈರವನ ಬೆರಳಿನಿಂದ ತಾನೇ ಕಳಚಿ ಬೀಳುತ್ತದೆ. ನೋವು ನಿವಾರಿಸಿದ ಚುಂಚನ ಬಗ್ಗೆ ಸಂಪ್ರೀತನಾದ ಭೈರವ ಮೂರು ವರಗಳನ್ನು ನೀಡುತ್ತಾನೆ. ಆ ಪ್ರಕಾರ ಭೈರವೇಶ್ವರ ಚುಂಚನಗಿರಿಯಲ್ಲೇ ನೆಲಸಿ, ಅವನ ತಂಗಿ ಲಕ್ಷ್ಮಿಯನ್ನು ವಿವಾಹವಾಗಿ, ಚುಂಚನ ಕೊಂಬನ್ನೇ ತನ್ನ ಕೈಯಲ್ಲಿ ಸದಾ ವಾದ್ಯವಾಗಿಟ್ಟುಕೊಳ್ಳುತ್ತಾನೆ.

ಮುಂದೆ ಲಕ್ಷ್ಮಿಯ ಅಕ್ಕ ಗಂಗೆಮಾಳಿಯನ್ನು ಪ್ರೇಮಿಸಿ ತನ್ನನ್ನು ಒಲ್ಲದೆ ಸೊಕ್ಕಿದ ಅವಳನ್ನು ಚುಂಚನಗಿರಿಗೆ ಹೊತ್ತು ತರುವಲ್ಲಿ ಭೈರವನ ಗಂಡು ರಸಿಕತೆಯನ್ನು ಕಾಣಬಹುದು. ಆದರೆ ತನ್ನ ಅಕ್ಕನನ್ನೇ ಸವತಿಯಾಗಿ ಮನೆ ತುಂಬಿಸಿಕೊಳ್ಳಲು ಇಚ್ಛಿಸದ ಲಕ್ಷ್ಮಿ ಕಂಬದ ರೂಪ ತಾಳಿ ನಿಲ್ಲುತ್ತಾಳೆ. ಅವಳೇ ಕಂಬದಮ್ಮ, ಸ್ತಂಭಾಂಬೆ ಎಂದು. ಗಂಗೆ ಮಾಳಮ್ಮನಾಗಿ ಭೈರವನೊಂದಿಗೆ ಚುಂಚನಗಿ

ಯಲ್ಲಿ ನೆಲೆಸಿದರೆಂದೂ ಕತೆಯಿದೆ. ಈ ಪ್ರಸಂಗದಿಂದ ಭೈರವನೇ ಶಿವ, ಕಂಬದಮ್ಮಳೇ ಪಾರ್ವತಿ, ಮಾಳಮ್ಮನೇ ಗಂಗೆಯೆಂದು ಪರಿಭಾವಿಸಲಾಗಿದೆ.

ಚೋಳರಿಗೂ ಹಾಗೂ ಚೋಳರು ಆಳಿದ ಚೋಳೂರಿಗೂ ಪ್ರದೇಶ ಮತ್ತು ಆದಿಚುಂಚನಗಿರಿಗೂ ಇರುವ ನಿಕಟ ಸಂಬಂಧ ಜಾನಪದದಲ್ಲಿ ಕಾಣಸಿಕೊಂಡಿದೆ. ಚೋಳರು ಭೈರವನ ಭಕ್ತರಾಗಿದ್ದರೆಂಬುದಕ್ಕೆ ದ್ಯೋತಕವಾಗಿ ಆದಿಚುಂಚನಗಿರಿಯ ತುತ್ತ ತುದಿಯಲ್ಲಿರುವ ಚೋಳೂರ ಕಂಬವೇ ಸಾಕ್ಷಿ. ಬಹು ಹಿಂದೆ ಆ ಕಂಬದ ಮೇಲೆ ಹಚ್ಚಿದ ದೀಪ ಅಲ್ಲಿಂದ ಅನತಿ ದೂರದಲ್ಲಿರುವ ಚೋಳೂರ ಕಲ್ಯಾಣಿಯಲ್ಲಿ ರಥೋತ್ಸವದಂದು ಪ್ರತಿಬಿಂಬಿಸಿದಾಗಲೇ ಚೋಳೂರ ಜನ ಪಾರಣೆ ಮಾಡುತ್ತಿದ್ದರಂತೆ. ಆರಣಿ ರಾಜ, ಅವನ ಮಗ ದೀಪಕ ರಾಜನ ಕತೆಯಲ್ಲಿ ಚುಂಚನಗಿರಿಗೆ ಚೋಳರು ಸಲ್ಲಿಸಿದ ಸೇವೆ, ಭೈರವನ ಮಹಿಮೆ ಹಾಗೂ ಜೋಗಿ ಪದ್ಧತಿ ಹಿರಿಮೆಗಳನ್ನು ಅರಿಯಬಹುದಾಗಿದೆ.

ತಿರುಪತಿ ತಿಮ್ಮಪ್ಪ ಮತ್ತು ಭೈರವನ ಪಗಡೆಯಾಟದ ಪ್ರಸಂಗ, ತಿಮ್ಮಪ್ಪ ಮೋಸದಿಂದ ಭೈರವನನ್ನು ಕೂಡಿ ಹಾಕಿದಾಗ ಅದಕ್ಕೆ ಪ್ರತಿಯಾಗಿ ಭೈರವ ತನ್ನ ಸತ್ವದಿಂದ ತಪ್ಪಿಸಿಕೊಂಡು ತಿಮ್ಮಪ್ಪನ ರಥವನ್ನು ಕದ್ದು ತಂದಿದ್ದು ಶೈವ-ವೈಷ್ಣವ ಸಂಘರ್ಷದ ಪ್ರತೀಕವಾಗಿದೆ.

ಮೂಲಸ್ವಾಮಿ (ಮಠಾಧಿಪತಿ), ಚರಸ್ವಾಮಿಗಳು (ನಾಲ್ಕು ದಿಕ್ಕುಗಳಿಗೂ ಚರಿಗೆಗೆ ಹೋಗುತ್ತಿದ್ದರು), ಸುಬೇದಾರ (ಜಿಲ್ಲಾಮಟ್ಟ), ಚೂರಿದಾರ (ತಾಲ್ಲೂಕು ಮಟ್ಟ), ಪುರುಷಯ್ಯ (ಹೋಬಳಿ), ಜೋಗಯ್ಯ (ಹಳ್ಳಿ) (ಜೋಗಯ್ಯನನ್ನು ಪುರುಷಕಾರಿ ಎಂದೂ ಕರೆಯುತ್ತಾರೆ) - ಹೀಗೆ ಜೋಗಿ ದೀಕ್ಷೆ ಪಡೆದವರ ಕ್ರಮಬದ್ಧ ಸ್ಥಾನಗಳಿವೆ.

ಸಾಮಾನ್ಯವಾಗಿ ಗುರುಪೂರ್ಣಿಮೆ, ಶಿವರಾತ್ರಿ ಜಾತ್ರೆಗಳಂದು ಗುರುವಾರ ಅಥವಾ ಭಾನುವಾರಗಳಂದು ಶ್ರೀಕ್ಷೇತ್ರ ಆದಿಚುಂಚನಗಿರಿಯಲ್ಲೋ ಇಲ್ಲವೆ ಅವರವರ ಊರುಗಳಲ್ಲೋ ಮಠಾಧೀಶರಿಂದ ಅಥವಾ ಆಯಾ ಊರಿನ ಜೋಗಪ್ಪರಿಂದ ಜೋಗದೀಕ್ಷೆ ಪಡೆಯುತ್ತಾರೆ. ಜೋಗಿ ದೀಕ್ಷೆಯೂ ಹರಕೆ ರೂಪದಲ್ಲಿದ್ದು ವಂಶಪಾರಂಪರ್ಯವಾಗಿರುತ್ತದೆ. ಜೋಗಿಗಳು ಮಠ ಮತ್ತು ಸಮಾಜದ ನಡುವಿನ ಸೇತುವೆಯಂತಿದ್ದು ಭೈರವಾರಾಧಕರೂ, ಧಾರ್ಮಿಕ ಕಿಂಕರರೂ ಆಗಿರುತ್ತಾರೆ. ಗೃಹಸ್ಥಾಶ್ರಮ ಇವರಿಗೆ ನಿಷಿದ್ಧವಲ್ಲ. ಆದರೆ ಸನ್ಯಾಸಿಗಳು ಮಾತ್ರ ಬ್ರಹ್ಮಚರ್ಯನಿಷ್ಠರಾಗಿರಲೇಬೇಕೆಂಬ ಕಡ್ಡಾಯವಿದೆ. ಮದುವೆ, ಹಬ್ಬ, ಪೂಜೆ, ಹುಟ್ಟು-ಸಾವುಗಳ ಆಚರಣೆ, ಧಾರ್ಮಿಕ ಸಂದರ್ಭಗಳಲ್ಲಿ ಜೋಗಪ್ಪ ಮುಂದೆ ನಿಂತು ಎಲ್ಲಾ ಮಾಡಿಸುತ್ತಾನೆ. ಇಂತಲ್ಲೆಲ್ಲಾ ಅವನ ಹಾಜರಿ ಬೇಕೇ ಬೇಕಾಗುತ್ತದೆ ಊರಿನ ಜನರಿಗೆ. ಆದ್ದರಿಂದಲೇ ಜೋಗಪ್ಪ ಗೌರವಕ್ಕೆ ಪಾತ್ರನಾದ ವ್ಯಕ್ತಿ ಆಗಿರುತ್ತಾನೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಾಥ ಸಂಪ್ರದಾಯ ಅಥವಾ ಜೋಗಿ ಸಂಪ್ರದಾಯವನ್ನು 'ಪುರುಷಕಾರಿ ಸಂಸ್ಕೃತಿ' ಎಂದೇ ಕರೆಯುತ್ತಾರೆ. ಸೋಣದ ಜೋಗಿ ಕುಣಿತ ಅಲ್ಲಿನ ಜಾನಪದದ ವೈಶಿಷ್ಟ್ಯ. ಇದನ್ನು ಹೆಚ್ಚಾಗಿ 'ನಲಿಕೆ ಜಾತಿ'ಯವರು ನಡೆಸಿಕೊಂಡು ಬಂದಿದ್ದಾರೆ. ಬ್ರಹ್ಮ ಶಾರದೆಯನ್ನೇ ಮದುವೆಯಾಗಿ ಅಧರ್ಮ ಮಾಡಿದ ತಪ್ಪಿಗೆ ಶಿಕ್ಷೆಯಾಗಿ ಬ್ರಹ್ಮನ ಒಂದು ತಲೆಯನ್ನೇ

ಕತ್ತರಿಸಿದಾಗ ಅದು ಅವನ ಕೈಗೇ ಅಂಟಿಕೊಳ್ಳುತ್ತದೆ. ಭಿಕ್ಷಾಟನೆಯಿಂದ ಬ್ರಹ್ಮಕಪಾಲ ಕಳಚಿಬಿದ್ದ ನೆನಪಿಗೆ 'ಸೋಣದ ಕುಣಿತ' ಆಚರಿಸುತ್ತಾರೆ. ಭವಿಷ್ಯ ಮಹಾಪುರಾಣದ್ದು ಈ ಕತೆ. ಭೈರವರೂಪಿ ಶಿವ ಶ್ರಾವಣಮಾಸದಲ್ಲಿ ಭಿಕ್ಷೆ ಬೇಡಿದ್ದರಿಂದ 'ಸೋಣ' ಎನ್ನುವ ಹೆಸರೇ ಆ ಕುಣಿತಕ್ಕಾಯಿತು. ಇಲ್ಲಿನ ಮುಖ್ಯಧಾರಿಯೇ 'ಪುರುಷ ಜೋಗಿ'. ಶಿವನ ವೇಷ ಧರಿಸಿದ ಇವರ ಉಪನಾಮ 'ಪುರುಷ' ಎಂದೂ, ಇವರ ಸಂಸ್ಕೃತಿಯೇ 'ಪುರುಷಕಾರಿ ಸಂಸ್ಕೃತಿ' ಎಂದು ಹೆಸರಾಗಿದೆ.

ಹಳ್ಳಿಗಳಲ್ಲಿ ನಡೆಯುವ ಜೋಗಿ ದೀಕ್ಷೆಯಲ್ಲಿ ಮಾಡುವ ವಿಶೇಷ ಅಡುಗೆಗೆ (ಹೆಜ್ಜಟ್ಟಿ) ಮಾಂಸ, ಭಂಗಿ ಸೊಪ್ಪುಗಳನ್ನು ಬಳಸುವ ಪದ್ಧತಿಯಿದೆ. ಕಾರಣ-ಭೈರವ ಮಾಂಸಪ್ರಿಯ, ಮದಿರಾಪ್ರಿಯನಂತೆ. ಮಾನವ ತನಗೆ ಇಷ್ಟವಾದುದನ್ನೆಲ್ಲಾ ದೇವರೊಟ್ಟಿಗೆ ಸಮೀಕರಿಸುವ ಗುಣ ಇಲ್ಲಿದ್ದರೂ ಚುಂಚನಗಿರಿಯ ಭೈರವ ದೇವಾಲಯದಲ್ಲಿ ಶೈವಾಗಮ ಪದ್ಧತಿಗೆ ಅನುಗುಣವಾಗಿ ಪೂಜಾದಿ ಅಭಿಷೇಕಗಳು ಸಾತ್ವಿಕವಾಗಿ, ಮಂತ್ರ ಯುಕ್ತ ಕ್ರಮಬದ್ಧವಾಗಿ ನಡೆಯುತ್ತ ಬಂದಿದೆ.

ಮತ್ಸ್ಯೇಂದ್ರನಾಥ, ಗೋರಖನಾಥರಿಂದ ಮೊದಲಾಗಿ ಶ್ರೀ ಮಠದ ಇಂದಿನ ಪೀಠಾಧಿಪತಿಗಳಾದ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಅವರವರೆಗೂ ಜಾನಪದದಲ್ಲಿ ಗೀತೆಗಳಿವೆ.

ಆಗ ಹಾಕಿದ ಬಾಳೆ ಆಗಲೆ ಫಲ ಬಿಟ್ಟೊ
ಗೋರಕನಾಥಯ್ನ ಗುಡಿ ಮುಂದೆ ಬಿಟ್ಟ ಬಾಳೆ
ಹೊತ್ತಾರೆ ಪೂಜೆಗೆ ಹದವಾದೊ
ಗುರುವೆ ನಿನ್ನ ನೆನೆದು ಉರಿಯೊ ಕೆಂಡವ ಆರಿಸಿದೆ
ಎಡ ಎಡವಿ ಬರೊ ಸರ್ಪಕಾಳಿಂಗವ
ಹಿಡಿದೆ ಗುರುಗಂಗಾಧರ ನಿಮ್ಮ ದಯದಿಂದ

ಇಲ್ಲಿ ಆಧ್ಯಾತ್ಮ ಸಿದ್ಧಿಗೆ ನೆರವಾದ ಗುರು ಮಹಿಮೆಯನ್ನು ಕೃತಜ್ಞತೆಯಿಂದ ಸ್ಮರಿಸಿದ ಚಿತ್ರವಿದೆ. 'ಅರ್ಜುನ ಜೋಗಿ ಕತೆ' ಜೋಗಿ ಸಂಪ್ರದಾಯದ ಪ್ರಾಚೀನತೆ ಮತ್ತು ಪಾವಿತ್ರ್ಯಗಳನ್ನು ಸಾರುವಂತಿದೆ. ಒಟ್ಟಿನಲ್ಲಿ ಆದಿಚುಂಚನಗಿರಿಗೆ ಸಂಬಂಧಿಸಿದ ಜಾನಪದ ಸಾಹಿತ್ಯ ಶ್ರೀ ಕ್ಷೇತ್ರದ ಸಾಂಸ್ಕೃತಿಕ ಶ್ರೀಮಂತಿಕೆಯ ಒಂದು ಮುಖವಾಗಿದೆ.

## ಶಾಸನೋಲ್ಲೇಖಿತ ಶ್ರೀಕ್ಷೇತ್ರ ಹಾಗೂ ಭೈರವೇಶ್ವರ

ಇತಿಹಾಸದ ಪುನರ್ನಿರ್ಮಾಣಕ್ಕೆ ಪ್ರಮುಖ ಪ್ರಮಾಣವೆಂದರೆ -ಶಾಸನಗಳು. ಧರ್ಮದ ಉದಾತ್ತ ತತ್ವಗಳು ಸರ್ವರಿಗೂ ಸದಾಕಾಲ ತಿಳಿಯಲೆಂಬ ಸದಾಶಯದಿಂದ ಬ್ರಾಹ್ಮೀಲಿಪಿಯಲ್ಲಿ ಕೆತ್ತಲಾದ ಅಶೋಕನ ಶಾಸನದಿಂದಲೇ ಶಾಸನ ಚರಿತ್ರೆ ಪ್ರಾರಂಭವಾಗುತ್ತದೆ. ಹಾಗಾಗಿ ಧರ್ಮವೇ ಶಾಸನಗಳ ಹುಟ್ಟಿಗೆ ಮೂಲಭೂತ ಪ್ರೇರಕ ಶಕ್ತಿ. ಪ್ರಸಿದ್ಧ ಸಂಶೋಧಕರಾದ ಆರ್. ಎಸ್. ಪಂಚಮುಖಿಯವರು 'ಶಾಸನಗಳ ಉಗಮವಾಗಿರುವುದೇ ದಾನ ಶಾಸನಗಳಲ್ಲಿ' ಎಂದಿದ್ದಾರೆ.

ಗುಪ್ತರ ಕಾಲದಲ್ಲಿ ಹಿಂದೂ ಧರ್ಮದ ಪುನರುಜ್ಜೀವನವಾದ ಹಂತದಲ್ಲಿ ಮೂರ್ತಿಪೂಜೆ, ದೇವಾಲಯಗಳ ನಿರ್ಮಾಣ, ದತ್ತಿದಾನಗಳನ್ನು ಮಾಡುವುದು ಪವಿತ್ರ ಕಾರ್ಯವೆಂಬ ಭಾವನೆ ದಟ್ಟವಾಗಿ ರೂಪಗೊಂಡ ಪರಿಣಾಮವಾಗಿ ಕೊಟ್ಟ ದಾನದತ್ತಿಗಳು ಶಾಶ್ವತವಾಗಿ ಉಳಿಯಬೇಕೆಂಬ ಆಶಯದಿಂದಾಗಿ ಧರ್ಮಶಾಸನಗಳು ಅಧಿಕವಾದವು.

'ಶಾಸ್' ಧಾತುವಿನಿಂದ ನಿಷ್ಪತ್ತಿಯಾದ 'ಶಾಸನ' ಶಬ್ದಕ್ಕೆ ಅಪ್ಪಣೆ ಮಾಡು, ಘೋಷಣೆ ಹೊರಡಿಸು ಎಂದರ್ಥ. ಮಠ, ದೇವಾಲಯಗಳಿಗೆ ಸಂಪತ್ತನ್ನು ಯಾವ ರೂಪದಲ್ಲೇ ಆಗಲಿ ಕೊಡುಗೆ ಕೊಟ್ಟಿದ್ದು ದಾನ ಶಾಸನಗಳಲ್ಲಿರುತ್ತದೆ. ಎಲ್ಲಾ ತೆರಿಗೆಗಳಿಂದ ಮುಕ್ತವಾದ ದಾನ 'ಉಂಬಳಿ' (ಉದ್+ಬಲಿ=ಉಂಬಳಿ. ಬಲಿ =ಸುಂಕ, ಉದ್=ವಿಮುಕ್ತಿ) ಧರ್ಮಗುರುಗಳಿಗೆ, ಶಿಕ್ಷಣಕ್ಕೆ ನೀಡಿರುವ ದಾನವನ್ನು ತಾಮ್ರ ಶಾಸನಗಳಲ್ಲೂ ದಾಖಲಿಸಲಾಗಿದೆ.

ಶಾಸನಗಳಲ್ಲಿ ಐತಿಹಾಸಿಕ ಸಂಗತಿಗಳು ನಿಖರವಾಗಿ ಅರಿವಾಗುತ್ತದೆ. ಶ್ರೀಕ್ಷೇತ್ರ ಆದಿಚುಂಚನ ಗಿರಿಗೆ ಸಂಬಂಧಿಸಿದಂತೆ ಅನೇಕ ಶಾಸನಗಳು ದೊರಕಿವೆ. ಎಪಿಗ್ರಾಫಿಯಾ ಕರ್ನಾಟಕಾದಲ್ಲೂ ಅವು ಉಲ್ಲೇಖವಾಗಿವೆ. ಆದಿಚುಂಚನಗಿರಿಯಲ್ಲಿ ಅನ್ಯಮತ ಪ್ರಾಬಲ್ಯವನ್ನು ನಿವಾರಿಸಿ ನಾಥ ಪಂಥದ ಗುರುಗಳಿಗೆ ಮಹತ್ವ ನೀಡಿ ಮಠದ ಸಂರಕ್ಷಣೆ ಮಾಡುವಲ್ಲಿ ಚೋಳರ ಪಾತ್ರ ಮಹತ್ವದ್ದು. ಬೆಟ್ಟದ ಮೇಲಿರುವ 'ಚೇಳೂರ ಕಂಬ' ಈ ಮಾತಿಗೆ ಸಾಕ್ಷಿಯಾಗಿದೆ. ಗಂಗರು, ಹೊಯ್ಸಳರು, ವಿಜಯನಗರದ ಅರಸರು, ಯಲಹಂಕ ನಾಡಪ್ರಭುಗಳು, ಮೈಸೂರು ಒಡೆಯರು ಶ್ರೀಮಠದ ಪೋಷಕರಾಗಿದ್ದರೆಂಬ ವಿಷಯವನ್ನು ಇತಿಹಾಸ ದೃಢಪಡಿಸಿದೆ. ಆದಿಚುಂಚನಗಿರಿಗೆ ಸಂಬಂಧಿಸಿದ ಮುಖ್ಯ ಶಾಸನಗಳೆಂದರೆ:

೧. ಕ್ರಿ.ಶ. ೧೦೨೯ ಶಾಸನವೊಂದರಲ್ಲಿ ಮೊದಲ ಬಾರಿ ನಾಥ ಪಂಥದ ಪ್ರಸ್ತಾಪವಾಗಿದೆ. ಅದರಲ್ಲಿ ಹೆಸರಿಸಲಾದ 'ಶಿವನಾಥ' ಎಂಬುವನು ಚುಂಚನಗಿರಿಯ ಈವರೆಗಿನ ಎಪ್ಪತ್ತೊಂದು ಮಂದಿ ಪೀಠಾಧಿಪತಿಗಳಲ್ಲಿ ನಾಲ್ಕನೆಯವನಾಗಿದ್ದಾನೆ. (೧. ಆದಿರುದ್ರ = ಶಿವರೂಪಿ ಭೈರವೇಶ್ವರ ೨. ಸಿದ್ಧಯೋಗಿ > ಶಿವಾಂಶ ಸಂಭೂತ ೩. ಕರ್ಮನಾಥ ೪. ಶಿವನಾಥ..... ೩೧. ಶ್ರೀ ಬಾಲ ಗಂಗಾಧರನಾಥ ಸ್ವಾಮೀಜಿ - ಹೀಗೆ ಶ್ರೀ ಮಠದ ಪೀಠಾಧೀಶರ ಹೆಸರುಗಳ ದಾಖಲೆ ಪಟ್ಟಿಯಿದೆ).
೨. ಕ್ರಿ.ಶ. ೧೨೦೫ರ ಹೊಯ್ಸಳ ವೀರ ಬಲ್ಲಾಳನ ಕಾಲದ ತಾವರೆಗೆರೆ ಕೋಡಿಯ ಬಳಿ ದೊರೆತ ವೀರಗಲ್ಲಿನಲ್ಲಿ ಚುಂಚನಗಿರಿಯಲ್ಲಿ ಕೋಟೆಯಿದ್ದು ಅದನ್ನು ರಾಜ ಮಹಾರಾಜರು ಆಳುತ್ತಿದ್ದರೆಂದೂ ಅದಕ್ಕೆ ವಿಕ್ರಮಚೋಳಮಂಡಲ ಪ್ರಾಂತ್ಯವೆಂಬ ಹೆಸರಿದ್ದಿತೆಂದೂ ಪ್ರಸ್ತಾಪಿಸಲಾಗಿದೆ.
೩. ಕ್ರಿ.ಶ. ೧೨೨೪ರ ಬೆಳ್ಳೂರು ಮೂಲೆ ಸಿಂಗೇಶ್ವರ ದೇವಾಲಯದ ಶಾಸನವೊಂದರಲ್ಲಿ ಚುಂಚನ ಗಿರಿ ಪ್ರಾಂತ್ಯಕ್ಕೆ ಭೈರವನೇ ಅಧಿ ದೈವವೆಂದು ಹೇಳಲಾಗಿದೆ. ಬೆಳ್ಳೂರು ಅಗ್ರಹಾರವಾಗಿದ್ದಿತ್ತೆಂದೂ, ಚುಂಚನಗಿರಿ ಶೈಕ್ಷಣಿಕ ಕೇಂದ್ರವೂ, ಸಿದ್ಧ ಸಾಧಕರ ತಪೋತಾಣವೂ ಆಗಿದ್ದುದನ್ನು ಶಾಸನಗಳು ತಿಳಿಸಿವೆ.
೪. ಕ್ರಿ.ಶ. ೧೨೬೯ ಬೆಳ್ಳೂರಿನ ಹೊಯ್ಸಳ ವೀರ ನರಸಿಂಹದೇವನ ಶಾಸನದಲ್ಲಿ ಆತ ಭೈರೇದೇವರಿಗೆ ದತ್ತಿಯನ್ನು ಬಿಟ್ಟ ವಿಷಯವಿದೆ.

೫. ವೀರಬಲ್ಲಾಳನ ಸಾಮಂತನಾದ ಯಲಹಂಕ ನಾಡಪ್ರಭು ತನ್ನ ಮನೆದೇವರಾದ ಭೈರವನಿಗೆ ದತ್ತಿಬಿಟ್ಟ ಅಂಶ ಕ್ರಿ.ಶ. ೧೨೬೫ರ ಶಾಸನದಲ್ಲಿದೆ. ಈ ವಿಷಯದ ಬಗ್ಗೆ ಜಾನಪದದಲ್ಲೂ ಆಧಾರವಿದೆ.

೬. ವಿಜಯನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಕಠಾರಿ ನರಸಿಂಹರಾಜ ಒಡೆಯರ ಪ್ರಧಾನಿ ವಿರೂಪಾಕ್ಷದೇವಣ್ಣನು ಚುಂಚನಹಳ್ಳಿಗೆ 'ವಿರೂಪಾಕ್ಷಪುರ' ಎಂದು ಮರುನಾಮಕರಣ ಮಾಡಿದ ಸಂಗತಿ ಕ್ರಿ.ಶ. ೧೪೪೪ರ ಚುಂಚನಹಳ್ಳಿ ಶಾಸನ ನಿರೂಪಿಸಿದೆ.

೭. ಕ್ರಿ.ಶ. ೧೮೯೭ರಲ್ಲಿ ಗಂಗಾಧರೇಶ್ವರ ದೇವಾಲಯದ ಮುಖಮಂಟಪದ ಹಿತ್ತಾಳೆ ಕಟ್ಟಿನ ಬಲಭಾಗದ ನಟರಾಜ ವಿಗ್ರಹದ ಅಡಿಯಲ್ಲಿ ಕೆತ್ತಲಾದ ಶಾಸನದಲ್ಲಿ ಸೊರವನಹಳ್ಳಿ ದೊಡ್ಡೇಗೌಡರ ಮಗ ಕರೀಗೌಡರು ಮಹಾದ್ವಾರದ ಅಲಂಕಾರಕ್ಕಾಗಿ ಹಿತ್ತಾಳೆ ತಗಡನ್ನು ಹೊದಿಸಿದರೆಂದು ತಿಳಿಸಲಾಗಿದೆ.

೮. ಆದಿಚುಂಚನಗಿರಿಯ ಸಮಾಧಿ ಮಂಟಪದ ಬಳಿ ದೇವನಾಗರಿ ಲಿಪಿಯ ಶಾಸನವೊಂದು ದೊರಕಿದ್ದು ಮೇಹರನಾಥ, ಕರ್ಮನಾಥ, ಕುರುಕ್ಷೇತ್ರನಾಥರು ಸಮಾಧಿ ಮಂಟಪಗಳನ್ನು ಕಟ್ಟಿಸಿದರೆಂಬ ನಿರೂಪವಿದೆ.

೯. ಕ್ರಿ.ಶ. ೧೭ನೇ ಶತಕದ ಹಿತ್ತಾಳೆ ಲೇಖದಲ್ಲಿ ಮುದ್ದಪ್ಪ ಗೌಡನೆಂಬಾತ ನಾಗಚಾವಡಿಯನ್ನು ಕಟ್ಟಿಸಿದನೆಂಬ ಮಾತಿದೆ

೧೦. ಕ್ರಿ.ಶ. ೧೮ನೇ ಶತಮಾನದ ಪೂರ್ವಾರ್ಧದ ಶಿಲಾನಿರೂಪದಲ್ಲಿ ಕುಸುಮನಾಥನೆಂಬ ಗುರುವಿನ ಪ್ರಸ್ತಾಪವಿದೆ. ಈ ಅಂಶ ಉತ್ತರ ಭಾರತದಿಂದ ಅಥವಾ ಇನ್ನಾವುದೇ ಭಾಗದಿಂದ ಬಂದ ನಾಥ ಸಂಪ್ರದಾಯದ ಸನ್ಯಾಸಿಗಳು ಇಲ್ಲಿ ನೆಲೆಸುತ್ತಿದ್ದರೆಂಬುದನ್ನು ಸಾರಿದೆ.
ಆದಿಚುಂಚನಗಿರಿ ಮಠಕ್ಕೆ ಇಂದಿಗೂ ಜೈನರು, ಮುಸ್ಲಿಮರು, ದಲಿತರು, ಕೃಷಿಕರನ್ನೊಳಗೊಂಡಂತೆ ಅನೇಕ ಕೋಮಿನವರು ನಡೆದುಕೊಂಡು ಬರುತ್ತಿರುವುದು ಇಲ್ಲಿನ ವೈಶಿಷ್ಟ್ಯ.

೧೧. ಮೈಸೂರು ಗೆಜೆಟ್ಟಿನ ೯ನೇ ಪುಟದಲ್ಲಿ ಚುಂಚನಗಿರಿಯ ಮೇಲ್ಮೈ ಲಕ್ಷಣ ಹಾಗೂ ಭೌಗೋಳಿಕ ಗುಣಗಳನ್ನು ಹಾಗೂ ೪೭೧ನೇ ಪುಟದಲ್ಲಿ ಪ್ರಾದೇಶಿಕ ವೈಶಿಷ್ಟ್ಯತೆಗಳ ವಿವರವನ್ನು ಮತ್ತು ಎರಡನೇ ಸಂಪುಟದ ೨೩೦ನೇ ಪುಟದಲ್ಲಿ ಜಾತ್ರಾ ಮಹೋತ್ಸವದ ದಾಖಲೆಯನ್ನು ಕಾಣಬಹುದಾಗಿದೆ.

೧೨. ೧೯೫೭ರಲ್ಲಿ ಅಂದಿನ ಮೈಸೂರು ಸರ್ಕಾರ ಆದಿಚುಂಚನಗಿರಿಯ ಮಹಾಸಂಸ್ಥಾನ ಮಠಕ್ಕೆ ರಹದಾರಿಯನ್ನು, ಬಿರುದು ಬಾವಲಿಗಳನ್ನು, ಇತರೆ ಸಿಬ್ಬಂದಿಯನ್ನೂ ವಿವರವಾಗಿ ಪ್ರಸ್ತಾಪಿಸಿ, ಮಂಜೂರು ಮಾಡಿ ಮಾನ್ಯತೆ ನೀಡಿದೆ.

ಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು ಶ್ರೀಕ್ಷೇತ್ರದ ಸರ್ವಾಂಗೀಣ ಪ್ರಗತಿಯನ್ನು ಅತ್ಯದ್ಭುತ ರೀತಿಯಲ್ಲಿ ಮಾಡುತ್ತಾ ಬಂದಿರುವುದು ಶ್ರೀ ಮಠದ ನೂತನ ಇತಿಹಾಸವೇ ಸರಿ.

## ನಾಥ ಪರಂಪರೆಯ ಶ್ರೀಮಠ

ಶೈವ ಸಂಪ್ರದಾಯದ ಮುಖ್ಯ ಪ್ರಭೇದ 'ನಾಥ ಪಂಥ'. ನಾಥ ಎಂದರೆ ಸ್ವಾಮಿ, ಪ್ರಭು, ಒಡೆಯ. ಶಿವನೇ ಜಗತ್ತಿಗೆಲ್ಲಾ ಸ್ವಾಮಿ, ಸರ್ವಕರ್ತ. ಅವನಲ್ಲಿ ಅಂತರ್ಗತವಾಗಿರುವ ಚೈತನ್ಯವೇ ಶಕ್ತಿ. ಶಿವ ಶಕ್ತಿಯರಿಬ್ಬರೂ ಅಭೇದ್ಯರು. ಇವರಿಬ್ಬರಿಂದಲೇ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ. ಸಮರ್ಥ ಗುರುವಿನ ಮಾರ್ಗದರ್ಶನ, ನೈಷ್ಠಿಕ ಬ್ರಹ್ಮಚರ್ಯ, ಯೋಗಾನುಷ್ಠಾನಗಳ ಸಿದ್ಧಿಯಿಂದ ಶಿವ ಶಕ್ತಿಯರ ಸಾಕ್ಷಾತ್ಕಾರ ಪಡೆಯಬಹುದೆಂಬ ತತ್ವವೇ ನಾಥ ಸಿದ್ಧಾಂತ.

ನವನಾಥರು ಈ ಪಂಥದ ಪ್ರಮುಖರು. ಒಂದೆರಡು ಹೆಸರುಗಳಲ್ಲಿನ ವ್ಯತ್ಯಾಸದ ಹೊರತು 'ನವನಾಥ ಭಕ್ತಿ ಸಾರ' ಮತ್ತು 'ಆದಿಚುಂಚನಗಿರಿ ಸ್ಥಳ ಮಹಾತ್ಮೆ' ಕೃತಿಗಳಲ್ಲಿ ನಾಥ ಪ್ರಮುಖರು ಒಂಬತ್ತು ಮಂದಿ ಎಂದೇ ವಿವರಿಸಲಾಗಿದೆ. ಅವರು ಕ್ರಮವಾಗಿ -ಮತ್ಸ್ಯೇಂದ್ರನಾಥ (ಮಚ್ಛೇಂದ್ರ) ಗೋರಕ್ಷನಾಥ (ಗೋರಖ), ಜಾಲಂಧರನಾಥ, ಕಾನೀಫನಾಥ, ಗಹಿನಿನಾಥ, ಭರ್ತರಿನಾಥ, ರೇವಣನಾಥ, ನಾಗನಾಥ, ಚರಪಟನಾಥ.

ಗುರುಪಾರಮ್ಯದಲ್ಲಿ ನಂಬಿಕೆಯಿಟ್ಟು, ಯೋಗದಲ್ಲಿ ಮುನ್ನಡೆದು, ವಿರಕ್ತರಾದ ನಾಥ ಸಿದ್ಧಾಂತಿಗಳು ಸನಾತನ ತತ್ವಗಳ ಹಾಗೂ ವರ್ಗ-ವರ್ಣ-ಜಾತಿ ಪದ್ಧತಿಗಳ ಕಡುವಿರೋಧಿಗಳು. ಜಾತ್ಯಾತೀತತೆ ಮತ್ತು ಸರ್ವಸಮಾನತೆಯ ಆಧಾರದ ಮೇಲೆ ನಿಂತ ನಾಥ ಪಂಥದ ಮುಖ್ಯ ಗುರಿಯೇ ಸಮಾಜೋದ್ಧಾರ.

ಶೈವ ಮತ್ತು ಶಾಕ್ತ ಪಂಥಗಳ ಆದಿಗುರು ದತ್ತಾತ್ರೇಯ. ನಾಥ ಪಂಥದ ಮೂಲಪುರುಷನೆನಿಸಿದ ಮಚ್ಛೇಂದ್ರನಾಥ, ವಕ್ತಾರನಾದ ಗೋರಖನಾಥರು ದತ್ತಾತ್ರೇಯನಿಂದ ಅನುಗ್ರಹಿತರಾದ ದತ್ತಪಂಥದ ಕರ್ತೃಗಳು. ಬ್ರಹ್ಮ, ವಿಷ್ಣು, ಮಹೇಶ್ವರರ ಸಂಗಮರೂಪಿ ದತ್ತಾತ್ರೇಯನ ಪರಿಕಲ್ಪನೆಯಲ್ಲಿ ಭಾವೈಕ್ಯತೆ ಮತ್ತು ಧರ್ಮಸಮನ್ವಯ ತತ್ವಗಳೇ ಅಡಗಿವೆ. ಮಹಾರಾಷ್ಟ್ರದಲ್ಲಿ ಭಕ್ತಿ ಚಳವಳಿಯ ಸಂದರ್ಭದಲ್ಲಿ ನಾಥ ಪಂಥದೊಡನೆ ಸೂಫಿ ಪಂಥವೂ ಜೊತೆ ಜೊತೆಯಾಗಿ ಬೆರೆಯಿತು. ಇದಕ್ಕೆ ಕಾರಣ ಮಾನವೀಯತೆ ಮತ್ತು ಉದಾತ್ತವಾದಕ್ಕೆ ನಾಥ ಪಂಥ ಕೊಟ್ಟ ಮಾನ್ಯತೆ. ಸೂಫಿ ಸಂತರು 'ದತ್ತ ಚೈತನ್ಯ'ನನ್ನೇ ತಮ್ಮ ಗುರು ಎಂದು ಪರಿಗಣಿಸಿದರು. ಅದರ ಪರಿಣಾಮವಾಗಿ ಇಂದಿಗೂ ಉತ್ತರ ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ದತ್ತಪೀಠಗಳೂ ಸೂಫಿದರಗಾಗಳೂ ಒಟ್ಟೊಟ್ಟಿಗೆ ಇದ್ದು ಜಾತ್ಯಾತೀತತೆಯನ್ನು ತೋರುವಂತಿವೆ. ಉದಾ: ಅಂಕಲಗಿ, ಕೊಣ್ಣೂರು, ಸವದತ್ತಿ, ವಡಬಾಳ, ಅಕ್ಕಲ ಕೋಟೆ, ಬಾಬಾಬುಡನ್‌ಗಿರಿ ಮೊದಲಾದೆಡೆ ಎಂದು ಶಂ.ಬಾ. ಜೋಶಿಯವರು ಸಾರದಪಡಿಸಿದ್ದಾರೆ.

ನಾಥರ ಪ್ರಸಿದ್ಧ ಪುಣ್ಯಕ್ಷೇತ್ರಗಳೆಂದರೆ - ಕಾಶಿಯ ಭೈರವನಾಥ, ಸೋನೇಪುರದ ಹರಿಹರನಾಥ, ಗೋರಖಪುರದ ಗೋರಖನಾಥ, ಪಂಜಾಬಿನ ತಿಲ್ಲನಾಥ, ಪುರಿಯ ಜಗನ್ನಾಥ, ನೇಪಾಳದ ಪಶುಪತಿನಾಥ, ಹಿಮಾಲಯದ ಕೇದಾರನಾಥ, ಚಿತ್ರಗಾಂಗಿನ ಪಾರ್ಶ್ವನಾಥ ದೇವಾಲಯಗಳು ಉತ್ತರ ಭಾರತದಲ್ಲಿವೆ.

ದಕ್ಷಿಣ ಭಾರತದಲ್ಲಿ ನಾಥ ಪಂಥದ ಪ್ರಮುಖ ಕೇಂದ್ರಗಳೆಂದರೆ - ಮಂಡ್ಯ ಜಿಲ್ಲೆಯ ಆದಿಚುಂಚನಗಿರಿ, ಮಂಗಳೂರಿನ ಕದ್ರಿ, ಕಾಸರಗೋಡಿನ ಪೊಸಡಿ ಗುಂಪೆಗುಹೆಗಳು, ಉತ್ತರ ಕನ್ನಡದ ಬೇಡಕೇಹಾಳ, ಹಾವೇರಿಯ ಕರಜಗಿ, ಯಾಣಿದ ಭೈರವೇಶ್ವರ ಕ್ಷೇತ್ರ. ನಾಥಪಂಥೀಯ ಜೋಗಿಮಠಗಳೆಂದರೆ ಆದಿಚುಂಚನಗಿರಿ ಮಠ, ಮೈಸೂರಿನ ಸೋಮುಖಿ ಮಠ, ಚಿತ್ರದುರ್ಗದ ಲೋಂಕಿ ಮಲೆಯ ಸಿದ್ದೇಶ್ವರ ಸ್ವಾಮಿಯೋಗಿ ಮಠ, ಮೊಳಕಾಲ್ಮೂರಿನ ಗಂಗಾಧರೇಶ್ವರ ಸ್ವಾಮಿ ಮಠ, ಯಯ್ಯಾಡಿಯ ಭೈರವನಾಥ ಮಠ, ಮಂಕಿ ಮಲೆಯ ಸಿದ್ಧ ಪೀಠ, ಕದ್ರಿಯ ಯೋಗೀಶ್ವರ ಮಠ, ಕುಂದಾಪುರದ ಓಲೋರಿ ಮಠ, ಕಾಸರಗೋಡಿನ ಉದ್ಯಾವರದ ಜೋಗಿ ಮಠ, ಕಂಬ್ರಾಡದ ಅರಣ್ಯದಲ್ಲಿರುವ ಹಾಂಡಿಬಡಂಗನಾಥ ಮಠ ಮೊದಲಾದುವು.

ಅನೇಕ ಆಧಾರಗಳಿಂದ ನಾಥ ಪಂಥ ಕೌಪಾಲಿಕ ಮತವೂ ಅಲ್ಲ, ವಾಮಾಚಾರ ಪಂಥವೂ ಅಲ್ಲ, ಮಾನವ ಕಲ್ಯಾಣವನ್ನೇ ಬಯಸುವ ಸಾತ್ವಿಕ ಮತ ಎಂಬ ಅಂಶ ಗಟ್ಟಿಯಾಗಿ ಸಿದ್ಧವಾಗಿದೆ. ಅಲ್ಲದೆ ಗೋರಕ್ಷನಾಥ ಕನ್ನಡಿಗನಾಗಿದ್ದು, ಕ್ರಿ.ಶ. ಎಂಟನೇ ಶತಮಾನದ ಉತ್ತರಾರ್ಧದಲ್ಲಾಗಲೇ ನಾಥ ಪಂಥ ಕರ್ನಾಟಕಕ್ಕೆ ಅಡಿಯಿಟ್ಟಿತ್ತೆಂದೂ, ಹತ್ತನೇ ಶತಮಾನಕ್ಕಾಗಲೇ ಆದಿಚುಂಚನಗಿರಿ ಅದರ ನೆಲೆಯಾಗಿದ್ದಿತೆಂದೂ ಸಾಬೀತಾಗಿದೆ. ಅಲ್ಲದೆ ವೀರ ಶೈವ ವಚನಕಾರರಾದ ಅಲ್ಲಮಪ್ರಭು, ಬಸವಣ್ಣ, ಚೆನ್ನಬಸವಣ್ಣ ಇವರ ಮೇಲೆ ನಾಥ ಸಿದ್ಧಾಂತಗಳ ಪ್ರಭಾವ ದಟ್ಟವಾಗಿ ಆಗಿದ್ದಿತೆಂಬುದಕ್ಕೆ ಅವರ ಕೆಲವಾರು ವಚನಗಳೇ ದೃಷ್ಟಾಂತವಾಗಿವೆ. ಅಲ್ಲಮ ಪ್ರಭು, ರೇವಣಸಿದ್ಧ ನಾಥಪಂಥೀಯರೆಂದು ಕಪಟರಾಳ ಕೃಷ್ಣರಾಯರು ನಿರೂಪಿಸಿದ್ದಾರೆ. ಎಡೆಯೂರು ಸಿದ್ಧಲಿಂಗ ಯತಿಯ ಶಿಷ್ಯನಾದ ಸರ್ಪೇಸ್ವಾಮಿ ಆದಿಚುಂಚನಗಿರಿಯಲ್ಲಿ ತಪಸ್ಸು ಮಾಡಿದನೆಂಬುದಕ್ಕೆ ಕ್ರಿ.ಶ. ೧೫ನೇ ಶತಮಾನದ ಎಡೆಯೂರಿನ ಶಾಸನಾಧಾರವಿದೆ.

ಪ್ರಾರಂಭದಿಂದ ಪ್ರಸ್ತುತದವರೆಗೆ ಎಪ್ಪತ್ತೊಂದು ಜನ ಪೀಠಾಧ್ಯಕ್ಷರನ್ನು ಕಂಡಿರುವ ಆದಿಚುಂಚನಗಿರಿ ಸಿದ್ಧಸಿಂಹಾಸನದ ಅರವತ್ತೇಳನೇ ಪೀಠಾಧಿಪತಿಗಳಾದ ಶ್ರೀ ತೇಜನಾಥರು ಬಹಳ ಸ್ಪಷ್ಟವಾಗಿ ''ಈ ಮಠದ ಉತ್ತರಾಧಿಕಾರಿಗಳು ಒಕ್ಕಲಿಗರು'' ಎಂದು ಹೇಳಿದ ತರುವಾಯ ಇಲ್ಲಿ ಒಕ್ಕಲಿಗರ ಪ್ರಾಬಲ್ಯವನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಕ್ಷೇತ್ರಪಾಲಕನಾದ ಭೈರವೇಶ್ವರ ಕೃಷಿದೇವತೆಯೂ ಆಗಿರುವುದರಿಂದ ಇದು ಸಹಜವೂ ಆಗಿರಬಹುದು.

ಅರವತ್ತೆಂಟನೇ ಪೀಠಾಧ್ಯಕ್ಷರಾದ ಶ್ರೀ ಭಕ್ತನಾಥ ಸ್ವಾಮೀಜಿ, ಅರವತ್ತೊಂಬತ್ತನೆಯವರಾದ ಶ್ರೀ ಚಂದ್ರಶೇಖರನಾಥ ಸ್ವಾಮೀಜಿಯವರು ಬಹುಭಾಷಾಕೋವಿದರು ಹಾಗೂ ಜ್ಞಾನಿಗಳು. ಇವರೀರ್ವರ ಅವಧಿಯಲ್ಲಿ ಶ್ರೀಮಠದ ಪ್ರಗತಿ ಪ್ರಾರಂಭವಾಗಿ ನಂತರ ಶ್ರೀ ರಾಮಾನಾಥ ಸ್ವಾಮೀಜಿಯವರಿಂದ ಮುಂದುವರಿದು ಎಪ್ಪತ್ತೊಂದನೇ ಪೀಠಾಧಿಪತಿಗಳಾದ ಶ್ರೀ ಬಾಲಗಂಗಾಧರ ನಾಥ ಸ್ವಾಮೀಜಿಯವರಿಂದಾಗಿ ವಿರಾಡ್ರೂಪದಿಂದ ಕಂಗೊಳಿಸಿದೆ. ನಾಥ ಶಿಷ್ಟಾಚಾರಕ್ಕೆ ಬದ್ಧರಾಗಿದ್ದುಕೊಂಡೇ ಆಧುನಿಕ ಕಾಲಕ್ಕೆ ತಕ್ಕ ಶೈಕ್ಷಣಿಕ, ಸಾಮಾಜಿಕ ಸೇವಾಬಾಹುಳ್ಯದಿಂದಾಗಿ ಶ್ರೀ ಕ್ಷೇತ್ರಕ್ಕೆ ನೂತನ ಆಯಾಮ ನೀಡಿದ ಶಕಪುರುಷ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು.

ಸಾಲದ ಹೊರೆ, ಆರ್ಥಿಕ ಶಿಥಿಲತೆಯಿಂದಾಗಿ ಹಿಂದುಳಿದಿದ್ದ ಆದಿ ಚುಂಚನಗಿರಿ ಮಠಕ್ಕೆ ಕಾಯಕಲ್ಪವನ್ನು ನೀಡಿದವರೇ ಇವರು.

**ಶ್ರೀಮಠದ ಬೆಳವಣಿಗೆಯಲ್ಲಿ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಮಹತ್ವದ ಪಾತ್ರ**

ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರದು ನಿಸ್ವಾರ್ಥಪರವಾದ ದೂರದೃಷ್ಟಿಯ ವ್ಯಕ್ತಿತ್ವ. ಅದರ ಫಲವಾಗಿ ಶ್ರೀಕ್ಷೇತ್ರ ಈ ಹಿಂದೆ ಎಂದೂ ಕಾಣದಂತಹ ಅಪೂರ್ವ ಪ್ರಗತಿಯನ್ನು ಪಡೆಯಲು ಸಾಧ್ಯವಾಯಿತು. ಅವರು ಪೀಠಾಧ್ಯಕ್ಷರಾದ ಮೂರು ದಶಕಗಳಲ್ಲೇ ಸಹಸ್ರಮಾನಗಳಷ್ಟು ಸಾಧನೆಯನ್ನು ವಿಸ್ಮಯಕಾರಿಯಾಗಿ ಸಾಧಿಸಿದ್ದಾರೆ.

ಅವರ ತಾಳ್ಮೆ, ಸಹನೆ, ಅನುನಯದ ಮಾತು, ಪ್ರೀತಿ ವಾತ್ಸಲ್ಯಗಳನ್ನೇ ಹೊರಸೂಸುವ ಗುಣ ಎಂತಹವರನ್ನೂ ಅವರತ್ತ ಬಾಗುವಂತೆ ಮಾಡುತ್ತದೆ. ಶ್ರೀಗಳ ಈ ಆತ್ಮೀಯ ವ್ಯಕ್ತಿತ್ವವೇ ಅವರ ಸಂಘಟನಾಶೀಲತೆಯ ಮೊದಲ ಹಂತ. ಅನೇಕ ಪ್ರಾಂತ್ಯಗಳಲ್ಲಿ ಚದುರಿಹೋಗಿರುವ, ಅನೇಕ ಪಂಗಡಗಳಿಂದ ಗುರುತಿಸಲಾಗುತ್ತಿರುವ ಒಕ್ಕಲಿಗ ಜನಾಂಗಕ್ಕೆ 'ನಾವೆಲ್ಲರೂ ಒಂದೇ' ಎಂಬ ಅಖಂಡತೆಯನ್ನು ಒತ್ತಟ್ಟಾಗಿ ತುಂಬುತ್ತಿರುವ ಫಲವಾಗಿ ಇಂದು ಆದಿಚುಂಚನಗಿರಿ ಮಠದ ಬಗ್ಗೆ ಒಕ್ಕಲಿಗರಿಗೆ ಸ್ವಾಭಿಮಾನ, ಇತರರಿಗೆ ಶ್ರೀಮಠದ ಸಮಾಜಸೇವೆಯ ಕುರಿತಾದ ಗೌರವ ಎದ್ದು ಕಾಣುತ್ತದೆ. ಜಾತ್ಯಾತೀತ ಮನೋಭಾವದಿಂದಾಗಿ ಎಲ್ಲರಿಗೂ ಮುಕ್ತದ್ವಾರ ತೆರೆದಿರುವ ಶ್ರೀಗಳ ಬಗ್ಗೆ ಅಪಾರ ಭಕ್ತಿ, ಪ್ರೀತಿಗಳು ಭಕ್ತಜನರಲ್ಲಿ ಮೈತಳೆದಿವೆ.

ಬೆಂಗಳೂರಿನ ಸಮೀಪದ ಬಾನಂದೂರಿನ ಸುಬೇದಾರ್ ಮನೆತನದ ಚಿಕ್ಕಲಿಂಗಪ್ಪ - ಬೋರಮ್ಮ ದಂಪತಿಗಳ ಸುಪುತ್ರರೇ ಶ್ರೀಗಳು. ಕೃಷಿಯೊಂದಿಗೆ ಭೈರವ ಸೇವೆಗೆ ತಮ್ಮನ್ನು ತೊಡಗಿಸಿಕೊಂಡಿದ್ದ ತಮ್ಮ ಹಿರಿಯರಿಂದ ಜನ್ಮದತ್ತವಾಗಿ ಬಂದ ದೈವಭಕ್ತಿ, ಸಮಾಜ ಸೇವಾಸಕ್ತಿಗಳೊಂದಿಗೆ ಸಹಜ ವೈರಾಗ್ಯವೂ ಜೊತೆಗೂಡಿತು. ಕವಿಮನದ ಶ್ರೀಗಳು

ರಾಜ್ಯ ಬೇಡೆನಗೆ ಸ್ವರ್ಗಬೇಡೆನಗೆ
ಮರುಹುಟ್ಟು ಬೇಡೆನಗೆ ದುಃಖಿತರ ದುಃಖ
ನಿವಾರಣೆ ಮಾಡಿದರದುವೆ ಸಾಕೆನಗೆ.

ಎಂದು ತಮ್ಮ ಮನೋಭೀಷ್ಟೆಯನ್ನು ಕವಿತೆಯಲ್ಲಿ ಹರಿಸಿದ್ದಾರೆ; ಅದಕ್ಕೆ ತಕ್ಕಂತೆ ನಡೆದು ಬರುತ್ತಿದ್ದಾರೆ.

ಬಿ.ಎಸ್ಸಿ ಪದವೀಧರರೂ, ಸಂಸ್ಕೃತ ಜ್ಞಾನಿಗಳೂ, ಸಾಹಿತ್ಯಾಸಕ್ತರೂ, ಸುಸಂಸ್ಕೃತರೂ, ಸಹೃದಯರೂ, ಮಹಾತ್ವಾಕಾಂಕ್ಷಿಗಳೂ ಆದ ಶ್ರೀಗಳು ಪೀಠಾಧಿಪತಿಗಳಾದಾಗ ಮಠದಲ್ಲಿ ಹಣಕಾಸಿನ ಮುಗ್ಗಟ್ಟು ತೀವ್ರವಾಗಿತ್ತು. ಧೃತಿಗೆಡದ ಶ್ರೀಗಳು ಬೀಳು ಭೂಮಿಯನ್ನೇ ಕೃಷಿಗೆ ಅನುವು ಮಾಡಿದರು, ಸಾಲಸೋಲಗಳನ್ನು ತೀರಿಸಲು ಕೃಷಿ ಮತ್ತು ಹೈನುಗಾರಿಕೆಯನ್ನು ಅಭಿವೃದ್ಧಿಪಡಿಸಿದರು. ಜೊತೆಗೆ

ಹರಿಸಿ ದುಡಿದು ಬರಿದಾದ ಉಗ್ರಾಣ ಧವಸ ಧಾನ್ಯಗಳಿಂದ ತುಂಬುವಂತೆ ಮಾಡಿದರು. ಸಡಿಲವಾದ ಆಡಳಿತವನ್ನು ಸುವ್ಯವಸ್ಥಿತಗೊಳಿಸಿದರು. ಎಂತಹ ಜಟಿಲ ಸಮಸ್ಯೆಗಳೇ ಎದುರಾದರೂ ವಿಚಲಿತ ರಾಗದ ಸ್ಥಿತಪ್ರಜ್ಞರು ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು. ಏನೆಲ್ಲಾ ಸಮಸ್ಯೆಗಳು ಎದುರಾದವರೂ ಅವುಗಳನ್ನು ಧೈರ್ಯವಾಗಿ ಎದುರಿಸುವ ದೃಢಮನದ ಶ್ರೀಗಳು ಶ್ರೀಮಠದ ಸಮಗ್ರ ಪುನರುಜ್ಜೀವನಕ್ಕೆ ಕಟಿಬದ್ಧರಾಗಿ ನಿಂತರು. ಅವರ ಕರೆಗೆ ಓಗೊಟ್ಟು, ಹೊಯ್‌ಗಯ್ಯಾಗಿ ಅವರೊಂದಿಗೆ ನಿಂತರು ಅವರ ಭಕ್ತಾಭಿಮಾನಿಗಳು. ಹೀಗಾಗಿ ಇಂದು ಶ್ರೀಗಳ ಮಹತ್ವಾಕಾಂಕ್ಷೆ ಗಳೆಲ್ಲವೂ ಕ್ರಮೇಣ ಸಾಕಾರಗೊಳ್ಳುವಂತಾಗಿದೆ.

ಬೇಸಾಯ, ಗೊಬ್ಬರ, ಹಾಲಿಗೆ ಅನುಕೂಲವಾಗುವಂತೆ ದನಕರುಗಳನ್ನು ಕಲೆಹಾಕಿ ಗೋಶಾಲೆಯನ್ನು ಕಟ್ಟಿಸಿದರು, ಯಾತ್ರಿಕರಿಗೆ ವಸತಿಗೃಹಗಳನ್ನು ನಿರ್ಮಿಸಿದರು. ಸಾಮೂಹಿಕ ಭೋಜನ ಮಾಡಲು ವಿಶಾಲವಾದ, ಬೃಹತ್ತಾದ ಅನ್ನದಾನಿ ಭೈರವ ನಿಲಯ ಮತ್ತು ಅನ್ನಪೂರ್ಣೇಶ್ವರಿ ನಿಲಯಗಳನ್ನು ಅಣಿಗೊಳಿಸಿದರು. ಇಲ್ಲಿ ನಿತ್ಯ ಅನ್ನದಾಸೋಹವಿದೆ. ಚೌಲಶಾಲೆ (ಮುಡಿಕಟ್ಟೆ), ಶೌಚಾಲಯಗಳಿಂದ ಹಿಡಿದು ಯಾತ್ರಿಕರು ಬೆಟ್ಟವೇರಲು ವಿಸ್ತಾರವಾದ ಮೆಟ್ಟಿಲುಗಳು, ಆಯಾಸ ವಾದಾಗ ಕುಳಿತು ಸುಧಾರಿಸಿಕೊಳ್ಳಲು ವಿಶ್ರಾಂತಿ ಮಂಟಪಗಳು, ಅಗಲವಾದ ಡಾಂಬರು ರಸ್ತೆಗಳನ್ನು ಮಾಡಿಸಿದರು. ಹಳೆಯ ಮಠದ ಕಟ್ಟಡಕ್ಕೆ ಆಧುನಿಕತೆಯ ಬೆಡಗನ್ನು ಬೆರಸಿ ಭವ್ಯರೂಪ ನೀಡಿದರು. ತೀರಾ ಹಿಂದುಳಿದ ಗ್ರಾಮೀಣ ಪ್ರದೇಶಗಳಲ್ಲೂ ಶಿಕ್ಷಣ ಸೌಲಭ್ಯ ಮತ್ತು ವೈದ್ಯಕೀಯ ಸೌಲಭ್ಯ ನೀಡಿದ ಉದಾರ ಮನಸ್ಸಿನ ಧನ್ಯಜೀವಿಗಳು ಶ್ರೀಗಳು.

ಶಿಕ್ಷಣದ ಬಾಗಿಲು ತೆರೆದಿರಬೇಕೆಲ್ಲರಿಗೂ
ಶೋಷಣೆ ಅಸಮಾನತೆಯ ತೊರೆಯಬೇಕೆಂದಿಗೂ
ಸ್ವಾರ್ಥ ನೀಗಲು ಬಾಳಪಯಣ ಸುಗಮವೆಂದೆಂದಿಗೂ
ಎಂಬುದು ಶ್ರೀಗಳೇ ತಿಳಿಸಿರುವಂತೆ ಅವರ ನಿಲುವು.

ಗ್ರಾಮೀಣ ಮಕ್ಕಳಿಗೆ ಅತ್ಯುತ್ತಮ ವಿದ್ಯೆ ದೊರಕಿಸಿಕೊಡಬೇಕೆಂಬುದು ಅವರ ತೀವ್ರವಾದ ಕಾಳಜಿ. ಬಡತನ, ಮೂಢನಂಬಿಕೆಗಳ ಕಾರಣದಿಂದಾಗಿ ಅನೇಕ ಹಳ್ಳಿಯ ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಾರೆ. ಅದನ್ನು ನಿವಾರಿಸಿ ಮುಂದಿನ ತಲೆಮಾರಿಗೆ ನಾವು ನೀಡುವ ನಿಡಿದಾದ ಸಂಪತ್ತೆಂದರೆ ವಿದ್ಯೆ ಎಂಬುದನ್ನರಿತು ''ಆದಿಚುಂಚನಗಿರಿ ಶಿಕ್ಷಣ ಟ್ರಸ್ಟ್''ನ ಮೂಲಕ ಸುಮಾರು ಇನ್ನೂರ ಅರವತ್ತು ಶಾಲಾಕಾಲೇಜುಗಳು, ವೈದ್ಯಕೀಯ - ತಾಂತ್ರಿಕ ಮಹಾವಿದ್ಯಾಲಯಗಳನ್ನು ಶ್ರೀಗಳು ನಡೆಸಿಕೊಂಡು ಬರುತ್ತಿದ್ದಾರೆ.

ಶ್ರೀ ಕ್ಷೇತ್ರದಲ್ಲಿ ಅನುದಿನವೂ ಸಾವಿರಾರು ಮಂದಿಗೆ ಅನ್ನ ಸಂತರ್ಪಣೆಯಿರುತ್ತದೆ; ಸುಮಾರು ಮೂವತ್ತು ಸಾವಿರಕ್ಕೂ ಅಧಿಕ ಕುಟುಂಬಗಳು ಜೀವನ ನಡೆಸಲು ಆಸರೆ ನೀಡಿರುವ ಶ್ರೀ ಮಠ ಧರ್ಮ, ಕಲೆ, ಸಾಹಿತ್ಯಗಳು ಅರಳಿ ನಿಲ್ಲಲು ನೆರಳಾಗಿದೆ.

ಸಂಸ್ಕೃತಿಯ ಬಗ್ಗೆ ನಿಸ್ಪೃಹ ಒಲವಿರುವ ಶ್ರೀಗಳ ನೇತೃತ್ವದಲ್ಲಿ ಸರ್ವಧರ್ಮ ಸಮ್ಮೇಳನ, ಸಂಸ್ಕೃತ ಸಮ್ಮೇಳನ, ಸಂಸ್ಕೃತ ನಾಟಕೋತ್ಸವ, ಉಚಿತ ನೇತ್ರಾ ಶಿಬಿರ, ಸಾಮೂಹಿಕ ವಿವಾಹ, ಮಕ್ಕಳ ಸಮ್ಮೇಳನ, ಅರ್ಚಕರ ಸಮ್ಮೇಳನ, ಸಾಹಿತ್ಯಗೋಷ್ಠಿ, ಜನಜಾಗೃತಿ ಶಿಬಿರ, ಮಹಿಳಾ ಜಾಗೃತಿ ಶಿಬಿರಗಳಲ್ಲದೆ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಪಟ್ಟಾಭಿಷೇಕೋತ್ಸವದ ನಿಮಿತ್ತ ಮೂರು ದಿನಗಳ ಕಾಲ ನಡೆಯುವ ಜಾನಪದ ಕಲಾಮೇಳ ರಾಜ್ಯಮಟ್ಟದಲ್ಲಿ ಅತ್ಯಂತ ಭರ್ಜರಿಯಾಗಿ ನಡೆಯುತ್ತದೆ. ಆ ಸಂದರ್ಭದಲ್ಲಿ ಪ್ರದರ್ಶಿತಗೊಳ್ಳುವ ವೈವಿಧ್ಯಮಯ ಜನಪದ ಕಲೆಗಳು, ಹಾಡುಕುಣಿತಗಳು ನೋಡುವವರ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತವೆ. ತಮ್ಮ ಪಟ್ಟಾಭಿಷೇಕೋತ್ಸವವನ್ನು ಜಾನಪದ ಸಂಸ್ಕೃತಿಯ ಪುನರುಜ್ಜೀವನಗೊಳಿಸುವ ಮುಖೇನ ಅರ್ಥಪೂರ್ಣಗೊಳಿಸಿಕೊಂಡಿರುವ ಹಿರಿಮೆ ಶ್ರೀಗಳದು.

ಶಿಥಿಲವಾದ ಅನೇಕ ವಿದ್ಯಾಸಂಸ್ಥೆಗಳನ್ನು ದತ್ತು ತೆಗೆದುಕೊಂಡಿರುವ ಶ್ರೀಮಠದ ಆಶ್ರಯದಲ್ಲಿ ಅಬಲಾಶ್ರಮ, ವೃದ್ಧಾಶ್ರಮಗಳಿದ್ದು ವಯಸ್ಸಾದವರಿಗೆ, ಆಶ್ರಯವಿಲ್ಲದವರಿಗೆ, ನೋವುಂಡವರಿಗೆ, ದಿಕ್ಕುದೆಸೆಯಿಲ್ಲದವರಿಗೆ ನೆಮ್ಮದಿಯ ಬಾಳನ್ನು ನೀಡಿವೆ. ಅನಾಥ ಮಕ್ಕಳಿಗೆ ಹಾಗೂ ಅಂಧ ಮಕ್ಕಳಿಗೆ ಉಚಿತ ವಸತಿ ಶಾಲೆಗಳಿದ್ದು ಅವರೂ ಬಾಳದಾರಿಯನ್ನು ರೂಪಿಸಿಕೊಳ್ಳಲು ಇಂಬಾಗಿವೆ. ಅಂಧ ಮಕ್ಕಳಿಗೆ ವೃತ್ತಿ ತರಬೇತಿ ನೀಡುವ ವ್ಯವಸ್ಥೆ ಅನುಕೂಲಕರವಾಗಿದೆ.

ಬೆಳ್ಳೂರಿನ ಸಮೀಪ, ಬೆಂಗಳೂರು - ಮಂಗಳೂರು ಹೆದ್ದಾರಿಯಲ್ಲಿರುವ ಇನ್ನೂರೈವತ್ತು ಎಕರೆ ಪ್ರದೇಶದಲ್ಲಿ ಸಕಲ ಅನುಕೂಲಗಳನ್ನು ಒಳಗೊಂಡ ಯೋಜನಾಬದ್ಧ 'ಬಾಲಗಂಗಾಧರನಾಥ ನಗರ'ದಲ್ಲಿ ವೈದ್ಯಕೀಯ ಕಾಲೇಜು, ಅದರ ಪಕ್ಕದಲ್ಲೇ 'ಶ್ರೀ ಆದಿಚುಂಚನಗಿರಿ ಆಸ್ಪತ್ರೆ ಮತ್ತು ಸಂಶೋಧನಾ ಕೇಂದ್ರ', ಕಲ್ಪತರು ಭವನವೆಂಬ ಸುಂದರ ಅತಿಥಿಗೃಹ, ಸಿಬ್ಬಂದಿ ವಸತಿಗೃಹಗಳು, ಹುಡುಗರ ಹಾಗೂ ಹುಡುಗಿಯರ ಪ್ರತ್ಯೇಕ ವಿದ್ಯಾರ್ಥಿನಿಲಯಗಳು, ವಾಣಿಜ್ಯಸಂಕೀರ್ಣ, ಸಾಲುಮರದ ರಸ್ತೆಗಳು, ಆಸ್ಪತ್ರೆ-ಕಾಲೇಜುಗಳ ಮುಂದಿರುವ ಸಸ್ಯಸಂಕುಲದಿಂದ ಹಸಿರು ಚೆಲ್ಲುವ ಸೊಬಗಿನ ಉದ್ಯಾನವನಗಳು, ಲಕ್ಷಣವಾದ ಗಣಪತಿದೇವಾಲಯ- ಇವೆಲ್ಲದರ ನಡುವೆಯೂ ಮನಸ್ಸಿಗೆ ಪ್ರಫುಲ್ಲವೆನಿಸುವ ಪ್ರಶಾಂತತೆ ಎಂತಹವರಿಗೂ ಹಿಡಿಸುತ್ತದೆ.

''ಆದಿಚುಂಚನಗಿರಿ ಆಸ್ಪತ್ರೆ'' ಅಮೇರಿಕದ ಮಾದರಿಯಲ್ಲಿ ನಿರ್ಮಾಣಗೊಂಡ ಅತ್ಯಾಧುನಿಕ ವೈದ್ಯಕೀಯ ಸೌಲಭ್ಯಗಳಿಂದೊಡಗೂಡಿದ ಉತ್ಕೃಷ್ಟ ಮಟ್ಟದ ಆಸ್ಪತ್ರೆ. 'ಇಂತಹ ಆಸ್ಪತ್ರೆಯನ್ನು ಶ್ರೀ ಬಾಲಗಂಗಾಧರ ನಾಥ ಸ್ವಾಮೀಜಿಯವರು ಬೆಂಗಳೂರಿನಲ್ಲಿ ಕಟ್ಟಿಸಿದ್ದರೆ ಹಣದ ಹೊಳೆ ಹರಿಯುತ್ತಿತ್ತು' ಎಂದು ಒಮ್ಮೆ ಭಕ್ತರು ಕೆಲವರು ಹೇಳಿದಾಗ ''ಹಳ್ಳಿಯವರಿಗೆ ಒಳ್ಳೆಯ ಆಸ್ಪತ್ರೆ, ಔಷಧಿ ದೊರಕಬೇಕೇ ಹೊರತು ಬೇರೆ ಏನು ನನಗೆ ಬೇಕಿಲ್ಲ'' ಎಂದ ಶ್ರೀಗಳು ಗ್ರಾಮೀಣ ಜನತೆಯ ಸಮಸ್ಯೆಗಳನ್ನು ಚೆನ್ನಾಗಿ ಅರಿತು ಗ್ರಾಮೋದ್ಧಾರದತ್ತಲೇ ತೀವ್ರ ಗಮನಹರಿಸಿದ್ದಾರೆ. 'ಸೇವೆಯೇ ಪೂಜೆ' ಎಂದು ನಂಬಿ ನಡೆಯುತ್ತಿರುವ ಅವರು ಈ ಯುಗದ ಪರಮ ಆದರ್ಶ ಸನ್ಯಾಸಿ ಎಂದರೆ ತಪ್ಪಾಗದು.

ಸ್ವಾಮಿ ವಿವೇಕಾನಂದರ ಶತಮಾನೋತ್ಸವದ ಅಂಗವಾಗಿ ಚಿಕಾಗೋಗೆ ಆಮಂತ್ರಿತರಾಗಿ ಹೋಗಿದ್ದ ಶ್ರೀಗಳು ಅಲ್ಲಿ ಮಾನವ ಸೇವೆಯ ಹಿರಿಮೆಯನ್ನು ಸಾರಿ ಬಂದು ಭಕ್ತ ವೃಂದದಿಂದ 'ಆದಿಚುಂಚನಗಿರಿಯ ಅಭಿನವ ವಿವೇಕಾನಂದ' ಎಂಬ ಅಭಿದಾನಕ್ಕೆ ಪಾತ್ರರಾದವರು.

ಶ್ರೀಗಳ ಪ್ರಕಾರ ತಮ್ಮ ಎಲ್ಲಾ ಸಾಧನೆಗಳಿಗೆ ಇಂಬಾಗಿ ನಿಂತ ಭಕ್ತರೆಂದರೆ ದೀಪ ಉರಿಯಲು ಸಹಾಯಕವಾದ ಎಣ್ಣೆ ಬತ್ತಿಗಳಿದ್ದಂತೆ. ತಾವು ಸವೆದು ಬೆಳಕು ನೀಡಿದರೂ ಹೆಸರು ಮಾತ್ರ ದೀಪಕ್ಕೆ ಎನ್ನುವ ವಿನೀತರು ಅವರು. ಶಿವನ ಮುಡಿಗೇರಿದರೂ ಬೀಗದ ತುಂಬೆ ಹೂವಿನಂತೆ ಅವರ ವಿನಮ್ರತೆ. ಅವರ ಮಹತ್ವದ ಯೋಜನೆಗಳಲ್ಲಿ ಅತಿ ಮುಖ್ಯವಾದುವು - ಶ್ರೀಕಾಲ ಭೈರವೇಶ್ವರ ದೇವಾಲಯ ನಿರ್ಮಾಣ ಹಾಗೂ ವನಸಂವರ್ಧನ ಯೋಜನೆ.

ಶ್ರೀಗಳು ಇದ್ದೆಡೆ ಮೇಲುಕೀಳು ತಾರತಮ್ಯವಿಲ್ಲದ ಸಮಾನತೆಯದೇ ಅಧಿಪತ್ಯ. ಈಗಲೂ ಜಾತ್ರೆ ಪರ್ವಗಳಂತಹ ವಿಶೇಷ ದಿನಗಳಲ್ಲೂ ಶ್ರೀಗಳು ಎಲ್ಲಾ ಭಕ್ತರೊಂದಿಗೆ ಸಾಮೂಹಿಕ ಭೋಜನ ದಲ್ಲಿ ಪಾಲ್ಗೊಳ್ಳುತ್ತಾರೆ. ಮನುಕುಲದ ಒಳಿತಿನ ಚಿಂತನೆಯನ್ನೇ ಸದಾ ಆಶಿಸುವ ಶ್ರೀಗಳಲ್ಲಿ ಎದ್ದು ಕಾಣುವ ತ್ಯಾಗ, ಔದಾರ್ಯಗಳು ಅವರನ್ನು ಧರೆಗೆ ದೊಡ್ಡವರೆನಿಸಿದೆ; ಯುಗಯೋಗಿ, ಮನುಕುಲದ ಅಪೂರ್ವರು ಎಂಬ ಅಭಿಮಾನಕ್ಕೆ ಪಾತ್ರರನ್ನಾಗಿಸಿದೆ.

ಶ್ರೀಗಳ ನೇತೃತ್ವದಲ್ಲಿ ಶ್ರೀ ಆದಿಚುಂಚನಗಿರಿಯ ಅನೇಕ ಶಾಲಾ ಮತ್ತು ಉಪಶಾಲಾಮಠಗಳು ಶಿಕ್ಷಣ, ಧರ್ಮಪ್ರಸಾರದಂತಹ ಒಳಿತಿನ ಸೇವೆಸಲ್ಲಿಸುತ್ತಾ ಬರುತ್ತಿವೆ. ಬೆಂಗಳೂರಿನ ವಿಜಯನಗರ, ಕುಂಬಳಗೋಡು, ರಾಮನಗರದ ಅರ್ಚಕರ ಹಳ್ಳಿ, ಮಾಯಸಂದ್ರ, ಮಂಡ್ಯ, ಮೈಸೂರು, ಮೇಲುಕೋಟೆ, ಹೇಮಗಿರಿ, ಹಾಸನ, ಶಿವಮೊಗ್ಗ, ಚಿತ್ರದುರ್ಗ, ಶೃಂಗೇರಿ, ಚಿಕ್ಕಬಳ್ಳಾಪುರ, ಕನಕಪುರ, ದಸರೀಘಟ್ಟ, ಹೆಸರುಘಟ್ಟ, ಪಟ್ಟನಾಯಕನ ಹಳ್ಳಿ, ಧಾರವಾಡ, ಮಂಗಳೂರು, ತಮಿಳುನಾಡಿನ ಕಂಬಂ ಮುಂತಾದೆಡೆ ಶಾಖಾಮಠಗಳು ಜ್ಞಾನದಾನ, ಅನ್ನದಾನಗಳನ್ನು ಸಾಂಗವಾಗಿ ನಡೆಸಿಕೊಂಡು ಬರುತ್ತಿವೆ. ಇದೇ ಹಾದಿಯಲ್ಲಿ ಹಾಲತಿ, ಕವಲಗುಂದಿ, ಗುಂಗುರುಮೆಳೆ, ಹುಲಿಯೂರುದುರ್ಗ, ಬನ್ನಿಕುಪ್ಪೆ, ಬೆಂಗಳೂರಿನ ಆಲದಮರ ಹೊಸಳ್ಳಿ, ಹುಳಿಮಾವುಗಳಲ್ಲಿರುವ ಉಪಶಾಖಾ ಮಠಗಳು ನಡೆದು ಬರುತ್ತಿವೆ.

ಅಮೇರಿಕದ ಫ್ಲಿಂಟ್‌ಮಿಶಿಗನ್‌ನಲ್ಲಿ 'ಶ್ರೀ ಆದಿಚುಂಚನಗಿರಿ ಫೌಂಡೇಶನ್' ಸಮಾಜೋ ಧಾರ್ಮಿಕ ಸತ್ಕಾರ್ಯಗಳನ್ನು ಮಾಡುತ್ತಾ ಬಂದಿದೆ. ಈ ಎಲ್ಲಾ ಶಾಖಾಮಠಗಳ ಮೇಲ್ವಿಚಾರಣೆಗಾಗಿ ವಿದ್ಯಾವಂತರೂ, ವೇದಾಗಮ ಪಾರಂಗತರೂ ಆದ ಸನ್ಯಾಸಿಗಳನ್ನು ನೇಮಿಸಿ ಸ್ಥಳೀಯರ ಹಾಗೂ ದಾನಿಗಳ ನೆರವಿನೊಂದಿಗೆ ತಮ್ಮ ಮಾರ್ಗದರ್ಶನದಲ್ಲಿ ಒಳ್ಳೆಯ ಕೆಲಸಗಳನ್ನು ಮಾಡಲು ಸತ್ಪ್ರೇರಣೆ ನೀಡುತ್ತಾ ಬಂದಿದ್ದಾರೆ ಶ್ರೀಗಳು.

ಶಿಶುವಿಹಾರ, ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲೆಗಳು, ಪದವಿಪೂರ್ವ ಹಾಗೂ ಪದವಿ ಕಾಲೇಜುಗಳು, ಕೈಗಾರಿಕಾ ತರಬೇತಿ, ಶಿಕ್ಷಣ ತರಬೇತಿ, ನರ್ಸಿಂಗ್ ಕಾಲೇಜು, ವೈದ್ಯಕೀಯ ಕಾಲೇಜು, ಎಂಜಿನಿಯರಿಂಗ್ ಕಾಲೇಜು, ಆಯುರ್ವೇದ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆಗಳು ಇಂದು

ಆದಿಚುಂಚನಗಿರಿ ಶಿಕ್ಷಣ ಸಂಸ್ಥೆಯನ್ನು 'ಡೀಮ್ಡ್ ಯೂನಿವರ್ಸಿಟಿ' ಎಂದು ಸ್ವಾಯತ್ತತೆಯನ್ನು ನೀಡಬಹುದಾದ ಉನ್ನತಮಟ್ಟವನ್ನು ತಲುಪಿಸಿವೆ.

ಬಿ.ಜಿ. ನಗರದ ಆದಿಚುಂಚನಗಿರಿ ಆಸ್ಪತ್ರೆ ಹಾಗೂ ಬೆಂಗಳೂರಿನ ಆಯುರ್ವೇದಿಕ್ ಆಸ್ಪತ್ರೆಗಳಲ್ಲಿ ಬಡವರಿಗೆ ಉಚಿತ ತಪಾಸಣೆ, ಔಷಧಿ, ಊಟೋಪಚಾರದ ವ್ಯವಸ್ಥೆಯಿದೆ. ಮೈಸೂರಿನ ಕುವೆಂಪು ನಗರದಲ್ಲಿರುವ 'ಬಿ.ಜಿ.ಎಸ್. ಅಪೊಲೊ ಆಸ್ಪತ್ರೆ' ತನ್ನ ಸ್ವಚ್ಛ ಸುಂದರ ಕಟ್ಟಡ ಹಾಗೂ ಉತ್ಕೃಷ್ಟ ಸೇವೆಯಿಂದಾಗಿ 'ಒಳ್ಳೆಯ ಆಸ್ಪತ್ರೆ' ಎಂದು ಜನ ಮನ್ನಣೆ ಪಡೆದಿದೆ.

ಚಿಕ್ಕಮಗಳೂರು, ಚಿಕ್ಕಬಳ್ಳಾಪುರ, ಬೆಂಗಳೂರಿನ ಕೆಂಗೇರಿಯಲ್ಲಿರುವ ತಾಂತ್ರಿಕ ಮಹಾ ವಿದ್ಯಾಲಯದ ಪ್ರತಿಭಾವಂತ ವಿದ್ಯಾರ್ಥಿಗಳು ರ್‍ಯಾಂಕು ಗಳಿಸುವ ಮೂಲಕ ಆದಿಚುಂಚನಗಿರಿ ವಿದ್ಯಾಸಂಸ್ಥೆಗಳ ಹೆಮ್ಮೆಗೆ ಕಾರಣರಾಗಿದ್ದಾರೆ. ಇಲ್ಲಿರುವ ವಿದ್ಯಾರ್ಥಿನಿಲಯಗಳಲ್ಲಿ ಶುಚಿ ರುಚಿಯಾದ ಸಸ್ಯಾಹಾರ ಸೌಲಭ್ಯ ಹಾಗೂ ಒಳ್ಳೆಯ ವಾತಾವರಣವಿದೆ.

**ಆದಿಚುಂಚನಗಿರಿ ಶಿಕ್ಷಣ ಸಂಸ್ಥೆಗಳ ವೈಶಿಷ್ಟ್ಯಗಳೆಂದರೆ**

೧. ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಗ್ರಾಮೋದ್ಧಾರದ ಕಳಕಳಿಯಿಂದಾಗಿ ಬಹುತೇಕ ಶಾಲಾ ಕಾಲೇಜುಗಳು ಗ್ರಾಮೀಣ ಪ್ರದೇಶಗಳಲ್ಲೇ ಸ್ಥಾಪನೆಯಾಗಿವೆ.

೨. ನುರಿತ ಅಧ್ಯಾಪಕರಿಂದ ಉತ್ತಮ ಬೋಧನೆ.

೩. ಹಿಂದುಳಿದವರಿಗೆ, ದೀನದಲಿತರಿಗೆ ಉಚಿತ ಊಟ, ವಸತಿ, ಶಿಕ್ಷಣ.

೪. ಅಂಧ ಮಕ್ಕಳಿಗೆ ಪ್ರತ್ಯೇಕ ಶಾಲೆ. ಉಚಿತ ಊಟ, ವಸತಿ, ಶಿಕ್ಷಣ.

೫. ಕೆಲವು ಉನ್ನತ ಹಂತದ ಶಿಕ್ಷಣದಲ್ಲಿ ಆರ್ಥಿಕವಾಗಿ ದುರ್ಬಲರಾದವರಿಗೆ ಶುಲ್ಕ ರಿಯಾಯಿತಿ.

೬. ಸುಂದರವಾದ, ವಿಶಾಲವಾದ ಶಾಲಾಕಾಲೇಜುಗಳ ಕಟ್ಟಡಗಳಲ್ಲಿ ಗಾಳಿ ಬೆಳಕಿನ ಧಾರಾಳ ವಾತಾಯನ ವ್ಯವಸ್ಥೆ. ಸುಂದರ ಕೈತೋಟಗಳಿಂದಾಗಿ ಸ್ವಚ್ಛ ಮತ್ತು ಆರೋಗ್ಯಕರ ಪರಿಸರ.

೭. ಪಠ್ಯ ಶಿಕ್ಷಣದೊಂದಿಗೆ ಧರ್ಮ, ಸಂಸ್ಕೃತಿ, ಯೋಗ ಕಲಿಕೆ, ತನ್ಮೂಲಕ ವಿದ್ಯಾರ್ಥಿಗಳಲ್ಲಿ ನೈತಿಕ ಜವಾಬ್ದಾರಿಯನ್ನು ಮೂಡಿಸುವಿಕೆ.

೮. ನಗರಗಳಲ್ಲಿನ ಅನಗತ್ಯ ಆಕರ್ಷಣೆಗಳಿಂದ ಹೊರತಾದ, ಪ್ರಕೃತಿ ಸೊಬಗಿನ ನೆಲೆಗಳಲ್ಲಿ ಕಲಿಯುವುದರಿಂದ ಹೆಚ್ಚಾಗುವ ಏಕಾಗ್ರತೆ.

೯. ರ್‍ಯಾಗಿಂಗ್ ಇಲ್ಲದ ಸುಭದ್ರ ಹಾಗೂ ಗುರುಕುಲದಂತಹ ಪವಿತ್ರ ವಾತಾವರಣ ವಿದ್ಯಾರ್ಥಿಗಳ ಹೊಣೆಗಾರಿಕೆ ತಪ್ಪದಂತಹ ಶಿಸ್ತು.

೧೦. ಹುಡುಗರಿಗೆ, ಹುಡುಗಿಯರಿಗೆ ಪ್ರತ್ಯೇಕ ಹಾಸ್ಟೆಲ್ ವ್ಯವಸ್ಥೆ, ಅಲ್ಲಿ ಸುರಕ್ಷಿತ ಹಾಗೂ ಸುಸಜ್ಜಿತ ಪರಿಸರ. ಸಸ್ಯಾಹಾರ ಮಾತ್ರ ಲಭ್ಯ.

೧೧. ವಿದೇಶಿಯರಿಗೆ, ಶ್ರೀಮಂತರಿಗೆ, ಅನಿವಾಸಿ ಭಾರತೀಯರಿಗೆ ಕೇಂದ್ರೀಯ ಪಠ್ಯವಿರುವ ಅಂತರಾಷ್ಟ್ರೀಯ ಶಾಲೆಗಳು ಬೆಂಗಳೂರಿನ ಕುಂಬಳಗೋಡು, ಮಂಗಳೂರು ಮತ್ತು ಇದೀಗ

ನವದೆಹಲಿಯ ದ್ವಾರಕೆಯಲ್ಲಿ. ಇವಲ್ಲದೆ ಕನ್ನಡ, ಇಂಗ್ಲಿಷ್ ಮಾಧ್ಯಮಗಳಲ್ಲಿನ ವಸತಿ ಶಾಲೆಗಳು ಮಾಯಸಂದ್ರ, ಶಿವಮೊಗ್ಗದಲ್ಲಿವೆ.

೧೨. ಅಂತರಾಷ್ಟ್ರೀಯ ಮಟ್ಟದಲ್ಲಿ ಕೊಲಂಬಿಯಾ ವಿಶ್ವವಿದ್ಯಾಲಯದ ಸಹಯೋಗದೊಂದಿಗೆ ಪತ್ರಿಕೋದ್ಯಮ, ಸಮೂಹ ಸಂವಹನದಲ್ಲಿ ಸ್ನಾತಕೋತ್ತರ ಡಿಪ್ಲೊಮಾ ತರಗತಿಗಳು ನಡೆಯುತ್ತಿವೆ.

ಆದಿಚುಂಚನಗಿರಿ ಮಠ ತನ್ನದೇ ಆದ ಧಾರ್ಮಿಕ ಆಚರಣೆಗಳನ್ನು ನಡೆಸಿಕೊಂಡು ಬರುತ್ತಿದೆ. ಮಠಗಳಿರುವುದೇ ಧರ್ಮ ಜಾಗ್ರತಿಯ ಮೂಲಕ ಜನರನ್ನು ಸಂಘಟಿಸಲು. ಶ್ರೀ ಕ್ಷೇತ್ರದ ಧಾರ್ಮಿಕ ಹಾಗೂ ಆಧ್ಯಾತ್ಮಿಕ ವಿಶೇಷ ಸಮಾರಂಭಗಳಲ್ಲಿ ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಭಕ್ತರು ಸಂದಣಿಸುತ್ತಾರೆ; ಭಕ್ತಿಭಾವ ಪರವಶತೆಯಿಂದ ಸೇವೆ ಸಲ್ಲಿಸುತ್ತಾರೆ.

ಆಷಾಢ ಶುದ್ಧ ಪೂರ್ಣಿಮೆಯಂದು ನಡೆಯುವ ಗುರು ವಂದನೆ, ಪ್ರತಿ ತಿಂಗಳ ಅಮಾವಾಸ್ಯೆ ಹಾಗೂ ಭಾನುವಾರಗಳಂದು ನಡೆಯುವ ಶ್ರೀಕಾಲ ಭೈರವೇಶ್ವರನ ವಿಶೇಷ ಪೂಜೆ, ನಿತ್ಯ ನಡೆಯುವ ತ್ರಿಕಾಲ ಪೂಜೆ, ಶ್ರೀಗಳ ವಾರ್ಷಿಕ ಪಟ್ಟಾಭಿಷೇಕ ಸೆಪ್ಟಂಬರ್ ೨೫ರಂದು ನಡೆಯುವ ಅಂಗವಾಗಿ ಹಿಂದಿನ ಎರಡು ದಿನಗಳ ಮುಂಚಿತವಾಗಿ ಪ್ರಾರಂಭವಾಗುವ ಜಾನಪದ ಕಲಾಮೇಳ, ಶರನ್ನವ ರಾತ್ರಿಯ ಸಂದರ್ಭದ ಹತ್ತು ದಿನಗಳ ವೈವಿಧ್ಯ ಹಾಗೂ ವೈಭವದ ಪೂಜಾವಿಧಿಗಳು, ಒಂದು ವಾರ ನಡೆಯುವ ಶಿವರಾತ್ರಿ ಜಾತ್ರಾ ಮಹೋತ್ಸವದಂದು ನಡೆಯುವ ಶಿವನ ಪಂಚರೂಪಗಳಲ್ಲದೆ ಹೋಳಿ ಹುಣ್ಣಿಮೆಯಂದು ಗಂಗಾಧರೇಶ್ವರ ಹಾಗೂ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳ ಅಡ್ಡಪಾಲಕಿ ಉತ್ಸವಗಳು ಕಿಕ್ಕಿರಿದ ಜನ ಸಮೂಹದ ನಡುವೆ ತುಂಬು ಸಂಭ್ರಮದಿಂದ ನಡೆಯುತ್ತವೆ. ಜಾತ್ರಾ ಸಂದರ್ಭದಲ್ಲಿ ಜರಗುವ ಸರ್ವಧರ್ಮ ಸಮ್ಮೇಳನ ಉಪಯುಕ್ತ ಕಾರ್ಯಕ್ರಮ.

ದಿನವೂ ಕ್ಷೇತ್ರಪಾಲಕನಾದ ಶ್ರೀ ಕಾಲ ಭೈರವೇಶ್ವರ, ಸ್ತಂಬಾಂಬೆ, ಮಾಳಾಂಬೆಯರಿಗೆ ಆಗ ಮೋಕ್ತರೀತ್ಯಾ ಅಭಿಷೇಕಾದಿ ಪೂಜಾ ಕ್ರಮಗಳು ನಡೆಯುತ್ತವೆ. ಪರ್ವದಿನಗಳಲ್ಲಿ ಕ್ಷೀರಾಭಿಷೇಕ, ಹವನ ಹೋಮಾದಿಗಳೊಂದಿಗೆ ವಿಶೇಷ ಅಲಂಕಾರಗಳಿರುತ್ತವೆ.

ಪರಮೇಶ್ವರನು ಪಂಚರೂಪಿಯಾಗಿ ಆದಿಚುಂಚನಗಿರಿಯಲ್ಲಿ ನೆಲೆಸಿರುವನೆಂಬ ಪ್ರತೀಕವಾಗಿ ಇಲ್ಲಿ ಪಂಚಲಿಂಗಗಳಿವೆ. ಗಂಗಾಧರೇಶ್ವರ - ಪಾರ್ವತೀದೇವಿ ದೇವಾಲಯ, ಚಂದ್ರಮೌಳೀಶ್ವರ, ಅನ್ನಪೂರ್ಣೇಶ್ವರಿ ಧ್ಯಾನ ಮಂದಿರ, ಗವಿಸಿದ್ಧೇಶ್ವರ, ಮಲ್ಲೇಶ್ವರ, ಕತ್ತಲೆ ಸೋಮೇಶ್ವರ - ಇವುಗಳೇ ಪಂಚಲಿಂಗಗಳು. ಬೆಟ್ಟದ ಬಾಗಿಲಿಗೆ ಇರುವ ಪುಟ್ಟ ಗುಡಿಯಲ್ಲಿ ಶ್ರೀಕಾಲ ಭೈರವೇಶ್ವರ, ಹೊರಗೆ ಅವನ ಬಲ ಭಾಗಕ್ಕೆ ಸ್ತಂಬಾಂಬೆ, ಎಡಭಾಗಕ್ಕೆ ಮಾಳಾಂಬೆ ಸಹಿತ ಪ್ರತಿಷ್ಠಿತನಾಗಿದ್ದಾನೆ.

ಶ್ರೀ ಕಾಲಭೈರವ ಸನ್ನಿಧಿಯ ಸಮೀಪವೇ ಹಿಂದಿನ ಸಿದ್ಧಪೀಠಸ್ಥ ಗುರುಗಳ ಸಮಾಧಿ ಮಂಟಪಗಳಿವೆ. ಗದ್ದುಗೆಗಳಿಗೂ ಪೂಜೆ ಮಾಡುತ್ತಾರೆ. ಚಿನ್ನದ ರೇಕುಗಳ ವಿಜಯಲಕ್ಷ್ಮಿ ಕೆತ್ತನೆಯ ಮೂರಡಿ ಎತ್ತರ, ನಾಲ್ಕಡಿ ಅಗಲದ ಸಿದ್ಧ ಸಿಂಹಾಸನವಿದ್ದು ಇದನ್ನು ಶ್ರೀಗಳು ತಮ್ಮ ಪಟ್ಟಾಭಿ ಷೇಕೋತ್ಸವ, ನವರಾತ್ರಿ, ಶಿವರಾತ್ರಿಗಳಲ್ಲಿ ಆರೋಹಿಸಿ ಷೋಡಷ ಪೂಜೆಯನ್ನು ಸ್ವೀಕರಿಸುತ್ತಾರೆ.

ಸಾಂಪ್ರದಾಯಿಕವಾಗಿ ಪೀತಾಂಬರ ಉಟ್ಟು, ಕಿರೀಟ, ರುದ್ರಾಕ್ಷಿ ಸರಗಳನ್ನು ಧರಿಸಿ ತ್ರಿಪುಂಡ್ರಧಾರಿಯಾಗಿ ಜ್ವಾಲಾಪೀಠಾರೋಹಣ ಮಾಡುತ್ತಾರೆ. ಅವರ ಸಾತ್ವಿಕ ತೇಜಸ್ಸು, ಸಾಸಿವೆ ಹಾಕಿದರೂ, ಸಿಡಿಯು ವಂತಹ ಶಕ್ತಿಯುಳ್ಳ ಪರಶಿವನ ತಪೋ ತಾಣ ಜ್ವಾಲಾ ಪೀಠದ ಮೇಲೆ ಕುಳಿತು ದರ್ಶನ ನೀಡುವ ಗುರುಗಳನ್ನು ಕಂಡ ಭಕ್ತಿಭಾವುಕ ಮನಸ್ಸುಗಳು ಅವರು ಸಾಕ್ಷಾತ್ ಶಿವನೆಂದೇ ಭಾವಿಸುತ್ತಾರೆ, ನಮಿಸುತ್ತಾರೆ, ಜಯಕಾರ ಮಾಡುತ್ತಾರೆ. ಇವೆಲ್ಲವೂ ಆ ಸಂದರ್ಭಕ್ಕೆ ಭಕ್ತಿಪರವಶತೆಯ ವಿದ್ಯುತ್ ಸಂಚಾರವನ್ನುಂಟುಮಾಡುತ್ತದೆ.

ಜ್ವಾಲಾಪೀಠವನ್ನು ಶ್ರೀ ಸಾಮಾನ್ಯರು ಸ್ಪರ್ಶಿಸಲಾಗದು ಎಂಬ ಕಾರಣಕ್ಕೆ ಆ ಪೀಠಕ್ಕೆ ನೇರವಾಗಿ ಮೇಲಿನ ಹಂತದಲ್ಲಿ ಶಿವನ ವಿಶ್ವರೂಪವನ್ನು ನಿಲ್ಲಿಸಿದ್ದಾರೆ. ಸುತ್ತಲಿನ ಕನ್ನಡಿಯಲ್ಲಿ ಅಸಂಖ್ಯವಾಗಿ ಪ್ರತಿ ಬಿಂಬಿತವಾಗುವ ಶಿವಬಿಂಬ ಭಕ್ತಜನಕ್ಕೆ ವಿಸ್ಮಯಾನಂದವನ್ನುಂಟುಮಾಡುತ್ತದೆ. ಏಕಶಿಲಾ ಬಸವ, ಚೋಳರು ಶ್ರೀಕ್ಷೇತ್ರಕ್ಕೆ ನಡೆದುಕೊಳ್ಳುತ್ತಿದ್ದ ಸಂಕೇತವಾಗಿರುವ ಚೇಳೂರ ಕಂಬ, ತಿಮ್ಮಪ್ಪನ ರಥವನ್ನು ಕದ್ದು ತಂದ ಭೈರವನನ್ನು ಹಿಡಿಯಲು ಬಂದ ಸರ್ಪರಾಜ ಆದಿಶೇಷನನ್ನು ಭೈರವ ಸೋಲಿಸಿದ ಸ್ಥಳವಾದ ಗಳಿಗಲ್ಲು, ಕೂಗು ಬಂಡೆ, ಸಪ್ತೇಸ್ವಾಮಿ ಗುಹೆ, ಶಿವನ ಜಟೆಯಿಂದ ಬಿಂದುರೂಪಿಯಾಗಿಳಿದು ಬಂದು ಗಂಗೆ ನೆಲೆಸಿದ ಬಿಂದು ಸರೋವರ, ಶ್ರೀಗಳು ನಿರ್ಮಿಸಿದ ಮುನ್ನೂರು ಅಡಿ ಉದ್ದ, ಮುನ್ನೂರು ಅಡಿ ಅಗಲ ಮತ್ತು ಹದಿನಾರು ಅಡಿ ಆಳದ ಗ್ರಾನೈಟ್ ಶಿಲೆಯ ಹದಿನಾರು ಸೋಪಾನವುಳ್ಳ 'ಭೈರವೇಶ್ವರ ಪುಷ್ಕರಿಣಿ' ಅದರ ಮಧ್ಯೆ ರಥಾರೂಢನಾದ ಸುಂದರ ಭೈರವಮೂರ್ತಿಯಿರುವ ಭೈರವ ವೇದಿಕೆ, ಪುಷ್ಕರಿಣಿಯಲ್ಲಿ ತಮ್ಮ ಆರಾಧ್ಯದೈವವಾದ ಶ್ರೀ ಗುರು ಬಾಲಗಂಗಾಧರನಾಥ ಸ್ವಾಮಿಜಿಯವರನ್ನು ಪುಷ್ಪಾಲಂಕೃತ ಮೋಹಕ ತೆಪ್ಪದಲ್ಲಿ ಕೂರಿಸಿ ನಡೆಸುವ ತೆಪ್ಪೋತ್ಸವ - ಇವೆಲ್ಲವೂ ಶ್ರೀ ಗಿರಿಯಲ್ಲಿ ನೋಡುವಂತಹುದು.

ಇಂದಿಗೂ ಶ್ರೀ ಕಾಲಭೈರವೇಶ್ವರನಿಗೆ ನಾಲ್ಕು ಕಂಬಗಳ ಪುಟ್ಟ ಗುಡಿಯೇ ಇದೆ. ಇದೀಗ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು ಭಾರತದೆಲ್ಲೆಡೆ ಕ್ಷೇತ್ರಪಾಲಕನಾಗಿರುವ ಅವನಿಗೆ ಆದಿಚುಂಚನಗಿರಿಯಲ್ಲಿ ನೂತನ ದೇವಾಲಯವನ್ನು ನಿರ್ಮಿಸಿ ಪ್ರಧಾನ ದೇವತೆಯಾಗಿ ಪ್ರತಿಷ್ಠಾಪಿಸ ಲಿದ್ದಾರೆ. ನಾಥ ಪಂಥದ ಅಧಿದೈವವಾಗಿರುವ ಶ್ರೀಕಾಲ ಭೈರವೇಶ್ವರ ದೇವಾಲಯ ಇನ್ನೂರೈವತ್ತು ಅಡಿ ಉದ್ದ, ಒಂದುನೂರ ಐವತ್ತು ಅಡಿ ಅಗಲ, ದ್ರಾವಿಡ ಶೈಲಿಯ ಪಂಚಗೋಪುರಗಳುಳ್ಳ ದೇವಾಲಯ. ಅದನ್ನು ಕಟ್ಟುತ್ತಿರುವ ಮುಖ್ಯಸ್ಥಪತಿಯ ಪ್ರಕಾರ 'ಇದು ಭಾರತದಲ್ಲೇ ಅತಿ ದೊಡ್ಡದಾದ ಕಾಲ ಭೈರವೇಶ್ವರ ದೇವಾಲಯ'. ಸಂಪೂರ್ಣ ಶಿಲೆಯಲ್ಲೇ ನಿರ್ಮಾಣವಾಗುವ ಈ ದೇವಾಲಯದಲ್ಲಿ ಭೈರವೇಶ್ವರನಿಗೆ ಎದುರಾಗಿ ಪುರಾಣೋಕ್ತವಾಗಿರುವಂತೆ ಅಷ್ಟ ಭೈರವರು, ಗಣಪತಿ, ಸುಬ್ರಹ್ಮಣ್ಯ, ಕಂಬದಮ್ಮ, ಚೌಡೇಶ್ವರಿ ಮುಂತಾದ ಏಕಕೃಷ್ಣ ಶಿಲಾಮೂರ್ತಿಗಳನ್ನೂ ಪ್ರತಿಷ್ಠಾಪಿಸ ಲಿದ್ದಾರೆ. ಶ್ರೀಗಳ ಭೈರವ ಭಕ್ತಿಯ ಘನ ಸಾಕಾರವೇ ಈ ಪವಿತ್ರ ದೇವಾಲಯ.

ಪರಿಸರವಾದಿಯೂ, ನಿಸರ್ಗದ ಆರಾಧಕರೂ ಆದ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಮತ್ತೊಂದು ಮಹೋನ್ನತ ಯೋಜನೆಯೆಂದರೆ 'ಕರ್ನಾಟಕ ವನ ಸಂವರ್ಧನ ಯೋಜನೆ'. ಇತರ

ಕೆಲವು ಮಠಾಧೀಶರು, ಪರಿಸರತಜ್ಞರ ಸಹಕಾರದೊಂದಿಗೆ ರೂಪು ತಳೆದ ಈ ಯೋಜನೆ ನಾಶವಾಗುತ್ತಿರುವ ಪರಿಸರವನ್ನುಳಿಸಲು, ಗಿಡಮರಗಳನ್ನು ಬೆಳೆಸಿ ಸಂರಕ್ಷಿಸಲು ತನ್ಮೂಲಕ ಸಮಸ್ತ ಜೀವರಾಶಿಗಳಿಗೂ ಹಣ್ಣುಹಂಪಲು, ನಿರುದ್ಯೋಗ ನಿವಾರಿಸಲು ಸಸ್ಯ ವಿತರಣಾ ಕಾರ್ಯಕ್ರಮದ ಮೂಲಕ ಉಪಯುಕ್ತ ಅಂಶಗಳನ್ನು ಕರ್ನಾಟಕದ ಎಲ್ಲಾ ಭಾಗಗಳಲ್ಲೂ ಹಮ್ಮಿಕೊಂಡು ಕಾರ್ಯನಿರತವಾಗಿರುವ ಕ್ರಿಯಾಶೀಲ ಯೋಜನೆಯಾಗಿದೆ.

ಐದು ವರ್ಷಗಳಲ್ಲಿ ಐದು ಕೋಟಿ ಗಿಡ ಬೆಳೆಸುವ ಮಹದಾಸೆ ಶ್ರೀಗಳದು. ಇತ್ತೀಚೆಗೆ ಕೇರಳ ಸರ್ಕಾರ, ಕರ್ನಾಟಕ ಸರ್ಕಾರ ತೋಟಗಾರಿಕಾ ಇಲಾಖೆಯ ಸಹಯೋಗದೊಂದಿಗೆ ಶ್ರೀಗಳ ನೇತೃತ್ವದಲ್ಲಿ ಮಾಯಸಂದ್ರದ ಕಲ್ಪತರು ಆಶ್ರಯದಲ್ಲಿ ತೆಂಗಿನ ಬೆಳೆಯ ಪರಿಷ್ಕರಣದ ಜಾಗೃತಿ ಶಿಬಿರ ನಡೆದಿದ್ದು ತೆಂಗಿನ ಬೆಳೆಯ ಸಂರಕ್ಷಣೆಯ ಬಗ್ಗೆ ಮಾಹಿತಿ ಒದಗಿಸುವಲ್ಲಿ ಸಹಕಾರಿಯಾಗಿತ್ತು. ಅಂದು ಫಲಾನುಭವಿಗಳಿಗೆ ಉಚಿತ ತೆಂಗಿನ ಸಸಿ ವಿತರಿಸಲಾಗಿದ್ದು ಬಹುಸಂಖ್ಯೆಯಲ್ಲಿ ಉತ್ಸಾಹಿ ಮಕ್ಕಳು ಭಾಗವಹಿಸಿದ್ದುದು ಒಂದು ವಿಶೇಷ. 'ಮುಂದಿನ ತಲೆಮಾರು ಹೇಗೆ ಭೂಮಿಯನ್ನೇ ನಂಬಿ ಕೃಷಿಯಾಧಾರಿತ ಬದುಕನ್ನು ರೂಢಿಸಿಕೊಳ್ಳಬೇಕಾದ ಅನಿವಾರ್ಯತೆ ತಲೆದೋರಿದೆ. ಅದಕ್ಕಾಗಿ ಅವರು ಪರಿಸರ ವರ್ಧನೆಯತ್ತ ಗಮನಹರಿಸಬೇಕಾದ ಅಗತ್ಯ'ದ ಬಗ್ಗೆ ಶ್ರೀಗಳು ಆಡಿದ ಮಾತುಗಳು ಸಂದರ್ಭೋಚಿತವೂ, ಅರ್ಥಪೂರ್ಣವೂ ಆಗಿದ್ದಿತು.

ಪರಿಸರಶುದ್ಧಿ, ಪೌಷ್ಠಿಕಾಂಶದ ಆಹಾರ, ಗೋವುಗಳಿಗೆ ಉತ್ತಮ ಮೇವು, ಅಂತರ್ಜಲ ಸಮೃದ್ಧಿ ಇವೆಲ್ಲವೂ ವನಸಂವರ್ಧನ ಯೋಜನೆಯ ಗುಣಾತ್ಮಕ ಅಂಶಗಳಾಗಿವೆ. ಮಠಾಧೀಶರೊಬ್ಬರು ಇಂತಹ ಬಹೂಪಯೋಗಿ ಯೋಜನೆಯ ರೂವಾರಿಯಾಗಿರುವುದು ಹೆಮ್ಮೆಯ ಸಂಗತಿ. ಬಿ.ಜಿ.ಎಸ್. ಆರ್ಚರ್ಡ್ಸ್ (ಬೆಂಗಳೂರು)ಗೆ 'ವನಶ್ರೀ' ಪ್ರಶಸ್ತಿ ಸಂದಾಯವಾಗಿದೆ. ಒಂದು ಲಕ್ಷ ಗಿಡಗಳಿರುವ ಚಿಕ್ಕಬಳ್ಳಾಪುರದ ತಾಂತ್ರಿಕ ಕಾಲೇಜಿನ 'ಕಾರ್ಗಿಲ್ ವನ' ಶ್ರೀಗಳ ಪರಿಸರ ಪ್ರೀತಿ, ಶ್ರೀ ಮಠದ ಪರಿಸರ ಪ್ರಜ್ಞೆಗೆ ಸಾಕ್ಷಿಯಾಗಿದೆ.

ಏಕಕಾಲಕ್ಕೆ ವಿವಿಧ ಆಯಾಮಗಳಲ್ಲಿ ಅಭೂತ ಪೂರ್ವ ಸಾಧನೆಗಳನ್ನು ಮಾಡುತ್ತಾ ಬಂದಿರುವ ಶ್ರೀಗಳ ಹಾಗೂ ಶ್ರೀಮಠದ ಮೇಲೆ ಸಮಕಾಲೀನ ಸಾಹಿತ್ಯದಲ್ಲಿ ಅಮೂಲ್ಯ ಮಾಹಿತಿಗಳಿವೆ. ನೂರಾರು ಗ್ರಂಥ ಪ್ರಕಟಣೆ ಮಾಡಿ ಧಾರ್ಮಿಕ ಸಾಹಿತ್ಯದ ಶ್ರೇಷ್ಠತೆಯನ್ನು ಸಾರುತ್ತಿರುವ ಶ್ರೀಮಠದ ಸಾಹಿತ್ಯಕ ಪ್ರೋತ್ಸಾಹವೂ ಗಣನೀಯ. ಅತ್ಯುತ್ತಮ ರೀತಿಯಲ್ಲಿ ಸಾಧನೆ ಮಾಡಿದ ವಿವಿಧ ಗಣ್ಯರಿಗೆ 'ಚುಂಚಶ್ರೀ' ಪ್ರಶಸ್ತಿ ಪ್ರಧಾನ ಮಾಡುವ ಪರಿಪಾಠ ಶ್ರೀಗಳದು. ತಮ್ಮ ವಾರ್ಷಿಕ ಪಟ್ಟಾಭಿಷೇಕೋತ್ಸವದಂದು ಜಾನಪದ ಕಲಾವಿದರೊಂದಿಗೆ ಐದು ಜನ ಗಣ್ಯರನ್ನು 'ಚುಂಚಶ್ರೀ' ಪ್ರಶಸ್ತಿ (ರೂ. ಇಪ್ಪತ್ತು ಸಾವಿರ ನಗದು, ಪ್ರಶಸ್ತಿ ಪತ್ರಗಳನ್ನೊಳಗೊಂಡ ಪ್ರತಿಷ್ಠಿತ ಪ್ರಶಸ್ತಿ) ನೀಡಿ ಗೌರವಿಸುವ ಸತ್ಸಂಪ್ರದಾಯಕ್ಕೆ ನಾಂದಿ ಹಾಡಿದವರೇ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು. ಆದಿಚುಂಚನಗಿರಿಯ ಸಾಂಸ್ಕೃತಿಕ ಚರಿತ್ರೆಗೆ ತಮ್ಮದೇ ಆದ ಛಾಪನ್ನು ವಿಶೇಷ ರೀತಿಯಲ್ಲಿ ಮೂಡಿಸಿದವರೇ ಇವರು. ಶ್ರೀಮಠದ ಸಾಮಾಜಿಕ, ಶೈಕ್ಷಣಿಕ, ಧಾರ್ಮಿಕ, ಸಾಹಿತ್ಯಕ ಸಾಧನೆಗಳ

ಹಿಂದಿರುವ ಪ್ರೇರಕ ಶಕ್ತಿ - ಮೇರುವ್ಯಕ್ತಿ ಶ್ರೀಗಳು ಚುಂಚನಗಿರಿಯ ಇತಿಹಾಸವಲ್ಲಿ ಅನನ್ಯ ದಾಖಲೆಗಳನ್ನು ಸೃಷ್ಟಿಸಿರುವರು.

ಮಹಾಕವಿ ಕುವೆಂಪು ಅವರಿಂದಲೇ ''ವಿಶ್ವ ಮಾನವ ಪ್ರಜ್ಞೆಯನ್ನು ಶ್ರೇಷ್ಠವಾಗಿ ಸಾರುತ್ತಿರುವ ಸರ್ವೋತ್ಕೃಷ್ಟರು ಸ್ವಾಮಿಗಳು'' ಎಂಬ ಶ್ಲಾಘನೆಗೆ ಪಾತ್ರರಾದವರು.

ಮಠಗಳಿಂದ ಸಮಾಜಕ್ಕೆ ಆಗುವ ಉಪಯೋಗಗಳು, ನೆಮ್ಮದಿ ರಹಿತವಾದ ಇಂದಿನ ಯಾಂತ್ರಿಕ ಬದುಕಿನಲ್ಲಿ ಧರ್ಮದಿಂದ ವಿಜೃಂಭಿಸುವ ಮಾನವೀಯ ಮೌಲ್ಯಗಳು, ಮಠಾಧೀಶರೊಬ್ಬರು ವಿಚಾರವಂತರಾದರೆ ಉಂಟಾಗುವ ಪ್ರಗತಿ ಮೊದಲಾದ ಒಳಿತಿಗೆ ಆದರ್ಶವೇ ಆದಿಚುಂಚನಗಿರಿ ಮಠ ಹಾಗೂ ಅದನ್ನು ಮುನ್ನಡೆಸುತ್ತಿರುವ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು.

# ಗೌಡ ಜನಾಂಗದ ಮೇರುವ್ಯಕ್ತಿ - ಶ್ರೀ ಕುರುಂಜಿ ವೆಂಕಟ್ರಮಣ ಗೌಡ

ಪ್ರೊ. ಡಿ. ಜವರೇಗೌಡ

ಶಿಕ್ಷಣ ರಂಗದಲ್ಲಿ ರಾಷ್ಟ್ರ ಮಟ್ಟದಲ್ಲಿ ಪ್ರಖ್ಯಾತರಾಗಿರುವ ಶ್ರೀ ಕುರುಂಜಿ ವೆಂಕಟ್ರಮಣ ಗೌಡರ ಜೀವನ ಮತ್ತು ಸಾಧನೆಯ ಅರಿವು ಒಂದು ಚೇತೋಹಾರಿ ವಿಷಯವಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದೂ ಮೂಲೆ ಗುಂಪಾಗಿದ್ದ ಸುಳ್ಯ ಇಂದು ಮೈಗೊಡವಿ ಮೇಲೆದ್ದು ಪ್ರಸಿದ್ಧ ಕೇಂದ್ರವಾಗಿ ರಾಷ್ಟ್ರದೆಲ್ಲೆಡೆ ಚಿರಪರಿಚಿತವಾಗಿದೆ. ಮಣ್ಣಿನ ಮಗನೊಬ್ಬ ಏಕಾಂಗಿಯಾಗಿ ಯಾರ ಆರ್ಥಿಕ ನೆರವೂ ಇಲ್ಲದೆ ತನ್ನೊಬ್ಬನ ಪರಿಶ್ರಮದ ದುಡಿಮೆಯನ್ನೇ ಧಾರೆಯೆರೆದು ಇಷ್ಟೊಂದು ಬೃಹತ್ ಸಂಖ್ಯೆಯ ವಿದ್ಯಾಸಂಸ್ಥೆಗಳನ್ನು ಕಟ್ಟಿ, ಬೆಳೆಸಿದ ಉದಾಹರಣೆ ನಮ್ಮ ದೇಶದಲ್ಲೇ ಇನ್ನೊಂದಿರದು. ಇದರೊಂದಿಗೆ ಇಷ್ಟೇ ಮಹತ್ವದ ಹಲವಾರು ಸಮಾಜೋದ್ಧಾರಕ ಕಾರ್ಯ ಚಟುವಟಿಕೆಗಳು ಶ್ರೀ ಕುರುಂಜಿಯವರ ವ್ಯಕ್ತಿತ್ವಕ್ಕೆ ಭದ್ರತೆಯನ್ನು ತಂದಿತ್ತಿವೆ. ಅವುಗಳ ಅರಿವು ಸಾಧಕರಿಗೆ ಸ್ಫೂರ್ತಿಯ ಸೆಲೆಯಾಗಬಲ್ಲದು.

ಶ್ರೀ ಕುರುಂಜಿ ಮಹಾಲಿಂಗ ಗೌಡ ಮತ್ತು ಶ್ರೀಮತಿ ಲಕ್ಷ್ಮಿ ದಂಪತಿಗಳ ದ್ವಿತೀಯ ಪುತ್ರರಾಗಿ ದಿನಾಂಕ ೨೬-೧೨-೧೯೨೮ರಲ್ಲಿ ಶ್ರೀ ಕುರುಂಜಿ ವೆಂಕಟ್ರಮಣ ಗೌಡರು ಜನ್ಮ ತಾಳಿದರು. ತಂದೆ ಅಧ್ಯಾಪಕರಾಗಿದ್ದು ಯಕ್ಷಗಾನ ಭಾಗವತಿಕೆಯಲ್ಲಿ ಹೆಸರುವಾಸಿಯಾಗಿದ್ದರು. ಆರ್ಥಿಕವಾಗಿ ಅಷ್ಟೇನೂ ಸ್ಥಿತಿವಂತರಲ್ಲದ ಕುಟುಂಬದಲ್ಲಿ ಜನಿಸಿದ ಇವರು ಬಾಲ್ಯವನ್ನು ಕಷ್ಟಗಳ ಸರಮಾಲೆಯಲ್ಲಿಯೇ ಕಳೆಯಬೇಕಾಯಿತು. ಆದರೆ ಬೆಳೆಯುವ ಪೈರು ಮೊಳಕೆಯಲ್ಲಿಯೇ ಗುಣ ತೋರುವಂತೆ ಶಾಲೆಯಲ್ಲಿನ ಎಲ್ಲ ಚಟುವಟಿಕೆಯಲ್ಲಿ ಮುಂದಿದ್ದರೂ ಆರ್ಥಿಕ ಮುಗ್ಗಟ್ಟು ಮತ್ತು ತಂದೆಯವರ ದೇಹಾಂತ್ಯದಿಂದಾಗಿ ಓದಿಗೆ ಪೂರ್ಣ ವಿರಾಮ ಬಿದ್ದಿತು. ನಂತರ ಎಡೆಬಿಡದೆ ಬಂದ ಕಷ್ಟಗಳಿಗೆ ಜಗ್ಗದೆ ಅವುಗಳನ್ನು ಛಲದಿಂದ ಎದುರಿಸಿದರು. ಆತ್ಮವಿಶ್ವಾಸದಿಂದ ಮುಂದಡಿಯಿಟ್ಟರು. ಅವಕಾಶಗಳಿಗಾಗಿ ಕಾಯದೆ ಅವುಗಳನ್ನು ಸೃಷ್ಟಿಸಿಕೊಂಡರು. ತೊಡರುಗಳಾಗಿ ಕಾಡಲು ಬಂದವುಗಳನ್ನು ಮುರಿದು ಮೆಟ್ಟಿಲಾಗಿಸಿ ಕೊಂಡು ಮೇಲೇರಿದರು, ಪರಿಶ್ರಮ ಮತ್ತು ಪ್ರಾಮಾಣಿಕ ದುಡಿಮೆಯ ಮೂಲಕ ತಮ್ಮನ್ನು ತಾವೇ ರೂಪಿಸಿಕೊಂಡರು. ಯಾರೂ ಊಹಿಸದಿದ್ದ ಎತ್ತರಕ್ಕೇರಿದರು. ಶ್ರೀಮಂತಿಕೆ ಮತ್ತು ಹೃದಯ ಶ್ರೀಮಂತಿಕೆಗಳೆರಡನ್ನೂ ಸಮಾನವಾಗಿ ಬೆಳೆಸಿಕೊಂಡರು ಮತ್ತು ತಾವು ನಿತ್ಯವೂ ಹೋರಾಟದ ಕುಲುಮೆಯಲ್ಲಿ ಬೆಂದರೂ ಸಮಾಜಕ್ಕೆ ಹೂವಾದರು.

ಶ್ರೀಯುತರ ಸುಳ್ಯದೊಂದಿಗಿನ ಗಂಟು - ನಂಟು ಒಡಲು ಉಸಿರಿನಂತೆ. ಸುಳ್ಯದಿಂದ ಇವರನ್ನು

ಇವರಿಂದ ಸುಳ್ಯವನ್ನು ಪ್ರತ್ಯೇಕಿಸಿ ನೋಡಲಾಗದು. ತಮ್ಮೆಲ್ಲಾ ಸಾಧನೆಗೆ ಸುಳ್ಯವನ್ನೇ ವೇದಿಕೆಯಾಗಿ ಮಾಡಿಕೊಂಡಿರುವ ಇವರು ಈ ಪಟ್ಟಣದ ಚಿತ್ರಣವನ್ನೇ ಬದಲಾಯಿಸಿದ್ದಾರೆ. ೧೯೫೫ರಿಂದಲೂ ತಮ್ಮನ್ನು ಸಾರ್ವಜನಿಕ ಜೀವನದಲ್ಲಿ ತೊಡಗಿಸಿಕೊಂಡು ಬಂದಿರುವ ಇವರು ಸುಳ್ಯದ ಅಭಿವೃದ್ಧಿಗಾಗಿ ಮಾಡಿರುವ ಸೇವೆ ಅಪಾರ. ಸುಳ್ಯ ಒಂದು ತಾಲೂಕಾಗಿ ಅಸ್ತಿತ್ವಕ್ಕೆ ತರುವಲ್ಲಿ ಮತ್ತು ಅತೀ ಅಗತ್ಯವಿದ್ದ ಖಜಾನೆ, ಬಸ್‌ಸ್ಟ್ಯಾಂಡ್, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ನ್ಯಾಯಾಲಯ ಸ್ಥಾಪನೆಗಾಗಿ ಇವರು ಅವಿರತವಾಗಿ ಮಾಡಿದ ಹೋರಾಟದ ನೆನಪು ಜನರ ಸ್ಮೃತಿಪಟದಲ್ಲಿ ಅಚ್ಚೊತ್ತಿದಂತಿದೆ. ೧೯೭೯ರಲ್ಲಿ ಸುಳ್ಯ ಪುರಸಭೆಯ ಅಧ್ಯಕ್ಷರಾದ ನಂತರ ಇವರು ಸಾಧಿಸಿದ ಕಾರ್ಯಗಳಂತೂ ಅವಿಸ್ಮರಣೀಯ. ಪಟ್ಟಣಕ್ಕೆ ಅಧಿಕ ನೀರಿನ ಪೂರೈಕೆ, ಡಾಮರು ರಸ್ತೆಯ ರಚನೆ, ಭೂಹೀನರಿಗೆ ಮನೆ ನಿವೇಶನದ ಹಂಚಿಕೆ ಮತ್ತು ಕಡಿಮೆ ವೆಚ್ಚದಲ್ಲಿ ಬಡವರಿಗಾಗಿ ಮನೆ ಕಟ್ಟಿಸಿದ್ದು ಶ್ರೀಯುತರ ಬಡಜನತೆಯ ಬಗೆಗಿನ ಕಾಳಜಿ ಮತ್ತು ಕಳಕಳಿಯ ಕುರುಹುಗಳಾಗಿವೆ.

ಶಿಕ್ಷಣ ಕ್ಷೇತ್ರದಲ್ಲಿ ಅದ್ವಿತೀಯವೆನಿಸಿರುವ ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದೂ ಶೈಕ್ಷಣಿಕವಾಗಿ ಬಹುವಾಗಿ ಸೊರಗಿದ್ದ ಸುಳ್ಯಕ್ಕೆ ಶ್ರೀಯುತರು ಕೊಟ್ಟ ಚಾಲನೆಯಿಂದಾಗಿ ಅದು ನಾಗಾಲೋಟದಿಂದ ಮುನ್ನುಗ್ಗುತ್ತಿದೆ. ಪ್ರಥಮ ದರ್ಜೆ ಕಾಲೇಜು ಸ್ಥಾಪನೆಯೆ ದುರ್ಲಭವೆನಿಸಿದ್ದ ಈ ಊರಲ್ಲಿ ಜನರು ಕನಸಿನಲ್ಲಿಯೂ ಕಂಡಿರದ ಮೆಡಿಕಲ್ ಕಾಲೇಜು ಸ್ಥಾಪಿಸುವ ಮೂಲಕ ಅಸಾಧ್ಯವಾದುದನ್ನು ಸಾಧ್ಯವೆಂದು ತೋರಿಸಿಕೊಟ್ಟಿದ್ದಾರೆ. ''ತಾನೇ ನೆಟ್ಟ ಕಂಗಿನ ಸಸಿಗಳು ಫಲ ಕೊಡುವಂತಾಗುವಾಗ ಈ ಊರಿಗೊಂದು ಪ್ರಥಮ ದರ್ಜೆ ಕಾಲೇಜು ನೀಡುವೆನು'' ಎಂಬ ಅವರ ಪ್ರತಿಜ್ಞೆ ಈಡೇರಿದ್ದು ೧೯೭೬ರಲ್ಲಿ ನೆಹರೂ ಮೆಮೋರಿಯಲ್ ಪದವಿ ಕಾಲೇಜನ್ನು ಸ್ಥಾಪಿಸುವ ಮೂಲಕ. ನಂತರ ಇವರು ವಿದ್ಯಾಸಂಸ್ಥೆಗಳನ್ನು ಕಟ್ಟಿ ಬೆಳೆಸುವಲ್ಲಿ ಹಿಂತಿರುಗಿ ನೋಡಿದ್ದೇ ಇಲ್ಲ. ಆನೆ ನಡೆದದ್ದೇ ದಾರಿಯೆಂಬಂತೆ ಇವರ ಮನಸ್ಸು ಹರಿದ ಕಡೆ ದಾರಿ ನಿರ್ಮಾಣವಾಗತೊಡಗಿದವು. ಕಳೆದ ೨೭ ವರ್ಷಗಳಲ್ಲಿ ಒಂದಾದ ಮೇಲೊಂದರಂತೆ ೩೨ ವಿದ್ಯಾ ಸಂಸ್ಥೆಗಳು ಸ್ಥಾಪನೆಗೊಂಡಿವೆ. ಸುಳ್ಯ, ಕೊಡಗು ಮತ್ತು ಬೆಂಗಳೂರಿನಲ್ಲಿ ಸ್ಥಾಪನೆಗೊಂಡಿರುವ ಇವರ ಪ್ರಮುಖ ವಿದ್ಯಾ ಸಂಸ್ಥೆಗಳೆಂದರೆ -

ನೆಹರೂ ಮೆಮೋರಿಯಲ್ ಪದವಿ ಕಾಲೇಜು, ಸುಳ್ಯ
ನೆಹರೂ ಮೆಮೋರಿಯಲ್ ಪದವಿಪೂರ್ವ ಕಾಲೇಜು, ಸುಳ್ಯ
ಕೆ.ವಿ.ಜಿ. ಕಾನೂನು ಕಾಲೇಜು, ಸುಳ್ಯ
ಕೆ.ವಿ.ಜಿ. ಆಂಗ್ಲ ಮಾಧ್ಯಮ ಪ್ರೌಢಶಾಲೆ, ಸುಳ್ಯ
ಕೆ.ವಿ.ಜಿ. ಪ್ರೌಢಶಾಲೆ, ಕೊಲ್ಲಮೊಗರು, ಸುಳ್ಯ ತಾಲೂಕು
ಕೆ.ವಿ.ಜಿ. ಪ್ರಥಮ ದರ್ಜೆ ಕಾಲೇಜು, ಭಾಗಮಂಡಲ, ಕೊಡಗು

**ತಾಂತ್ರಿಕ ಸಂಸ್ಥೆಗಳು**

ಕೆ.ವಿ.ಜಿ. ಇಂಜಿನಿಯರಿಂಗ್ ಕಾಲೇಜು, ಸುಳ್ಯ

ಕೆ.ವಿ.ಜಿ. ಪಾಲಿಟೆಕ್ನಿಕ್, ಸುಳ್ಯ
ಕೆ.ವಿ.ಜಿ. ಐ.ಟಿ.ಐ. ಸುಳ್ಯ
ಕೆ.ವಿ.ಜಿ. ಎಂ.ಸಿ.ಎ., ಪಿ.ಜಿ. ಕೋರ್ಸು,ಸುಳ್ಯ
ಕೆ.ವಿ.ಜಿ. ಎಂ.ಬಿ.ಎ. ಪಿ.ಜಿ. ಕೋರ್ಸು, ಸುಳ್ಯ
ಎನ್.ಎಸ್.ವಿ.ಕೆ. ಶ್ರೀ ವೆಂಕಟೇಶ್ವರ ಪಾಲಿಟೆಕ್ನಿಕ್, ಉತ್ತರಹಳ್ಳಿ, ಬೆಂಗಳೂರು
ಎನ್.ಎಸ್.ವಿ.ಕೆ. ಶ್ರೀ ವೆಂಕಟೇಶ್ವರ ಇಂಜಿನಿಯರಿಂಗ್ ಕಾಲೇಜು (ಪ್ರಪೋಸ್ಡ್) ಉತ್ತರಹಳ್ಳಿ, ಬೆಂಗಳೂರು

**ವೈದ್ಯಕೀಯ ಸಂಸ್ಥೆಗಳು**

ಕೆ.ವಿ.ಜಿ. ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆ, ಸುಳ್ಯ
ಕೆ.ವಿ.ಜಿ. ಡೆಂಟಲ್ ಕಾಲೇಜು ಮತ್ತು ಆಸ್ಪತ್ರೆ, ಸುಳ್ಯ
ಕೆ.ವಿ.ಜಿ. ಎಂ.ಡಿ.ಎಸ್. ಕಾಲೇಜು, ಸುಳ್ಯ
ಕೆ.ವಿ.ಜಿ. ಆಯುರ್ವೇದ ಕಾಲೇಜು ಮತ್ತು ಆಸ್ಪತ್ರೆ, ಸುಳ್ಯ
ಕೆ.ವಿ.ಜಿ. ಇನ್‌ಸ್ಟಿಟ್ಯೂಟ್ ಆಫ್ ನರ್ಸಿಂಗ್, ಸುಳ್ಯ
ಕೆ.ವಿ.ಜಿ. ರೂರಲ್ ಮೊಬೈಲ್ ಹೆಲ್ತ್ ಯೂನಿಟ್ ಅಂಡ್ ಕ್ಯಾಂಪ್ಸ್ ಸುಳ್ಯ
ಕೆ.ವಿ.ಜಿ. ವಿ.ಕೆ. ಶ್ರೀ ವೆಂಕಟೇಶ್ವರ ಡೆಂಟಲ್ ಕಾಲೇಜು, ಉತ್ತರಹಳ್ಳಿ, ಬೆಂಗಳೂರು

**ವಿದ್ಯಾರ್ಥಿನಿಲಯಗಳು**

ಕೆ.ವಿ.ಜಿ. ಸಮೂಹ ವಿದ್ಯಾಸಂಸ್ಥೆಗಳಲ್ಲಿ ಓದುತ್ತಿರುವ ವಿದ್ಯಾರ್ಥಿ / ವಿದ್ಯಾರ್ಥಿನಿಯರಿಗಾಗಿ ಪ್ರತ್ಯೇಕ ವಿದ್ಯಾರ್ಥಿ ನಿಲಯಗಳಿದ್ದು ಸುಸಜ್ಜಿತವಾಗಿವೆ. ಇವುಗಳದ್ದೇ ಒಂದು ಗ್ರಾಮವಾಗಿದೆ.

ಶ್ರೀ ಕೆ.ವಿ.ಜಿ.ಯವರು ಒಂದು ಜ್ಯೋತಿಯಂತೆ. ಜ್ಯೋತಿ ತಾನು ಬೆಳಗುವುದಲ್ಲದೆ ಇತರ ಜ್ಯೋತಿಗಳು ಉರಿಯಲು ನೆರವಾಗುವಂತೆ ಇವರ ಪ್ರೋತ್ಸಾಹ, ಧನಸಹಾಯ ಅಥವಾ ಅವರೇ ಅಧ್ಯಕ್ಷರಿದ್ದು ನಡೆಸುತ್ತಿರುವ ಹಲವಾರು ವಿದ್ಯಾ ಸಂಸ್ಥೆಗಳಿವೆ. ಅವುಗಳಲ್ಲಿ ಕೆಲವೆಂದರೆ -

ಜ್ಯೋತಿ ಪ್ರೌಢಶಾಲೆ, ಪೆರಾಜೆ, ಕೊಡಗು
ನೆಹರೂ ಮೆಮೋರಿಯಲ್ ಪ್ರೌಢಶಾಲೆ ಮತ್ತು ಪಿ.ಯು. ಕಾಲೇಜು, ಅರಂತೋಡು
ಶಾರದಾ ಮಹಿಳಾ ಪಿ.ಯು. ಕಾಲೇಜು, ಸುಳ್ಯ
ಶಾರದಾ ಮಹಿಳಾ ಪ್ರಥಮ ದರ್ಜೆ ಕಾಲೇಜು, ಸುಳ್ಯ
ಶಾರದಾ ಹೆಮ್ಮಕ್ಕಳ ಪ್ರೌಢಶಾಲೆ, ಸುಳ್ಯ
ಶ್ರೀ ಮಹಾಲಿಂಗೇಶ್ವರ ಐ.ಟಿ.ಐ. ಪುತ್ತೂರು

ಶ್ರೀ ಕುರುಂಜಿಯವರು ತಮ್ಮ ಕನಸನ್ನು ನನಸಾಗಿಸಲು ಆಯ್ಕೆ ಮಾಡಿಕೊಂಡದ್ದು ಸುಳ್ಯದ ಕುರುಂಜಿಬಾಗಿನಲ್ಲಿರುವ ಬೋಳುಗುಡ್ಡೆಯನ್ನು ಅದು ಈಗ ವಿದ್ಯಾನಗರವೆಂದು ಹೆಸರಾಗಿದ್ದು ಸಾಲು ಸಾಲಾಗಿ ಶೋಭಿಸುತ್ತಿರುವ ವಿದ್ಯಾ ಸಂಸ್ಥೆಗಳ ನೆಲೆವೀಡಾಗಿದೆ. ಒಂದಕ್ಕಿಂತ ಮತ್ತೊಂದು ವೈವಿಧ್ಯಮಯ ಹಾಗೂ ಆಕರ್ಷಣೀಯವಾದ ವಾಸ್ತುಶಿಲ್ಪದಿಂದ ಕೂಡಿರುವ ಇಲ್ಲಿರುವ ಭವ್ಯ ಕಟ್ಟಡಗಳು ನೋಡುಗರ ಕಣ್ಣಿಗೆ ಆನಂದವನ್ನುಂಟುಮಾಡುತ್ತವೆ. ಕಾಲೇಜು ವಠಾರವು ಒಂದು ವಿಶ್ವವಿದ್ಯಾಲಯದ ಸಂಕೀರ್ಣದಂತೆ ಶೋಭಿಸುತ್ತಿದೆ. ಕಳೆದ ೨೭ ವರ್ಷಗಳಲ್ಲಿ ಇಷ್ಟೆಲ್ಲಾ ಕಟ್ಟಡಗಳು ಇಲ್ಲಿ ಬೆಳೆದು ನಿಂತಿವೆಯೆಂದರೆ ಯಾರಿಗೂ ಆಶ್ಚರ್ಯವಾಗಬಹುದು.

ಶ್ರೀಯುತರು ಉದಾರ ದಾನಿಯೆಂದೇ ಹೆಸರಾಗಿದ್ದಾರೆ. ''ಕೊಟ್ಟದ್ದು ತನಗೆ ಬಚ್ಚಿಟ್ಟದ್ದು ಪರರಿಗೆ'' ಎಂದು ಯಾವಾಗಲೂ ಹೇಳುವ ಇವರು ದಾನ ನೀಡುವಲ್ಲಿ ಹೆಚ್ಚು ಉತ್ಸುಕತೆ ಮೆರೆಯುತ್ತಾರೆ. ''ನೂರಕ್ಕೊಬ್ಬ ಶ್ರಮಿಕನಿರಬಹುದು, ಸಾವಿರಕ್ಕೊಬ್ಬ ವೀರನಿರಬಹುದು. ಲಕ್ಷಕ್ಕೊಬ್ಬ ಕವಿಯಿರಬಹುದು, ಆದರೆ ಕೋಟಿಗೊಬ್ಬ ದಾನಿಯಿರುವುದು ದುರ್ಲಭವಂತೆ''. ಇಂತಹ ಅಪರೂಪದ ವ್ಯಕ್ತಿಯೊಬ್ಬರು ನಮ್ಮ ನಡುವೆ ಬಾಳುತ್ತಿರುವುದು ಭಾಗ್ಯದ ಸಂಗತಿ. ಶ್ರೀಮಂತಿಕೆ ಇದ್ದವರಿಗೆ ಕೊಡಲು ಮನಸ್ಸಿರುವುದಿಲ್ಲ, ಕೊಡಲು ಮನಸ್ಸಿದ್ದವರಿಗೆ ಶ್ರೀಮಂತಿಕೆ ಇರುವುದಿಲ್ಲ. ಆದರೆ ಇವೆರಡೂ ಕುರುಂಜಿಯವರ ಜೀವನ ಬಂಡಿಯಲ್ಲಿ ಜೋಡೆತ್ತಿನಂತೆ ಸಾಗುತ್ತಿರುವುದು ಸ್ತುತ್ಯರ್ಹ. ದಾನ ಕೊಡುವಾಗ ಇವರು ಹೇಳುವ ಮಾತುಗಳು ''ಇಂದು ಇದ್ದವರು ನಾಳೆ ಇರುವುದಿಲ್ಲ'', ''ಬರುವಾಗ ಏನನ್ನೂ ತರಲಿಲ್ಲ. ಹಾಗೆಯೇ ಹೋಗುವಾಗ ಏನನ್ನೂ ಕೊಂಡೊಯ್ಯಲು ಸಾಧ್ಯವಾಗುವುದಿಲ್ಲ'', ''ಕೊಟ್ಟದ್ದು ಮಾತ್ರ ನನ್ನೊಂದಿಗೆ ಬರುತ್ತದೆ'', ''ದಾನ ಮಾಡಿದಷ್ಟು ನನ್ನ ಸಂಪತ್ತು ಇಮ್ಮಡಿಗೊಳ್ಳುತ್ತದೆ''. ಹೀಗೆ ಅದೆಷ್ಟು ಮಂದಿ ಶ್ರೀಮಂತರು ಹೇಳಿಯಾರು?

ಲಕ್ಷಗಟ್ಟಲೆ ಕೊಡುವವರೆಂದೇ ಪ್ರಖ್ಯಾತರಾಗಿರುವ ಇವರು ದಕ್ಷಿಣ ಕನ್ನಡ, ಕೊಡಗು, ಮೈಸೂರು, ಮಂಡ್ಯ ಮತ್ತು ಬೆಂಗಳೂರು ಸೇರಿದಂತೆ ಒಟ್ಟು ೩೨ ಕಲ್ಯಾಣ ಮಂಟಪಗಳನ್ನು ಕಟ್ಟಿಸಿದ್ದಾರೆ. ಸುಳ್ಯದ ಜನತೆಗೆ ಪುರಭವನದ ಅಗತ್ಯವಿದೆಯೆಂದು ತಿಳಿದ ಇವರು ಸುಮಾರು ೨೨ ಲಕ್ಷ ರೂಪಾಯಿ ವೆಚ್ಚದಲ್ಲಿ ಸುಸಜ್ಜಿತವಾದ ಕಟ್ಟಡವನ್ನು ಕಟ್ಟಿಸಿಕೊಟ್ಟಿದ್ದಾರೆ. ಬಹಳ ವರ್ಷಗಳಿಂದಲೂ ಸುಳ್ಯದ ಜನತೆಯ ಮನದಾಳದಲ್ಲಿ ನೋವಿನಂತಿದ್ದದ್ದು ಶ್ರೀ ಚೆನ್ನಕೇಶವ ದೇವಾಲಯದ ಜೀರ್ಣೋದ್ಧಾರ ಕಾರ್ಯ ನಡೆಯಲಿಲ್ಲವೆಂಬ ಕೊರಗು. ಇದನ್ನು ನಿವಾರಿಸುವ ಸಲುವಾಗಿ ಒಂದೂವರೆ ಕೋಟಿ ರೂಪಾಯಿ ವೆಚ್ಚದಲ್ಲಿ ದೇವಾಲಯದ ಜೀರ್ಣೋದ್ಧಾರ ಕಾರ್ಯವನ್ನು ಆರಂಭಿಸಿದ್ದಾರೆ. ಈ ದೇವಾಲಯ ಸಂಕೀರ್ಣದಲ್ಲಿ ತಿರುಪತಿ, ಮಧುರೆ ಮತ್ತು ಇನ್ನಿತರ ದೇವಾಲಯುಗಳ ವಾಸ್ತುಶೈಲಿ ಮತ್ತು ಶಿಲ್ಪಕಲಾ ವೈಭವ ಮೇಳೈಸಲಿವೆ. ಇದಲ್ಲದೆ ಸರ್ಕಾರದ ಜ್ಞಾನ ದೇಗುಲ ಯೋಜನೆಗೆ ನೆರವಾಗಲು ಸುಳ್ಯ ತಾಲೂಕು ಮತ್ತು ಕೊಡಗು ಜಿಲ್ಲೆಯಲ್ಲಿ ೧೧೨ ಶಾಲಾ ಕೊಠಡಿಗಳನ್ನು ೧೧ ಲಕ್ಷ ರೂಪಾಯಿ ವೆಚ್ಚದಲ್ಲಿ ನಿರ್ಮಿಸಿಕೊಟ್ಟಿದ್ದಾರೆ. ಕಲಿಕಾ ಕೇಂದ್ರದ

ರಚನೆಗಾಗಿ ದಕ್ಷಿಣ ಕನ್ನಡ, ಕೊಡಗು ಮತ್ತು ಮೈಸೂರು ಜಿಲ್ಲೆಯಲ್ಲಿ ಸುಮಾರು ರೂ. ೧,೬೦,೦೦೦ ವೆಚ್ಚದಲ್ಲಿ ೧೬ ಕಲಿಕಾ ಕೇಂದ್ರಗಳನ್ನು ಕಟ್ಟಿಸಿಕೊಟ್ಟಿದ್ದಾರೆ. ೧೬ ಯುವಕ ಕೇಂದ್ರ ಮತ್ತು ಯುವತಿ ಮಂಡಲಗಳನ್ನು ಕಟ್ಟಲು ಒಂದೊಂದಕ್ಕೆ ರೂ. ೧೦,೦೦೦ ದೇಣಿಗೆ ನೀಡಿದ್ದಾರೆ. ವೃತ್ತಿಶಿಕ್ಷಣ ಕಾಲೇಜುಗಳಲ್ಲಿ ಇಂಗ್ಲೀಷ್ ಮಾಧ್ಯಮದಲ್ಲಿಯೇ ಕಲಿಯಬೇಕು. ಆದರೆ ಗ್ರಾಮೀಣ ಪ್ರದೇಶದ ಮಕ್ಕಳಿಗೆ ಇಲ್ಲಿ ಕಲಿಯಲು ಮೊದಲು ಬೇಕಾದುದು ಇಂಗ್ಲೀಷ್ ಭಾಷೆಯ ಬುನಾದಿ. ಅದಕ್ಕಾಗಿ ಸುಳ್ಯ ತಾಲೂಕಿನ ಶಾಲೆಗಳಲ್ಲಿ ಇಂಗ್ಲೀಷ್ ಕಲಿಕೆಯನ್ನು ಪ್ರೋತ್ಸಾಹಿಸಲು ೧೫೭ ಶಾಲೆಗಳಲ್ಲಿ ಇಂಗ್ಲೀಷ್ ಪುಸ್ತಕ ಭಂಡಾರ ತೆರೆಯಲು ಪುಸ್ತಕ ಮತ್ತು ಕಪಾಟುಗಳನ್ನೂ ಕೊಳ್ಳಲು ಸುಮಾರು ರೂ. ೮ ಲಕ್ಷವನ್ನು ಉದಾರವಾಗಿ ನೀಡಿದ್ದಾರೆ. ಇದಲ್ಲದೆ ಹಲವಾರು ಪದವಿಪೂರ್ವ ಕಾಲೇಜಿನಲ್ಲಿ ವಿಜ್ಞಾನ ತರಗತಿಗಳನ್ನು ಆರಂಭಿಸಲು ಲಕ್ಷಗಟ್ಟಲೆ ಆರ್ಥಿಕ ನೆರವು ನೀಡಿದ್ದಾರೆ.

''ಶ್ರೀ ಕುರುಂಜಿಯವರ ಸ್ಪರ್ಶದಿಂದ ಬರಡು ಮಣ್ಣು ಬಂಗಾರವಾಗುತ್ತದೆ'', ''ಅವರಲ್ಲಿ ದುಡ್ಡಿನ ಗಿಡಗಳಿವೆ'', ''ಲಕ್ಷ್ಮೀಪುತ್ರ'' ಇತ್ಯಾದಿ ಜನರಾಡಿಕೊಳ್ಳುವ ಮಾತುಗಳು. ಆದರೆ ಒಳಹೊಕ್ಕು ನೋಡಿದರೆ ಅವಿಶ್ರಾಂತ ದುಡಿಮೆ ಮತ್ತು ಸಮಯದ ಸದುಪಯೋಗ ಇವು ಕುರುಂಜಿಯವರ ಯಶಸ್ಸಿನ ಹಿಂದಿರುವ ಎರಡು ಪ್ರಮುಖ ಅಂಶಗಳೆಂದು ತಿಳಿಯುತ್ತದೆ. ಇವರಂತೆ ಸಮಯದ ಬೆಲೆಯನ್ನರಿತು ಕ್ಷಣ ಕ್ಷಣವನ್ನೂ ಉಪೇಕ್ಷಿಸದೆ ಗಾಣದೆತ್ತಿನಂತೆ ದುಡಿಯುವವರು ವಿರಳವೆಂದೇ ಹೇಳಬಹುದು. ಅವರೇ ಹೇಳುವಂತೆ ''ನಾನು ಮಲಗುವುದು ಬೆಳಿಗ್ಗೆ ಮತ್ತು ಏಳುವುದು ಬೆಳಿಗ್ಗೆ'', ಇದರ ಅರ್ಥ ಅವರು ಮಲಗುವುದು ರಾತ್ರಿ ೧೨ರ ನಂತರ, ಏಳುವುದು ಬೆಳಿಗ್ಗೆ ಐದರ ಮೊದಲು. ಈ ೭೫ರ ಹರೆಯದಲ್ಲೂ ಕುರುಂಜಿಯವರು ದಿನವೂ ೧೮ ಗಂಟೆಗಳ ಕಾಲ ದುಡಿಯುವರೆಂದರೆ ಯಾರಿಗೂ ಆಶ್ಚರ್ಯವಾಗಬಹುದು. ಈ ಪರಿಯ ದುಡಿಮೆಯಿಂದಲೇ ಇಷ್ಟು ಬೃಹತ್ತಾದ ವಿದ್ಯಾಸಂಸ್ಥೆಗಳನ್ನು ಕಟ್ಟಲು ಸಾಧ್ಯವಾಗಿರುವುದು.

ಮಾತು ಮತ್ತು ಕೃತಿ ಇವರಲ್ಲಿ ಒಂದೇ ನಾಣ್ಯದ ಎರಡು ಮುಖಗಳಂತೆ. ನುಡಿದಂತೆ ನಡೆಯುವ ಸ್ವಭಾವದ ಇವರು ತಾವು ಈ ತನಕ ಹೇಳಿದ್ದೆಲ್ಲವನ್ನೂ ಮಾಡಿ ತೋರಿಸಿದ್ದಾರೆ. ಶ್ರೀಮಂತಿಕೆಗೆ ದುಶ್ಚಟಗಳು ಚೆನ್ನಾಗಿ ಅಂಟಿಕೊಳ್ಳುತ್ತವೆ. ಆದರೆ ಇವು ಕುರುಂಜಿಯವರ ಹತ್ತಿರ ಸುಳಿದಿಲ್ಲ. ದುಶ್ಚಟಗಳಿಗೆ ದಾಸರಾಗದಿದ್ದುದೇ ಇವರು ಸುಳ್ಯಕ್ಕೆ ವರಪ್ರಸಾದವಾಗಲು ಕಾರಣವಾಯಿತು. ಸಮಯ ಸಿಕ್ಕಾಗಲೆಲ್ಲ ಪುಣ್ಯ ಪುರುಷರ ಕಥೆಗಳನ್ನು ಓದುವ ಹವ್ಯಾಸವನ್ನಿಟ್ಟುಕೊಂಡಿದ್ದಾರೆ. ಭಾಷಣ ಮಾಡುವಾಗ ಅವುಗಳನ್ನು ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸಿ ಮಾತು ಪರಿಣಾಮಕಾರಿಯಾಗುವಂತೆ ಮಾಡುತ್ತಾರೆ. ಪ್ರತಿಯೊಂದು ಮಾತು ಕೇಳುಗರಲ್ಲಿ ಪರಿಣಾಮ ಬೀರುವಂತೆ ಮಾಡಲು ಹಲವಾರು ಉದಾಹರಣೆಗಳನ್ನು ಕಥೆಗಳ ರೂಪದಲ್ಲಿ ಹೇಳುತ್ತಾರೆ. ಮನುಷ್ಯನ ಪರಮ ವೈರಿ ದುಶ್ಚಟಗಳು. ಅವರೇ ಪಟ್ಟಿ ಮಾಡಿರುವ ಏಳು ದುಶ್ಚಟಗಳೆಂದರೆ : ಪರ ನಿಂದನೆ, ಸೋಮಾರಿತನ, ಕಳ್ಳತನ, ಅಮಲು ಪದಾರ್ಥ ಸೇವನೆ, ಜೂಜುಗಾರಿಕೆ, ಧೂಮಪಾನ ಮತ್ತು ದ್ವೇಷ. ಇವುಗಳನ್ನು ಬಿಡಬೇಕು ಮತ್ತು ಅಷ್ಟ ಗುಣಗಳಾದ ಸತ್ಯ, ಶಾಂತಿ, ಧರ್ಮ, ಸನ್ನಡೆ, ಸನ್ನುಡಿ. ಪ್ರೇಮ, ತಾಳ್ಮೆ ಮತ್ತು

ಧೈರ್ಯವನ್ನು ಮೈಗೂಡಿಸಿಕೊಳ್ಳಬೇಕೆನ್ನುತ್ತಾರೆ.

ಶ್ರೀಯುತರು ಬಹುಮುಖ ಪ್ರತಿಭೆಗೆ ಹೆಸರಾದವರು. ಇವರು ಬಹಳಷ್ಟು ವಿಷಯಗಳನ್ನು ಕ್ರಮಬದ್ಧವಾಗಿ ಅಧ್ಯಯನ ಮಾಡಿದ್ದರೂ ಅವುಗಳ ಬಗ್ಗೆ ಇವರು ಅನುಭವದ ಮೂಲಕ ಗಳಿಸಿಕೊಂಡಿರುವ ಪರಿಣತಿ ಆಶ್ಚರ್ಯಗೊಳಿಸುತ್ತದೆ. ಇವರಲ್ಲಿ ಅಗಾಧವಾದ ಜ್ಞಾಪಕ ಶಕ್ತಿಯಿದೆ. ಯಾವ ಕಟ್ಟಡದ ವಿಸ್ತಾರವೆಷ್ಟು? ಎಷ್ಟು ಬಾಗಿಲು ಕಿಟಕಿಗಳಿವೆ? ಬೇಕೆಂದಾಕ್ಷಣ ಹೇಳಿಬಿಡುತ್ತಾರೆ. ಯಾವ ಸಾಧನ ಬಳಸದೆ ಕ್ಷಣದಲ್ಲಿ ಎಲ್ಲ ಲೆಕ್ಕಗಳನ್ನು ಕರಾರುವಕ್ಕಾಗಿ ಹೇಳಿಬಿಡುತ್ತಾರೆ. ಇವರು ಕಟ್ಟಿರುವ ಎಲ್ಲ ಕಟ್ಟಡದ ನಕಾಶೆ, ಡಿಸೈನ್ ಎಲ್ಲವನ್ನೂ ತಯಾರಿಸಿರುವ ಮೂಲಕ ವಾಸ್ತುಶಿಲ್ಪಿಗಳೂ ಬೆರಗಾಗುವಂತೆ ಮಾಡಿದ್ದಾರೆ.

ಶ್ರೀ ಕುರುಂಜಿಯವರು ಎಲ್ಲ ವಿಷಯದಲ್ಲಿಯೂ ಅಚ್ಚುಕಟ್ಟುತನವನ್ನು ತೋರುತ್ತಾರೆ. ಹಸಿಯದೆ ಊಟ ಮಾಡಬಾರದೆಂಬುದು ಇವರ ನಿಯಮ. ಅನ್ನವೆಂದರೆ ದೇವರೆಂಬ ಭಾವನೆ. ಎಷ್ಟು ಅಚ್ಚುಕಟ್ಟಾಗಿ ಊಟ ಮಾಡುತ್ತಾರೆಂದರೆ ಎಂದೂ ಅನ್ನವನ್ನು ಎಲೆಯಲ್ಲಿ ಉಳಿಸಿದ್ದನ್ನು ಯಾರೂ ಈ ತನಕ ಕಂಡಿಲ್ಲ. ಇವರು ಊಟ ಮಾಡುವ ಕ್ರಮವನ್ನು ನೋಡಿದರೆ ಊಟ ಮಾಡಿದ್ದವರಿಗೂ ಇನ್ನೊಮ್ಮೆ ಊಟ ಮಾಡಬೇಕೆನ್ನಿಸಿಬಿಡುತ್ತದೆ. ಉಡುಗೆ ತೊಡುಗೆಯಲ್ಲಿ ಬಹಳ ಸರಳತೆ. ಹೆಚ್ಚಾಗಿ ಬಿಳಿಯ ಬಟ್ಟೆಗಳನ್ನೇ ತೊಡುತ್ತಾರೆ. ಸಭೆ ಸಮಾರಂಭಗಳಿಗೆ ಹೋಗುವಾಗ ಕೋಟು ಧರಿಸುತ್ತಾರೆ. ಆದರೆ ಅದರ ಬಗ್ಗೆ ಮೋಹವೇನಿಲ್ಲ. ಚಿನ್ನದ ಮೇಲೆ ಇನಿತೂ ಮೋಹವಿದ್ದ ಹಾಗೆ ಕಾಣುವುದಿಲ್ಲ. ಹೇಗೆಂದರೆ ಅವರು ಉಂಗುರವಾಗಲೀ, ಚೈನಾಗಲೀ ತೊಟ್ಟುಕೊಂಡಿಲ್ಲ. ಆದರೂ ಆಕರ್ಷಕ ನಿಲುವು. ಆದರಣೀಯ ವ್ಯಕ್ತಿತ್ವ, ಸರಳತೆಯಲ್ಲಿಯೇ ಶ್ರೇಷ್ಠತೆಯ ಪರಿಪಾಲಕ.

ಶ್ರೀ ಕುರುಂಜಿಯವರು ಗೌಡ ಜನಾಂಗದ ಕಣ್ಮಣಿ ಹಾಗೂ ಹೆಮ್ಮೆಯ ಪುತ್ರ. ಗೌಡ ಜನಾಂಗದ ಕೀರ್ತಿ ಪತಾಕೆಯನ್ನು ಉತ್ತುಂಗಕ್ಕೇರಿಸಿದವರು. ಮುಂದುವರಿದ ಇತರ ಜನಾಂಗದವರ ಜತೆ ನಿಂತು ನಿಮಗೆ ನಾವು ಸಮವೆಂದು ಹೇಳುವ ಆತ್ಮಸ್ಥೈರ್ಯ ಮತ್ತು ಸ್ವಾಭಿಮಾನವನ್ನು ಗೌಡರಲ್ಲಿ ಹುಲುಸಾಗಿ ಹುಟ್ಟು ಹಾಕಿದವರು. ಮಣ್ಣಿನ ಮಗನೊಬ್ಬ ಏನನ್ನೂ ಮಾಡಬಲ್ಲನೆಂಬುದನ್ನು ಸಾಧಿಸಿ ತೋರಿಸಿಕೊಟ್ಟವರು. ಒಳಿತಾಗಲಿ, ಕೆಡುಕಾಗಲಿ ಕೃಷಿಯೇ ಗೌಡರ ಉಸಿರು. ಅದನ್ನು ಬಿಟ್ಟು ಬೇರೇನನ್ನೂ ನಮ್ಮಿಂದ ಮಾಡಲಾಗದು ಎಂಬ ಭ್ರಮಾವಾಹಿನಿಯಿಂದ ಹೊರಬಂದ ಶ್ರೀ ಕುರುಂಜಿ ಯವರು ಇತರರಂತೆ ನಾವೂ ಸಹ ದೇಶದ ಅಭಿವೃದ್ಧಿಗಾಗಿ ಎಲ್ಲ ರಂಗದಲ್ಲಿಯೂ ಸಾಧಿಸಿ ತೋರಿಸಬಲ್ಲೆವೆಂಬುದನ್ನು ರುಜುವಾತು ಪಡಿಸಿರುತ್ತಾರೆ. ಇವೆಲ್ಲವೂ ನಮ್ಮ ಸಮಾಜ ಬಾಂಧವರಿಗೆ ದಾರಿದೀಪವಾಗಬಲ್ಲವು.

ಶ್ರೀ ಕುರುಂಜಿಯವರು ಗೌಡ ಜನಾಂಗದ ಹಿನ್ನಡೆಗೆ ಇತರರಂತೆ ಹಲವು ಕಾರಣಗಳನ್ನು ಕೊಡುತ್ತಾರೆ. ಆದರೆ ಆ ದೋಷಗಳನ್ನು ಸರಿಪಡಿಸುವತ್ತ ಅವರು ದಿಟ್ಟ ಹೆಜ್ಜೆಗಳನ್ನು ಇಟ್ಟಿದ್ದಾರೆ. ಅವರು ಹೇಳುವಂತೆ ಗೌಡರಲ್ಲಿ ಒಗ್ಗಟ್ಟಿನ ಕೊರತೆ ಇದೆ. ಕರ್ನಾಟಕದ ವಿವಿಧ ಭಾಗಗಳಲ್ಲಿ ವಾಸಿಸುತ್ತಿರುವ ಗೌಡರು ಒಂದಾಗಬೇಕು. ಭೌಗೋಳಿಕ ವಿಸ್ತಾರ, ಬೆಟ್ಟಗುಡ್ಡಗಳಿಂದಾದ ಅಡಚಣೆ

ಮತ್ತು ಸ್ಥಳೀಯ ಪದ್ಧತಿಗಳ ಪ್ರಭಾವ ಇತ್ಯಾದಿಗಳಿಂದಾಗಿ ಗೌಡರಲ್ಲಿ ಸ್ವಲ್ಪ ವ್ಯತ್ಯಾಸಗಳಿರಬಹುದು. ದಕ್ಷಿಣ ಕನ್ನಡದ ಗೌಡರೇ ಬೇರೆ ಮತ್ತು ಹಾಸನ, ಮಂಡ್ಯ, ಮೈಸೂರು, ಬೆಂಗಳೂರು ಇತ್ಯಾದಿ ಪ್ರದೇಶಗಳಲ್ಲಿರುವ ಗೌಡರೇ ಬೇರೆ ಎಂದು ತಿಳಿಯುವುದು ಸರಿಯಲ್ಲ. ಈ ಸಂಬಂಧವನ್ನು ಬೆಸೆಯುವ ಕಾರ್ಯವನ್ನು ಶ್ರೀ ಕುರುಂಜಿಯವರು ಬಹಳ ಹಿಂದಿನಿಂದಲೇ ಮಾಡುತ್ತಾ ಬಂದಿದ್ದಾರೆ. ಈ ದಿಸೆಯಲ್ಲಿ ವೈವಾಹಿಕ ಸಂಬಂಧದ ಮೂಲಕ ಹತ್ತಿರವಾಗಲು ಸಾಧ್ಯವೆನ್ನುವುದು ಇವರ ಅಭಿಪ್ರಾಯ. ಅವರು ಆದರ್ಶವನ್ನು ಮೊದಲು ಮಾಡಿ ತೋರಿಸುತ್ತಾರೆ. ಇವರ ಇಬ್ಬರು ಸೊಸೆಯಂದಿರಲ್ಲಿ ಒಬ್ಬರು ಮಂಡ್ಯದವರು, ಇನ್ನೊಬ್ಬರು ಸೋಮವಾರಪೇಟೆಯವರು. ಇದು ಗೌಡರ ನಡುವೆ ಭೇದಭಾವವನ್ನು ಅಂತ್ಯಗೊಳಿಸುವ ಪರಮ ಪ್ರಯತ್ನ. ಶ್ರೀ ಕುರುಂಜಿಯವರು ಬೆಂಗಳೂರಿನ ಒಕ್ಕಲಿಗ ಸಂಘ ಮತ್ತು ದಕ್ಷಿಣ ಕನ್ನಡ ಮತ್ತು ಕೊಡಗು ಜಿಲ್ಲೆಗಳಲ್ಲಿರುವ ಗೌಡರನ್ನು ಹತ್ತಿರ ಮಾಡುವಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಿದ್ದಾರೆ. ಹಾಗಾಗಿ ಬೆಂಗಳೂರಿನ ಒಕ್ಕಲಿಗ ಸಂಘದ ಪದಾಧಿಕಾರಿಗಳು ದ.ಕ. ಮತ್ತು ಕೊಡಗು ಜಿಲ್ಲೆಯ ವಿದ್ಯಾಸಂಸ್ಥೆಗಳಿಗೆ ಭೇಟಿ ನೀಡಿದ್ದಾರಲ್ಲದೆ ಹಲವು ಸಂಸ್ಥೆಗಳಿಗೆ ಆರ್ಥಿಕ ನೆರವನ್ನೂ ನೀಡುತ್ತಿದ್ದಾರೆ. ಶ್ರೀ ಕ್ಷೇತ್ರ ಆದಿಚುಂಚನಗಿರಿಯ ಪೀಠಾಧಿಪತಿಗಳಾದ ಶ್ರೀಶ್ರೀಶ್ರೀ ಬಾಲ ಗಂಗಾಧರನಾಥ ಸ್ವಾಮೀಜಿಯವರು ಹಲವು ಬಾರಿ ಸುಳ್ಯಕ್ಕೆ ಆಗಮಿಸಿ ಇಲ್ಲಿಯ ಗೌಡರ ಪ್ರಗತಿ ಮತ್ತು ಜಾಗೃತಿ ಕಂಡು ಹರ್ಷಚಿತ್ತರಾಗಿದ್ದಾರೆ. ಸ್ವಾಮೀಜಿಯವರ ೫೦ನೇ ಹುಟ್ಟುಹಬ್ಬ ಬೆಂಗಳೂರಿನ ಹತ್ತಿರದ ಕಂಬಳಗೋಡಿನಲ್ಲಿ ನಡೆದಾಗ ಶ್ರೀ ಕುರುಂಜಿಯವರು ತಮ್ಮ ಭಕ್ತಿ ಮತ್ತು ಶ್ರದ್ಧೆಯ ಸಂಕೇತವಾಗಿ ಸುಮಾರು ೧೫ ಲಕ್ಷ ರೂ. ವೆಚ್ಚದಲ್ಲಿ ತಯಾರಿಸಿದ ಚಿನ್ನದ ಕಿರೀಟವನ್ನು ಅವರಿಗೆ ಅರ್ಪಿಸಿದ್ದಾರೆ.

ಹಲವರಿಗೆ ಹಳ್ಳಿಯೆಂದರೆ ಅಲರ್ಜಿ. ಆದರೆ ಕುರುಂಜಿಯವರಿಗೆ ಹಳ್ಳಿಯೆಂದರೆ ವಿಶೇಷ ಮಮತೆ ಮತ್ತು ಮುತುವರ್ಜಿ. ಹಳ್ಳಿಯ ಉದ್ಧಾರವಾಗಬೇಕು ಎಂದು ಎಲ್ಲರೂ ಹೇಳುತ್ತಾರೆ. ಆದರೆ ಇದನ್ನು ಇವರು ಕೃತಿಯಲ್ಲಿ ಮಾಡಿ ತೋರಿಸಿದ್ದಾರೆ. ಇವರು ವಿದ್ಯಾಸಂಸ್ಥೆಗಳನ್ನು ನಗರ ಪ್ರದೇಶದಲ್ಲಿ ಕಟ್ಟಲು ಹೋಗಿದ್ದರೆ ಬಹಳ ಸುಲಭದ ಕಾರ್ಯವಾಗುತ್ತಿತ್ತು. ಇದನ್ನು ಯಾರೂ ಮಾಡಬಹುದು. ಆದರೆ ಕುರುಂಜಿಯವರು ಹಳ್ಳಿಯಲ್ಲಿಯೇ ವಿದ್ಯಾ ಸಂಸ್ಥೆಗಳನ್ನು ಕಟ್ಟುವ ಕಾರ್ಯವನ್ನು ಒಂದು ಸವಾಲಾಗಿಯೇ ತೆಗೆದುಕೊಂಡರು. ಹುಟ್ಟೂರಿನ ಹಾಗೂ ಗ್ರಾಮೀಣ ಪರಿಸರದ ಬಡಜನತೆಗೆ ತನ್ನ ಸೇವೆ ಸಲ್ಲಬೇಕು ಮತ್ತು ಅದೇ ಸಾರ್ಥಕ ಸೇವೆಯೆಂದು ಭಾವಿಸಿದ ಇವರು ವಿದ್ಯಾಸಂಸ್ಥೆಗಳನ್ನು ಸುಳ್ಯದಲ್ಲಿಯೇ ಕಟ್ಟಲು ಮುಂದಾದರು, ಗೆದ್ದರು. ಪ್ರತಿಯೊಂದು ವಿದ್ಯಾಸಂಸ್ಥೆಯನ್ನು ಕಟ್ಟುವಾಗಲೂ ಹಿತಶತ್ರುಗಳೆನಿಸಿಕೊಂಡವರಿಂದ ಇದು ಸುಳ್ಯದಲ್ಲಿ ಆಗದು ಅಥವಾ ಆದರೂ ಬೆಳೆಯದು ಎಂಬ ಅಪಸ್ವರ. ಆದರೆ ಇವರು ಇದಕ್ಕೆ ಕಿವಿಗೊಡಲಿಲ್ಲ. ಏಕೆಂದರೆ ಸಾಧಿಸುವ ಛಲವಿತ್ತು. ಉದ್ದೇಶ ದೊಡ್ಡದಿತ್ತು ಮತ್ತು ಗುರಿ ಸರಿಯಿತ್ತು. ಅಂತಿಮವಾಗಿ ಗಗನ ಕುಸುಮವೆಂದೇ ಭಾವಿಸಿದ್ದ ಸುಳ್ಯದಲ್ಲಿ ಮೆಡಿಕಲ್ ಕಾಲೇಜು ಸ್ಥಾಪನೆಯ ಕನಸೂ ನನಸಾಯಿತು. ಈಗ ಎಲ್ಲರ ಬಾಯಲ್ಲೂ ಕುರುಂಜಿಯವರು ಸೋಲಿಲ್ಲದ ಸರದಾರ, ಆಧುನಿಕ ಭಗೀರಥ ಇತ್ಯಾದಿ ಅಭಿದಾನ, ಅನುಕೀರ್ತನೆ. ರಾಜ್ಯ ಹೆದ್ದಾರಿ

ಯಲ್ಲಿದ್ದು ಜಡ್ಡಾಗಿ, ಜಡ ಹಿಡಿದು, ಜಟಾಧಾರಿಯಂತೆ ಬಹಳಷ್ಟು ಮುಳಿ ಮನೆಗಳಿಂದ ತುಂಬಿ, ಸಂಜೆಯಾದೊಡನೆ ತನ್ನೆಲ್ಲಾ ವಹಿವಾಟು ನಿಲ್ಲಿಸಿ ಕತ್ತಲಪ್ಪುಗೆಯಲ್ಲಿ ಲೀನವಾಗುತ್ತಿದ್ದ ಸುಳ್ಯ ಇಂದು ಶ್ರೀ ಕುರುಂಜಿಯವರ ದಿವ್ಯ ಸ್ಪರ್ಶದಿಂದಾಗಿ ಮೈಗೊಡವಿ ಮೇಲೆದ್ದು ಕಾಂಕ್ರೀಟು ಕಟ್ಟಡಗಳಿಂದ ಮೈತಳೆದು ಬೆಳಗುತ್ತಿದೆ. ಇಲ್ಲಿ ಈಗ ರಾತ್ರಿಯೆಂಬುದು ಹಗಲು, ಹಗಲೆಂಬುದು ಅದ್ಭುತವೆ! ಕಾಶ್ಮೀರದಿಂದ ಕನ್ಯಾಕುಮಾರಿವರೆಗಿನ ವಿಸ್ತಾರವಾದ ಭೂಪ್ರದೇಶದ ಮೂಲೆ ಮೂಲೆಯಿಂದಲೂ ವಿದ್ಯಾರ್ಥಿಗಳು ಇಲ್ಲಿಗೆ ಬರುತ್ತಿದ್ದಾರೆ. ಅವರ ಬಣ್ಣ, ವೇಷಭೂಷಣ, ಸಂಸ್ಕೃತಿ, ಆಹಾರ, ಆಚಾರ ವಿಚಾರ ಇತ್ಯಾದಿಗಳ ನಿತ್ಯೋತ್ಸವದಿಂದಾಗಿ ಸುಳ್ಯ ಮಿನಿಭಾರತದಂತೆ ಭಾಸವಾಗುತ್ತಿದೆ.

ಶ್ರೀಯುತರು ಹೆಚ್ಚು ಒತ್ತು ಕೊಟ್ಟ ಎರಡು ಪ್ರಮುಖ ವಿಷಯಗಳೆಂದರೆ ವಿದ್ಯೆ ಮತ್ತು ಆರೋಗ್ಯ. ಇವೆರಡರ ಪ್ರಯೋಜನ ಸುಳ್ಯದ ಗ್ರಾಮೀಣ ಜನತೆಗೆ ಲಭಿಸಬೇಕೆಂಬುದೇ ಇವರ ಉದ್ದೇಶ. ಒಂದು ಪಕ್ಷ ಇವರಿಗೆ ಹಣ ಸಂಪಾದನೆಯೇ ಮುಖ್ಯ ಉದ್ದೇಶವೆಂದಾಗಿದ್ದರೆ ಇಷ್ಟು ಕೋಟಿಗಟ್ಟಲೆ ಹಣವನ್ನು ಬೆಂಗಳೂರಿನಂತಹ ಸ್ಥಳದಲ್ಲಿ ಸುರಿದಿದ್ದರೆ ಇದರ ನೂರ್ಪಟ್ಟು ಹಣವನ್ನು ಬಾಚಿ ಗುಡ್ಡೆ ಹಾಕಬಹುದಿತ್ತು. ಕುರುಂಜಿಯವರ ಸದುದ್ದೇಶಕ್ಕೆ ದೇವರ ಕೃಪೆಯಿದೆ ಎನ್ನುವುದಕ್ಕೆ ಸುಳ್ಯದಲ್ಲಿ ಮೆಡಿಕಲ್ ಕಾಲೇಜು ಸ್ಥಾಪನೆಯಾಗಿರುವುದೇ ಸಾಕ್ಷಿ. ಆಸ್ಪತ್ರೆ ಸರ್ವ ರೀತಿಯಿಂದಲೂ ಸುಸಜ್ಜಿತವಾಗಿದ್ದು ಅತ್ಯಾಧುನಿಕ ಸೌಲಭ್ಯಗಳನ್ನು ಹೊಂದಿದೆ. ಸುಳ್ಯ ಪರಿಸರದ ಜನ ಚಿಕಿತ್ಸೆಗಾಗಿ ದೂರದ ಮಂಗಳೂರಿಗೋ ಅಥವಾ ಬೆಂಗಳೂರಿಗೋ ಹೋಗಿ ಬಹಳಷ್ಟು ಸಮಯ ಹಾಗೂ ಹಣ ವ್ಯಯ ಮಾಡುವುದು ತಪ್ಪಿ ಮನೆಯ ಬಾಗಿಲಿಗೆ ವೈದ್ಯಕೀಯ ಸೇವೆ ಲಭಿಸುವಂತಾಗುವಲ್ಲಿ ಶ್ರೀಯುತರು ಪಟ್ಟ ಶ್ರಮ ಅರ್ಥವಾದಾಗಲೇ ಅದಕ್ಕೆ ಬೆಲೆ ಬರುತ್ತದೆ.

ಶ್ರೀ ಕುರುಂಜಿಯವರು ಮೂಲತಃ ಮಣ್ಣಿನ ಮಗ. ಕೃಷಿಯೇ ಅವರ ಜೀವನ ಮತ್ತು ಸಾಧನೆಯ ಮೂಲಾಧಾರ. ತಮ್ಮ ಕೃಷಿ ವರಮಾನದಿಂದಲೇ ಇಷ್ಟು ಬೃಹತ್ ಪ್ರಮಾಣದ ವಿದ್ಯಾಸಂಸ್ಥೆಗಳನ್ನು ಮತ್ತು ದಾನಧರ್ಮ ಇತ್ಯಾದಿ ಸತ್ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿದ್ದಾರೆಂದರೆ ಯಾರಿಗೂ ಆಶ್ಚರ್ಯವಾಗಬಹುದಾದರೂ ಇದೊಂದು ಸತ್ಯ ಸಂಗತಿ. ಕೃಷಿಯಲ್ಲಿ ಅವರು ಸಾಧಿಸಿರುವ ಪ್ರಗತಿ ಯಾರನ್ನೂ ಬೆರಗುಗೊಳಿಸುವಂತಹದು. ಇದಕ್ಕೆ ಕಾರಣ ಕೃಷಿಯನ್ನೂ ಅವರು ಒಂದು ತಪಸ್ಸಿನ ಹಾಗೆ ನಡೆಸುತ್ತಾರೆ. ಸುಮಾರು ೬೦ ಎಕರೆಗೂ ಮೀರಿದ ಕೃಷಿಭೂಮಿಯಲ್ಲಿ ಇವರು ಮೂಡಿಸಿರುವ ಕೃಷಿಯ ಚಿತ್ತಾರಕ್ಕೆ ತಾಯಿ ಪಯಸ್ವಿನಿಯ ಜಲಭರಿತ ವಿಶಾಲ ಮಡುವುಗಳೇ ಬಣ್ಣದ ಕುಡಿಕೆಗಳು. ಶ್ರೀ ಕುರುಂಜಿಯವರು ವಿಸ್ತಾರವಾದ ತಮ್ಮ ಅಡಕೆ ತೋಟವನ್ನು ತಿದ್ದಿ, ತೀಡಿ, ನೀರುಣಿಸಿ ಪೋಷಿಸಿ ಬೆಳೆಸಿ ನಿಲ್ಲಿಸಿದ್ದಾರೆ. ತಾಯಿ ಮಗುವನ್ನು ನೋಡಿಕೊಳ್ಳುವಂತೆ ಇವರು ತಮ್ಮ ಅಡಕೆ ಮರಗಳ ಪಾಲನೆಯನ್ನು ಮಾಡುತ್ತಿರುವುದರಿಂದ ಭೂತಾಯಿ ಒಲಿದು ಬಂಗಾರದ ಮಳೆಗರೆಯುತ್ತಿದ್ದಾಳೆ. ಕೃಷಿ ವಿಷಯದಲ್ಲಿ ಇವರ ಪತ್ನಿ ಶ್ರೀಮತಿ ಜಾನಕಿ ಇವರ ಶ್ರದ್ಧೆ ಮತ್ತು ದುಡಿಮೆಯ ಪರಿಯನ್ನು ಬರಿ ಪದಗಳಿಂದಲೇ ತಿಳಿಸಲು ಸಾಧ್ಯವಿಲ್ಲ. ಕುರುಂಜಿಯವರು ತಮ್ಮ ವಿಸ್ತಾರ ಕೃಷಿ ಪರಿಣತೆಯಿಂದ, ಪ್ರಗತಿಪರ ಧೋರಣೆಗಳಿಂದ ಕಡುಮಾನ್ಯರಾಗಿದ್ದಾರೆ. ರೈತ ಸಮುದಾಯ ತಮ್ಮ ಉತ್ಪನ್ನಗಳಿಗೆ

ನ್ಯಾಯವಾದ ಬೆಲೆ ದೊರಕಿಸಿಕೊಳ್ಳಲು ವ್ಯವಸ್ಥಿತ ಪ್ರಯತ್ನ ನಡೆಸಬೇಕೇ ಹೊರತು ರಾಜಕೀಯ ಅಧಿಕಾರದ ಆಕಾಂಕ್ಷೆಯಿಂದ ಚಳವಳಿ ಮಾರ್ಗ ಹಿಡಿಯುವುದು ಸಲ್ಲದು ಎಂದು ರೈತ ಸಂಘಟನೆಗಳ ರಾಜಕೀಯ ಪ್ರವೇಶ ಕುರಿತು ಪ್ರತಿಕ್ರಿಯಿಸುತ್ತಾರೆ. ಆದರೆ ರಾಷ್ಟ್ರದ ಬೆನ್ನೆಲುಬಾದ ರೈತನ ಕಷ್ಟಕಾರ್ಪಣ್ಯಗಳಿಗೆ ಸರ್ಕಾರ ಬೇಗ ಸ್ಪಂದಿಸಿ, ಅವರ ವಸ್ತುಗಳಿಗೆ ಸರಿಯಾದ ಬೆಲೆ ಸಿಕ್ಕುವಂತಾಗ ಬೇಕೆಂಬುದು ಇವರ ಅಭಿಪ್ರಾಯ.

ಆದರ್ಶ ಮೊದಲು ಮನೆಯಲ್ಲಿ ಆರಂಭಗೊಂಡು ನಂತರ ಅದು ಹೊರಗೆ ಪಸರಿಸಿದರೆ ಅದರ ಕಂಪು ಬಹಳ. ಈ ಅಂಶವನ್ನು ಶ್ರೀ ಕುರುಂಜಿಯವರ ಗೃಹಕೃತ್ಯದ ಪರ್ವ ಸ್ತರಗಳಲ್ಲಿ ಕ್ಷಣ ಕ್ಷಣವೂ ಕಾಣಬಹುದಾಗಿದೆ. ಇವರು ಆದರ್ಶ ಪತಿ ಹಾಗೆಯೇ ಆದರ್ಶ ತಂದೆಯಾಗಿದ್ದಾರೆ. ಶ್ರೀ ಕುರುಂಜಿಯವರ ಬಗ್ಗೆ ಎಷ್ಟು ಬರೆದರೂ ಅವರ ಪತ್ನಿಯ ಬಗ್ಗೆ ಹೇಳದಿದ್ದರೆ ಅದು ಅರ್ಥಪೂರ್ಣ ವೆನಿಸದು. "ಇಕ್ಕೆಯನರಿವ ಸತಿಯಿರೆ ಸ್ವರ್ಗಕ್ಕೆ ಕಿಚ್ಚು ಹಚ್ಚು" ಎನ್ನುವ ಸರ್ವಜ್ಞನ ಮಾತಿಗೆ ಶ್ರೀಮತಿ ಜಾನಕಿ ಕುರುಂಜಿ ವೆಂಕಟ್ರಮಣ ಗೌಡರು ಸರಿಯೆನಿಸಿದ್ದಾರೆ. ಒಬ್ಬ ಮಹಾನ್ ವ್ಯಕ್ತಿಯ ಹಿಂದೆ ಒಂದು ಸಾರ್ಥಕ ಹೆಣ್ಣಿನ ಪ್ರೇರಣಾಶಕ್ತಿಯಿರುತ್ತದೆ ಎಂಬ ಮಾತಿಗೆ ಶ್ರೀಮತಿ ಜಾನಕಿಯವರು ಉದಾಹರಣೆಯಾಗುತ್ತಾರೆ. ಎಲೆಮರೆಯ ಫಲದಂತೆ ತಾವಿದ್ದು ಅನುದಿನವೂ ಪತಿಯ ಶ್ರೇಯಸ್ಸಿಗಾಗಿ ಕಾಯಾ ವಾಚಾ ಮನಸಾ ಅಹರ್ನಿಶಿ ದುಡಿಯುತ್ತಿರುವ ಸರಳ, ನಿರಾಡಂಬರ ನಿಲುವಿನ ಸಾಧ್ವಿ ಶ್ರೀಮತಿ ಜಾನಕಿಯವರು ಸ್ತ್ರೀ ಸಮುದಾಯದ ಶಿರೋಮಣಿಯೆನಿಸಿದ್ದಾರೆ. ಶ್ರೀ ಕುರುಂಜಿಯವರ ಮನೆಯೊಳಗಿನ ನೆಮ್ಮದಿಯೆ ಇವರ ಸಾರ್ವಜನಿಕ ಜೀವನದಲ್ಲಿ ಅಪಾರ ಯಶಸ್ಸನ್ನು ಪಡೆಯಲು ಕಾರಣವೆಂಬುದು ತಿಳಿದವರೆಲ್ಲರ ಅಭಿಮತ. ಇವರ ಬೃಹತ್ ಯೋಜನೆಗಳಿಗೆ ಆರ್ಥಿಕ ಸಂಪನ್ಮೂಲ ವಾಗಿರುವುದು ಅಡಕೆಯ ತೋಟ. ಇದರ ಎಲ್ಲ ಜವಾಬ್ದಾರಿ ಶ್ರೀಮತಿ ಜಾನಕಿಯವರದು. ಸೂರ್ಯೋದಯದಿಂದ ಸೂರ್ಯಾಸ್ತಮಾನದ ವರೆಗೆ ದಣಿವರಿಯದ ದುಡಿಮೆ. ಶ್ರೀಯುತರು ದಿನಕ್ಕೆ ೧೮ ಗಂಟೆ ಕೆಲಸ ಮಾಡುತ್ತಾ ತಮ್ಮನ್ನು ೭೫ರ ತರುಣನೆಂದು ಕರೆದುಕೊಳ್ಳುತ್ತಾರೆ. ಇದು ಸರ್ವ ರೀತಿಯಿಂದಲೂ ಅವರ ಪತ್ನಿಗೂ ಅನ್ವಯವಾಗುತ್ತದೆ. ಪತ್ನಿಯ ಹೆಸರಿನಲ್ಲಿಯೂ ಸಹ ಕುರುಂಜಿಯವರು ಹಲವಾರು ಕಲ್ಯಾಣ ಮಂಟಪಗಳನ್ನು ಕಟ್ಟಿಸಿದ್ದಾರೆ. ಶ್ರೀಯುತರು ಹೇಳುವಂತೆ "ದಾಂಪತ್ಯವೆಂದರೆ ೩೬ರ ಸಂಖ್ಯೆಯಂತಿರದೆ ೬೩ರ ಸಂಖ್ಯೆಯಂತಿರಬೇಕು" ಇವರದು ಆದರ್ಶ, ಅನ್ಯೋನ್ಯ ಹಾಗೂ ಮಧುರ ದಾಂಪತ್ಯ. ಮೇಡ್ ಫಾರ್ ಈಚ್ ಅದರ್ ಎನ್ನುವಂತೆ ಇವರ ದಾಂಪತ್ಯ.

ಶ್ರೀ ಕುರುಂಜಿಯವರು ಕುಟುಂಬ ಯೋಜನೆಯನ್ನು ಅನುಷ್ಠಾನಗೊಳಿಸುವ ಸರ್ಕಾರದ ಯೋಜನೆಗೆ ಹಲವು ರೀತಿಯಲ್ಲಿ ಧನಸಹಾಯ ನೀಡಿದ್ದಾರೆ. ಇವರಿಗೆ ಮೂರು ಮಕ್ಕಳು. ಇವರಲ್ಲಿ ಇಬ್ಬರು ಪುತ್ರರು ಮತ್ತು ಒಬ್ಬಳು ಪುತ್ರಿ. ಹಿರಿಯ ಪುತ್ರ ಡಾ. ಕೆ.ವಿ. ಚಿದಾನಂದ M.B.B.S., M.S., FRSH (LONDON). ಇವರು ಅಕಾಡೆಮಿ ಆಫ್ ಲಿಬರಲ್ ಎಜುಕೇಶನ್ ಇದರ ಉಪಾಧ್ಯಕ್ಷ ರಾಗಿಯೂ ಮತ್ತು ಕೆ.ವಿ.ಜಿ. ಮೆಡಿಕಲ್ ಕಾಲೇಜಿನ ಡೈರೆಕ್ಟರ್ ಹಾಗೂ ಮುಖ್ಯ ವೈದ್ಯಾಧಿಕಾರಿಯಾಗಿ

ಸೇವೆ ಸಲ್ಲಿಸುತ್ತಿದ್ದಾರೆ. ದ್ವಿತೀಯ ಪುತ್ರ ಡಾ. ಕೆ.ವಿ. ರೇಣುಕಾ ಪ್ರಸಾದ್ M.B.B.S, FAGE ಇವರು ಅಕಾಡೆಮಿ ಆಫ್ ಲಿಬರಲ್ ಎಜುಕೇಶನ್ ಇದರ ಪ್ರಧಾನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀ ಕುರುಂಜಿಯವರ ಪುತ್ರಿ ಶ್ರೀಮತಿ ಗೋವರ್ಧಿನಿ ಡಾ. ಜಯಕುಮಾರ್ ಇವರು ತಮ್ಮ ವೈದ್ಯ ಪತಿಯೊಂದಿಗೆ ಅಮೇರಿಕಾದಲ್ಲಿ ನೆಲೆಸಿದ್ದಾರೆ.

ತಂದೆ ತಾಯಿಗೆ ಮಕ್ಕಳು ಹುಟ್ಟಿದ ನಿಜವಾದ ಸಂತೋಷ ಅವರು ಬೆಳೆದು ಗುಣವಂತರಾಗಿ ಬಾಳುವಾಗಲೇ ಲಭಿಸುವುದೆಂಬ ಮಾತಿದೆ. ಇಂತಹ ಭಾಗ್ಯಕ್ಕೆ ಶ್ರೀ ಕುರುಂಜಿಯವರು ಭಾಜನರಾಗಿದ್ದಾರೆ. ತಂದೆಯವರ ಸರ್ವ ಗುಣಗಳೂ ಮಕ್ಕಳಲ್ಲಿಯೂ ಮನೆ ಮಾಡಿಕೊಂಡಿವೆ. ಅವರ ಮಾತೆಂದರೆ ಇವರಿಗೆ ಲಕ್ಷ್ಮಣರೇಖೆಯಂತೆ. ಇಂತಹ ಸುಪುತ್ರರು ಸಮಾಜಕ್ಕೆ ಹಾಗೂ ಯುವ ಜನಾಂಗಕ್ಕೆ ಮಾದರಿಯೆನಿಸುವರು.

ಶ್ರೀ ಕುರುಂಜಿಯವರ ಇಬ್ಬರು ಸೊಸೆಯಂದಿರಲ್ಲಿ ಹಿರಿಯಯವರು ಶ್ರೀಮತಿ ಶೋಭಾ ಚಿದಾನಂದ, ಎಂ.ಎ. ಪದವೀಧರೆ. ಇವರಿಗೆ ಒಬ್ಬಳು ಪುತ್ರಿ ಮತ್ತು ಒಬ್ಬ ಪುತ್ರ ಇದ್ದಾರೆ. ಪುತ್ರಿ ಐಶ್ವರ್ಯ ಪ್ರಥಮ MBBS ವಿದ್ಯಾರ್ಥಿನಿ. ಕು. ಐಶ್ವರ್ಯ ಹುಟ್ಟಿದ ಸಮಯಕ್ಕೆ ಶ್ರೀ ಕುರುಂಜಿಯವರಿಗೆ ಸ್ವಪ್ನದಲ್ಲಿ ಮೆಡಿಕಲ್ ಕಾಲೇಜು ಸ್ಥಾಪಿಸಬೇಕೆನ್ನುವ ಬಯಕೆಯ ಮೊಗ್ಗು ಮೂಡಿತ್ತು. ಆದರೆ ಅದು ಅರಳಲು ಸುಮಾರು ೧೭ ವರ್ಷಗಳೇ ಬೇಕಾದವು. ಈ ಅವಧಿಯಲ್ಲಿ ಐಶ್ವರ್ಯ ಮೆಡಿಕಲ್ ಕಾಲೇಜು ಸೇರುವವರೆಗಿನ ಹಾದಿಯನ್ನು ಕ್ರಮಿಸಿಯಾಗಿತ್ತು. ಕಿರಿಯ ಸೊಸೆ ಡಾ. ಕೆ.ಎಸ್. ಜ್ಯೋತಿ ರೇಣುಕಾ ಪ್ರಸಾದ್. ಇವರಿಗಿರುವ ಇಬ್ಬರು ಮಕ್ಕಳಲ್ಲಿ ಒಂದು ಹೆಣ್ಣು ಮತ್ತೊಂದು ಗಂಡು. ''ಹುಟ್ಟುಟ್ಟೊ ಮಕ್ಕಳ ಪುಣ್ಯ ಬರ್‌ಬರೊ ಸೊಸೇರ ಪುಣ್ಯ'' ಎನ್ನುವ ಗಾದೆಯ ಮಾತು ಇಲ್ಲಿ ಅರ್ಥಪೂರ್ಣವೆನ್ನಿಸುತ್ತಿದೆ. ಕುರುಂಜಿಯವರು ಹಾದು ಬರುತ್ತಿರುವ ಎಲ್ಲ ಹಂತದಲ್ಲಿಯೂ ಕೌಟುಂಬಿಕ ನೆಮ್ಮದಿ ಮತ್ತು ಸಂತೋಷ ಅನುಸರಿಸಿಕೊಂಡೇ ಬರುತ್ತಿದೆ.

ಶ್ರೀ ಕುರುಂಜಿಯವರ ಬದುಕು ಒಂದು ತೆರೆದಿಟ್ಟ ನವರಸಭರಿತ ಕಾವ್ಯವಿದ್ದಂತೆ. ಇವರ ಸಾಧನೆಯನ್ನು ಕುರಿತಾದ ಮಹಾಪ್ರಬಂಧಗಳಿಗೆ ಡಾಕ್ಟರೇಟುಗಳು ಲಭಿಸಬಹುದು. ಶ್ರೀಯುತರು ಸಾಹಿತ್ಯೋಪಾಸಕರಾಗಿ ಸಮಾಜಕ್ಕೆ ಸಲ್ಲಿಸಿರುವ ಸೇವೆಯೂ ಅನುಪಮವಾದುದು. ಇವರ ತೀರ್ಥರೂಪರಾದ ದಿ.ಮಾಲಿಂಗ ಮಾಸ್ತರ್ ಸಾಹಿತ್ಯಾರಾಧಕರಾಗಿದ್ದು ಭಾಗವತಿಕೆಯಲ್ಲಿ ಹೆಸರುವಾಸಿಯಾಗಿದ್ದರು. ಶ್ರೀ ಕುರುಂಜಿಯವರು ಮೊದಲಿನಿಂದಲೂ ಪುರಾಣ ಕಥೆಗಳನ್ನು ಓದುವ, ಯಕ್ಷಗಾನವನ್ನು ನೋಡುವ ಹವ್ಯಾಸವನ್ನು ಬೆಳೆಸಿಕೊಂಡು ಬಂದವರು. ತಾವು ಸ್ಥಾಪಿಸಿದ ನೆಹರೂ ಮೆಮೋರಿಯಲ್ ಕಾಲೇಜಿನ ಶಿಲಾನ್ಯಾಸದ ದಿನದಂದು ಆಗ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ದಿವಂಗತ ದೇವರಾಜ ಅರಸು ಅವರಿಂದ ದಿವಂಗತ ಕೊಳಂಬೆ ಪುಟ್ಟಣ್ಣ ಗೌಡರು ಅರೆಭಾಷೆಯಲ್ಲಿ ರಚಿಸಿದ 'ನುಡಿಮಣಿಗಳು' ಎಂಬ ಪುಸ್ತಕವನ್ನು ಬಿಡುಗಡೆಗೊಳಿಸಿದರು. ಬರಹಗಾರರಿಗೆ ಹೆಚ್ಚಿನ ಪ್ರೋತ್ಸಾಹ ಕಲ್ಪಿಸುವ ದೃಷ್ಟಿಯಿಂದ ಕುರುಂಜಿ ಪ್ರಕಾಶನ ಸಂಸ್ಥೆಯನ್ನು ಸ್ಥಾಪಿಸಿ ಕೆಲವು ಕೃತಿಗಳನ್ನು ಬೆಳಕಿಗೆ ತಂದಿದ್ದಾರೆ.

ಶ್ರೀಯುತರು ಪುಸ್ತಕಗಳನ್ನು ಸಂಗ್ರಹಿಸುವ ಮತ್ತು ಓದುವ ಹವ್ಯಾಸವನ್ನು ಬೆಳೆಸಿಕೊಂಡಿದ್ದಾರೆ. ಮನೆಯಲ್ಲಿ ಅವರದೇ ಆದ ಗ್ರಂಥಾಲಯವಿದೆ. ಪುಸ್ತಕ ಬಿಡುಗಡೆಯ ಸಮಾರಂಭಕ್ಕೆ ಹೋದರೆ ಪುಸ್ತಕಗಳ ಮುಖಬೆಲೆ ಎಷ್ಟೇ ಇರಲಿ ಸುಮಾರು ೫೦ ರಿಂದ ೧೦೦ ಪುಸ್ತಕಗಳನ್ನು ಖರೀದಿಸಿ ಬರಹಗಾರರನ್ನು ಪ್ರೋತ್ಸಾಹಿಸುತ್ತಾರೆ. ತಾವು ಕೊಂಡು ತಂದ ಪುಸ್ತಕಗಳಲ್ಲಿ ಕೆಲವನ್ನು ಅಗತ್ಯವಿರುವಲ್ಲಿಗೆ ಉದಾರವಾಗಿ ನೀಡುತ್ತಾರೆ.

ಶ್ರೀ ಕುರುಂಜಿಯವರ ಸಾಹಿತ್ಯಾಸಕ್ತಿಯ ಒಂದು ಮೈಲಿಗಲ್ಲೆಂದರೆ ದಕ್ಷಿಣ ಕನ್ನಡ ಜಿಲ್ಲಾ ಏಳನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ೧೯೯೪ರ ಮಾರ್ಚ್ ತಿಂಗಳ ೨೬ ಮತ್ತು ೨೭ ದಿನದಂದು ಬಹಳ ಅದ್ದೂರಿಯಾಗಿ ಮತ್ತು ಅರ್ಥಪೂರ್ಣವಾಗಿ ಜರುಗಿಸಿದ್ದು. ಇದರ ಯಶಸ್ವಿಗೆ ಇವರು ನೀಡಿದ ಅಪಾರ ಆರ್ಥಿಕ ನೆರವು ಆಸರೆಯಾಯಿತು.

ಶ್ರೀಯುತರು ಒಬ್ಬ ಸಹೃದಯಿ ಕಲಾಭಿಮಾನಿ. ಅದರಲ್ಲೂ ಯಕ್ಷಗಾನದ ಬಗ್ಗೆ ಅಪಾರ ಒಲವುಳ್ಳವರು. ಯಕ್ಷಗಾನ, ನಾಟಕ, ನಾಟ್ಯ, ಸಂಗೀತ ಇತ್ಯಾದಿ ಸಾಂಸ್ಕೃತಿಕ ಚಟುವಟಿಕೆಗಳು ನಡೆಯಲು ಅಪಾರ ಪ್ರೋತ್ಸಾಹ ಮತ್ತು ಧನಸಹಾಯ ನೀಡುತ್ತಾ ಬಂದಿದ್ದಾರೆ. ೧೯೮೩ರಲ್ಲಿ ಶ್ರೀ ರಾಜರಾಜೇಶ್ವರಿ ಹೆಣ್ಮಕ್ಕಳ ಯಕ್ಷಗಾನ ಸಂಘ ಸುಳ್ಯ ಇದನ್ನು ಸ್ಥಾಪಿಸಿ ಇದರ ಅಧ್ಯಕ್ಷರಾಗಿ ಕರ್ನಾಟಕದ ಹಲವು ಕಡೆಗಳಲ್ಲಿ ಹೆಣ್ಣು ಮಕ್ಕಳಿಂದ ಯಕ್ಷಗಾನವನ್ನು ನಡೆಸಿಕೊಟ್ಟಿದ್ದಾರೆ.

ಶ್ರೀಯುತರು ಆಸ್ತಿಕರಾಗಿದ್ದು ಜಗತ್ತಿನಲ್ಲಿ ಸಂಭವಿಸುವುದೆಲ್ಲವೂ ದೇವರ ನಿರ್ಧಾರದಂತೆ ಎಂಬುದರಲ್ಲಿ ಬಲವಾದ ನಂಬಿಕೆಯಿಟ್ಟವರು. ತಾನು ಸುಳ್ಯದಲ್ಲಿ ಸಾಧಿಸಿ ತೋರಿಸಿರುವುದೆಲ್ಲವೂ ದೇವರ ಕೃಪೆಯಿಂದಲೇ ಆಗಿರುವುದು ಎನ್ನುತ್ತಾರೆ. ಹಲವಾರು ದೇವಾಲಯಗಳ ಜೀರ್ಣೋದ್ಧಾರ ಕಾರ್ಯವನ್ನು ನಡೆಸಿಕೊಟ್ಟಿದ್ದಾರೆ, ದ್ವಾರ ಮಂಟಪಗಳನ್ನು ರಚಿಸಿಕೊಟ್ಟಿದ್ದಾರೆ. ಈಗ ಸುಳ್ಯದ ಶ್ರೀ ಚೆನ್ನಕೇಶವ ದೇವಾಲಯದ ಜೀರ್ಣೋದ್ಧಾರ ಕಾರ್ಯವನ್ನು ಆರಂಭಿಸಿದ್ದಾರೆ.

ಶ್ರೀ ಕುರುಂಜಿಯವರು ಬಹುಮುಖ ವ್ಯಕ್ತಿತ್ವದ ಅಪರೂಪದ ವ್ಯಕ್ತಿ. ಇವರು ತಮ್ಮ ಅದ್ಭುತ ಸಾಧನೆ, ವೈವಿಧ್ಯಮಯವಾದ ಕೊಡುಗೆ ಮತ್ತು ಆದರ್ಶ ಬಾಳಿನ ಮೂಲಕ ಸರ್ವರಿಗೂ ಮಾದರಿಯೆನಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅಪಾರ ಪ್ರಶಸ್ತಿಗಳು ಅವರಿಗೆ ಲಭಿಸಿವೆ. ಶ್ರೀ ಕುರುಂಜಿಯವರ ಸಾಧನೆಯ ಕಿರೀಟವನ್ನು ಅಲಂಕರಿಸಿರುವ ಹಿರಿಮೆಯ ಗರಿಗಳೆಂದರೆ -

ರಾಜೀವ ಗಾಂಧಿ ರಾಷ್ಟ್ರೀಯ ಏಕತಾ ಪ್ರಶಸ್ತಿ - ೧೯೯೪

ನ್ಯೂ ಇಯರ್ ಅವಾರ್ಡ್ ಬೈ ಅಕಾಡೆಮಿ ಆಫ್ ಜನರಲ್ ಎಜ್ಯುಕೇಶನ್ - ೧೯೯೫

ಗ್ಲೋರಿ ಆಫ್ ಇಂಡಿಯಾ ಇಂಟರ್‌ನ್ಯಾಷನಲ್ ಅವಾರ್ಡ್ - ೧೯೯೭

ಆರ್ಕ ಆಫ್ ಇಂಡಿಯಾ ಇಂಟರ್‌ನ್ಯಾಷನಲ್ ಗೋಲ್ಡ್ ಅವಾರ್ಡ್ (ಲಂಡನ್) - ೧೯೯೮

ನ್ಯಾಷನಲ್ ಎಜ್ಯುಕೇಶನ್ ಎಕ್ಸಲೆನ್ಸ್ ಅವಾರ್ಡ್ (ನ್ಯೂಡೆಲ್ಲಿ) - ಇಂಡಿಯಾ - ೧೯೯೮

ಪರಿಸರ ರತ್ನ ಇಂಟರ್‌ನ್ಯಾಷನಲ್ ಅವಾರ್ಡ್ - ೧೯೯೮

ಜವಾಹರಲಾಲ್ ನೆಹರೂ ಎಕ್ಸಲೆನ್ಸ್ ಅವಾರ್ಡ್ - ೧೯೯೮

ನೇಷನ್ಸ್ ವಿಕಾಸ್ ಜ್ಯೋತಿ ಅವಾರ್ಡ್ (ನ್ಯೂಡೆಲ್ಲಿ) ಇಂಡಿಯಾ - ೧೯೯೮

ನೇಷನಲ್ ಅವಾರ್ಡ್ ಆಫ್ ಎಕ್ಸಲೆನ್ಸ್ ಇನ್ ಎಜ್ಯುಕೇಷನ್ - ೧೯೯೯

ಜವಾಹರಲಾಲ್ ನೆಹರೂ ಲೈಫ್ ಟೈಮ್ ಎಚೀವ್‌ಮೆಂಟ್ ಅವಾರ್ಡ್ - ೧೯೯೯

ಇಂಡೋ - ನೇಪಾಳ್ ಫ್ರೆಂಡ್‌ಶಿಪ್ ಅವಾರ್ಡ್ - ೧೯೯೯

ಪ್ರೈಡ್ ಆಫ್ ಇಂಡಿಯಾ ಅವಾರ್ಡ್ - ೧೯೯೯

ರಾಷ್ಟ್ರೀಯ ಶಿಕ್ಷಣ ಎಕ್ಸೆಲೆನ್ಸ್ ಅವಾರ್ಡ್ - ೧೯೯೯

ರಾಜೀವಗಾಂಧಿ ಶಿರೋಮಣಿ ಪ್ರಶಸ್ತಿ - ೧೯೯೯

ಇಂದಿರಾಗಾಂಧಿ ಸದ್ಭಾವನಾ ಪ್ರಶಸ್ತಿ - ೧೯೯೯

ರಾಷ್ಟ್ರೀಯ ರತ್ನ ಪ್ರಶಸ್ತಿ - ೧೯೯೯

ಲ್ಯುಮಿನರೀ ಆಫ್‌ದ ಲಾಸ್ಟ್ ಡಿಕೇಡ್ ಆಫ್ ಮಿಲೇನಿಯಂ - ೨೦೦೦

ಔಟ್ ಸ್ಟ್ಯಾಂಡಿಂಗ್ ಮ್ಯಾನೇಜರ್ ಅವಾರ್ಡ್ - ೨೦೦೦

ಉಡುಪಿ ಶ್ರೀಕೃಷ್ಣ ಪರ್ಯಾಯ ಪ್ರಶಸ್ತಿ - ೨೦೦೦

ಉಡುಪಿ ಅದಮಾರು ಮಠ ಮನುಕುಲ ಭೂಷಣ ಪ್ರಶಸ್ತಿ - ೨೦೦೨

ಅತ್ಯುತ್ತಮ ವ್ಯವಸ್ಥಾಪಕ ಪ್ರಶಸ್ತಿ - ೨೦೦೨

ಬಿ.ಸಿ. ರಾಯ್ ಡಾಕ್ಟರ್ಸ್ ಡೇ ಅವಾರ್ಡ್ - ೨೦೦೧

ಇಂಟರ್ ನ್ಯಾಷನಲ್ ಗೋಲ್ಡ್ ಸ್ಟಾರ್ ಮಿಲೇನಿಯಂ ಅವಾರ್ಡ್ ೨೦೦೧

ಇದೀಗ ಕುರುಂಜಿಯವರಿಗೆ ೭೫ರ ಹರೆಯ. ಇನ್ನೂ ಸಾಧಿಸಬೇಕೆಂಬ ಉತ್ಕಟ ಬಯಕೆಯಿಂದಾಗಿ ಅವರು ಎಷ್ಟು ಕ್ರಿಯಾಶೀಲರಾಗಿದ್ದಾರೆಂದರೆ ಇದು ೨೫ರ ತರುಣರನ್ನು ನಾಚಿಸುವಂತಿದೆ. ಸಮಾಜದ ಸರ್ವಾಂಗೀಣ ಅಭಿವೃದ್ಧಿಗಾಗಿ ದೀಕ್ಷಾಬದ್ಧರಾಗಿ ಅಹರ್ನಿಶಿ ಶ್ರಮಿಸುತ್ತಿರುವ ಇವರು ಸುಳ್ಯಕ್ಕೆ ಕಾಮಧೇನು - ಕಲ್ಪವೃಕ್ಷವಿದ್ದಂತೆ. ಇಳಿ ವಯಸ್ಸಿನ ದೈಹಿಕ ದೌರ್ಬಲ್ಯವನ್ನು ಲೆಕ್ಕಿಸದೆ ಕರ್ಮಯೋಗಿಯಾಗಿ ಅನವರತವೂ ದುಡಿಯುತ್ತಿರುವ ಇವರು ಅಗ್ರ ತಾಂಬೂಲಾರ್ಹರೂ ಹಾಗೂ ಪ್ರಾತಃ ಸ್ಮರಣೀಯರೂ ಆಗಿರುತ್ತಾರೆ. ಶೂನ್ಯದಿಂದ ಶ್ರೇಷ್ಠತೆಗೆ ಏರಿದ ಇವರು ಬದುಕಿದ್ದಾಗಲೇ ದಂತಕಥೆಯಾಗಿದ್ದಾರೆ. ಇವರ ಅಂತಃಕರಣದ ಮಿಡಿತವನ್ನು ಅರಿತವರಿಗೆ ಇವರೊಬ್ಬ ದೇವಮಾನವರೆಂದು ವೇದ್ಯವಾಗುತ್ತದೆ.

# ವಿದ್ಯಾನಗರ ಕುರುಂಜಿಬಾಗ್ - ಶಿಕ್ಷಣದ ಹರಿಕಾರ
# ಶ್ರೀ ಕುರುಂಜಿಯವರ ವ್ಯಕ್ತಿತ್ವ ದರ್ಶನ

---

**ಸಂವಾದ ಬರಹ: ಪೂವಪ್ಪ ಕಣಿಯೂರು**
**ಸಹಕಾರ: ಪ್ರೊ. ಕೆ.ವಿ. ದಾಮೋದರ ಗೌಡ**

---

ದಕ್ಷಿಣ ಕನ್ನಡ ಜಿಲ್ಲಾ ಗೌಡರ ಸಂಘ ಅಸ್ತಿತ್ವಕ್ಕೆ ಬಂದು ಇಪ್ಪತ್ತೈದು ವರ್ಷಗಳು ಸಂದ ಸಂದರ್ಭದಲ್ಲಿ, ಅದರ ಬೆಳ್ಳಿಹಬ್ಬದ ಪ್ರಯುಕ್ತ ಹೊರತರುವ ಗೌಡ ಜನಾಂಗದ ಕುರಿತಾದ ಆಕರ ಗ್ರಂಥದಲ್ಲಿ, ಗೌಡ ಜನಾಂಗದ ಮೇರು ವ್ಯಕ್ತಿತ್ವ ಹೊಂದಿರುವ, ಶ್ರೀ ಕುರುಂಜಿ ವೆಂಕಟರಮಣ ಗೌಡರ ಕಾಣ್ಕೆಗಳನ್ನು (visions) ದಾಖಲಿಸುವುದು ಬಹಳ ಮುಖ್ಯ. ಯಾಕೆಂದರೆ ಅವರ ಕಾಣ್ಕೆಗಳು ಅನನ್ಯವಾದವುಗಳು. ಎಲ್ಲಾ ಜನಾಂಗಗಳಿಗೂ ಮಾದರಿ ಮಾರ್ಗದರ್ಶಕವಾಗಬಲ್ಲವು.

ಯಾರಿಗೂ ಯಾತಕ್ಕೂ ಬೇಡವಾಗಿದ್ದ ಸುಳ್ಯದ ಕುರುಂಜಿಗುಡ್ಡೆ ಇಂದು ದೇಶ ವಿದೇಶಗಳಿಗೂ ವಿಸ್ತರಿಸಿಕೊಂಡಿರುವುದು ಆಶ್ಚರ್ಯ ಮತ್ತು ವಿಸ್ಮಯವನ್ನು ತಂದುಕೊಡುತ್ತದೆ. ಮುಳ್ಳುಕಂಟಿಗಳಿಂದ ಕೂಡಿದ್ದ ಈ ಕುರುಂಜಿಬೆಟ್ಟ ಇಂದು ವಿದ್ಯಾನಗರ ಕುರುಂಜಿ ಬಾಗ್ ಎಂದು ಪರಿವರ್ತನೆಗೊಂಡಿದೆ. ಇದಕ್ಕೆ ಬಹುಮುಖಿ ವ್ಯಕ್ತಿತ್ವದ ಶ್ರೀ ಕುರುಂಜಿಯವರ ಸೃಷ್ಟಿಶೀಲ ಮನೋಧರ್ಮ ಕಾರಣವಾಗಿದೆ. ಮರುಭೂಮಿಯಲ್ಲೂ ಕೃಷಿ ಮಾಡಬಲ್ಲೆ ಎನ್ನುವ ಕೃಷಿಕ ಮನೋಬಲದ ಶ್ರೀ ಕುರುಂಜಿಯವರನ್ನು ಈ ಬರಹದಲ್ಲಿ ಪ್ರಸ್ತುತಪಡಿಸುವುದು ಕಷ್ಟ ಸಾಧ್ಯವೆನ್ನುವ ಮಿತಿ ಇದ್ದೇ ಇದೆ. ಹಾಗಾಗಿಯೂ ಶ್ರೀ ಕುರುಂಜಿಯವರ ವ್ಯಕ್ತಿತ್ವದ ಭಿನ್ನ ನೆಲೆಗಳನ್ನು ಅವರದ್ದೇ ಆದ ಅಭಿಪ್ರಾಯಗಳ ಮೂಲಕ ಮುಂದಿಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಆ ಕಾರಣಕ್ಕಾಗಿ ಅವರೊಂದಿಗೆ ಸಂವಾದವನ್ನು ನಡೆಸಲಾಯಿತು. ಸಂವಾದದಲ್ಲಿ ವ್ಯಕ್ತವಾದ ಅಭಿಪ್ರಾಯಗಳನ್ನು ಸಂಗ್ರಹಿಸಿ ಇಲ್ಲಿ ನಿರೂಪಿಸಲಾಗಿದೆ. ಶ್ರೀ ಕುರುಂಜಿಯವರು, ಬಹುಮುಖಿಯಾಗಿ ಶೈಕ್ಷಣಿಕ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರಗಳ ಮೂಲಕ ತಮ್ಮನ್ನು ತೊಡಗಿಸಿಕೊಂಡವರು ಮತ್ತು ತನ್ನ ಪರಿಸರದ ಎಲ್ಲಾ ಸಮುದಾಯಗಳ ಪ್ರಗತಿಗೆ ಕಾರಣರಾದವರು. ಆಲೋಚನೆ ಮತ್ತು ಯೋಜನೆಗಳನ್ನು ಅನುಷ್ಠಾನಗೊಳಿಸಿದವರು. ಈ ಕುರಿತಂತೆ ಸಂವಾದವನ್ನು ಏರ್ಪಡಿಸಿದಾಗ, ಅವರು ಬಹಳ ಮುಕ್ತವಾಗಿ ಮುಚ್ಚುಮರೆಯಿಲ್ಲದೆ ಬಿಚ್ಚುನುಡಿಯಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಅಷ್ಟರ ಮಟ್ಟಿಗೆ ಶ್ರೀ ಕುರುಂಜಿಯವರದ್ದು ಸರಳ ಸಜ್ಜನಿಕೆಯ ವ್ಯಕ್ತಿತ್ವ.

ಶ್ರೀ ಕುರುಂಜಿ ವೆಂಕಟ್ರಮಣ ಗೌಡರನ್ನು ಇಂದು ಸಮಾಜ ಸ್ಮರಿಸುವುದು ಅವರೊಬ್ಬ ಶಿಕ್ಷಣದ ಹರಿಕಾರ ಎಂಬ ಕಾರಣಕ್ಕಾಗಿ. ಈ ಕ್ಷೇತ್ರದಲ್ಲಿ ಏಕಾಂಗಿಯಾಗಿ ಅವರು ಸಾಧಿಸಿದ ಸಾಧನೆ ಅಪಾರವಾದುದು. ಈ ಕುರಿತಾಗಿ ಅವರನ್ನು ಮಾತನಾಡಿಸಿದಾಗ ಅವರಿಂದ ವ್ಯಕ್ತವಾಗುವ ಅವರ ಜೀವನದ ಪೂರ್ವ ಇತಿಹಾಸ ವಿಸ್ಮಯವನ್ನುಂಟುಮಾಡುತ್ತದೆ. ಮೂಲತಃ ರೈತ ಕುಟುಂಬದಿಂದ ಬಂದ ಮಣ್ಣಿನ ಮಗನೊಬ್ಬ ಶಿಕ್ಷಣ ಸಂಸ್ಥೆಗಳನ್ನು ಕಟ್ಟುತ್ತೇನೆನ್ನುವ ಕನಸು ಕಾಣುವುದು ಕೂಡ ಅಸಾಧ್ಯದ ಮಾತು. ಆದರೆ ಶ್ರೀ ಕುರುಂಜಿಯವರು ಆ ಕನಸನ್ನು ಕಂಡದ್ದು ಮಾತ್ರವಲ್ಲ ಅನುಷ್ಠಾನಕ್ಕೂ ತಂದಿದ್ದಾರೆ. ಇದು ಅತಿಶಯವಲ್ಲ. ಕುರುಂಜಿ ಬಾಗ್‌ಗೆ ಒಮ್ಮೆ ಬಂದರೆ ಅದು ವಾಸ್ತವವೆಂದು ಮನದಟ್ಟಾಗುತ್ತದೆ. ಈ ಬಗೆಯ ಇಚ್ಛಾಶಕ್ತಿಗೆ ಪ್ರೇರಕವಾದ ಮೂಲವನ್ನು ಸವಿವರವಾಗಿ ಅವರೇ ಹೇಳುತ್ತಾರೆ ಮತ್ತು ಅದನ್ನು ಮನಸಾ ಆನಂದಿಸುತ್ತಾರೆ.

ನನ್ನ ಬದುಕಿನಲ್ಲಿ ೧೯೪೧-೪೨ರ ಕಾಲ ಬಹಳ ಕಷ್ಟಕರವಾದುದು. ನಮ್ಮ ತಂದೆಯವರಾದ ಶ್ರೀ ಮಾಲಿಂಗ ಗೌಡರು ಐದು ರೂಪಾಯಿ ಸಂಬಳ ಪಡೆಯುತ್ತಿದ್ದ ಪ್ರೈಮರಿ ಸ್ಕೂಲ್ ಮಾಸ್ತರರಾಗಿದ್ದರು. ಆಗ ನಮ್ಮ ಕುಟುಂಬಕ್ಕೆ ಊಟಕ್ಕೆ ಬೇಕಾದ ಭತ್ತ ಮತ್ತು ಅರ್ಧ ಖಂಡಿ ಅಡಿಕೆ ಬೆಳೆ ಮಾತ್ರ ಇದ್ದದ್ದು. ೧೯೪೧ರಲ್ಲಿ ನಮ್ಮ ತಂದೆಯವರು ತೀರಿಕೊಂಡಾಗ ಜೀವನ ಕಷ್ಟವಾಯಿತು. ತಾಯಿಯ ಅಣ್ಣಂದಿರಾದ ಶ್ರೀ ರಾಮಣ್ಣ ಗೌಡ, ಶ್ರೀ ನಾರಾಯಣ ಗೌಡ ಇವರುಗಳು ನಮ್ಮ ಪೋಷಣೆ ಮಾಡಿದರು. ನಾವು ಸೊನ್ನೆಯಿಂದ ಹೊರಟವರು. ಬಂಧುಗಳಾದ ಸೂರಿತೋಡು ಅಣ್ಣಪ್ಪ ಗೌಡರಿಂದ ನೂರು ರೂಪಾಯಿ ಸಹಾಯ ಪಡೆದು ಸಣ್ಣ ವ್ಯಾಪಾರ ಆರಂಭಿಸಿದೆವು. ೧೯೪೮ರಲ್ಲಿ ಸ್ವಲ್ಪ ದೊಡ್ಡ ಪ್ರಮಾಣದಲ್ಲಿ ವ್ಯಾಪಾರ ಮಾಡಿ ಸ್ವಲ್ಪ ಮಟ್ಟಿಗೆ ಸ್ಥಿತಿವಂತರಾದೆವು. ಹೀಗೆ ಆರ್ಥಿಕವಾಗಿ ಸುಧಾರಿಸಿಕೊಂಡ ಬಳಿಕ ನಾನು ೧೯೫೪ರಲ್ಲಿ ಕಾಂಗ್ರೆಸ್ ಬ್ಲಾಕ್ ಅಧ್ಯಕ್ಷನಾದೆ. ಹಾಗೆ ಬಿ.ಡಿ.ಸಿ ಸದಸ್ಯನಾಗಿ ಮತ್ತು ೧೯೫೭ರಲ್ಲಿ ಎಂ.ಪಿ.ಸಿ.ಸಿ. ಸದಸ್ಯನಾಗಿ ದಕ್ಷಿಣ ಕನ್ನಡ ಜಿಲ್ಲೆಯ ಬೇರೆ ಬೇರೆ ಕಡೆಗಳಿಗೆ ಭೇಟಿ ಕೊಡುವ ಸಂದರ್ಭ ಬಂತು. ಆಗ ನನಗೆ ಹೋದಲ್ಲಿ, ಬಂದಲ್ಲಿ ಕಂಡದ್ದು ಅಜ್ಞಾನ, ಬಡತನ! ಆಗ ನನಗೆ ಇದಕ್ಕೆಲ್ಲ ಒಂದೇ ಒಂದು ಔಷಧಿಯೆಂದರೆ ಶಿಕ್ಷಣ ಎನ್ನುವ ಜ್ಞಾನೋದಯವಾಯಿತು. ಅಂದು ನಾನು ಶಾಲೆಗಳನ್ನು ತೆರೆಯಬೇಕೆಂದು ಮಾಡಿದ ಸಂಕಲ್ಪ ಇಂದು ಸಾಕಾರಗೊಂಡಿದೆ. ೧೯೪೯ರಲ್ಲಿ ಸುಳ್ಯದಲ್ಲಿ ಹೈಸ್ಕೂಲ್ ತೆರೆಯುವ ಪ್ರಯತ್ನದಲ್ಲಿ ನಾನು ಮಹತ್ತರ ಪಾತ್ರ ವಹಿಸಿದೆ. ಇದರಲ್ಲಿ ನಾನು ಸಂಕಲ್ಪಿಸಿದ ಕಾರ್ಯ ಆರಂಭವಾಯಿತು. ಇದು ಸುಳ್ಯದಲ್ಲಿ ಈ ವರ್ಷದಿಂದ ಆರಂಭವಾದ ವೈದ್ಯಕೀಯ ಕಾಲೇಜಿನ ಸ್ಥಾಪನೆಯವರೆಗೆ ನಿರಂತರವಾಗಿ ನಡೆಯಿತು ಎನ್ನುವಾಗ ಶ್ರೀ ಕುರುಂಜಿಯವರು ಸಂತೃಪ್ತಿಯ ನಗೆ ಚೆಲ್ಲುತ್ತಾರೆ.

ಸುಳ್ಯದಲ್ಲಿ ನೆಹರು ಮೆಮೋರಿಯಲ್ ಕಾಲೇಜನ್ನು ಮೊದಲು ಸ್ಥಾಪಿಸಿದಾಗ ಇದ್ದ ಸುಳ್ಯ ಪರಿಸರಕ್ಕೂ ಇವತ್ತು ಕಾಣುವ ಸುಳ್ಯ ಪರಿಸರಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಈ ಬದಲಾವಣೆಯಲ್ಲಿ ಪ್ರಗತಿಯ ಗತಿ ಇದೆ. ಈ ಕುರಿತಾಗಿ, ಕುರುಂಜಿಯವರನ್ನು ಪ್ರಶ್ನಿಸಿದರೆ ಈ ಬದಲಾವಣೆಯಲ್ಲಿ ತಮ್ಮ ಪಾತ್ರವನ್ನು ಪ್ರಧಾನವೆಂದು ಗುರುತಿಸಿ ಉತ್ತರಿಸುತ್ತಾರೆ.

ಸುಳ್ಯದಲ್ಲಿ ನಾವು ೧೯೭೬ರಲ್ಲಿ ನೆಹರು ಮೆಮೋರಿಯಲ್ ಕಾಲೇಜನ್ನು ಸ್ಥಾಪಿಸುವ ಮೊದಲು ಸುಳ್ಯದ ಯುವಜನತೆ ಪದವಿ ಓದಬೇಕಾದರೆ ಮಂಗಳೂರಿಗೋ, ಮಡಿಕೇರಿ, ಹಾಸನಗಳಿಗೊ ಹೋಗಬೇಕಿತ್ತು. ಇದು ಎಲ್ಲರಿಗೂ ಸಾಧ್ಯವೇ? ಹಣವಿದ್ದ ಮೇಲ್ವರ್ಗದ ಜನರಿಗೆ ಸಾಧ್ಯವಾಗುತ್ತಿತ್ತು. ವಿದ್ಯೆಯಿಂದ ವಂಚಿತರಾಗಿ, ಮೂಲ ಕಸುಬುಗಳಲ್ಲಿ ನೆಲೆ ನಿಲ್ಲಬೇಕಾದ ಸುಳ್ಯದ ಅನೇಕ ಯುವಕರು ವಿದ್ಯೆಯ ಜೊತೆಗೆ ಉದ್ಯೋಗವನ್ನು ಪಡೆಯುವ, ಉದ್ದಿಮೆದಾರರಾಗುವ ಸಾಧ್ಯತೆಯಾದುದು ನಮ್ಮ ಕಾಲೇಜು ಆರಂಭವಾದ್ದರಿಂದ. ಇದರಿಂದಾಗಿ ಸುಳ್ಯದಲ್ಲಿ ಆರ್ಥಿಕ ಸಂಚಯನಕ್ಕೆ ಕಾರಣವಾಗಿ ಸುಳ್ಯ ಶ್ರೀಮಂತವಾಗಿದೆ. ವರ್ತಮಾನದಲ್ಲಿ ವೃತ್ತಿಪರ ಶಿಕ್ಷಣಕ್ಕೆ ಮಹತ್ವ ಬಂದಿದೆ. ವೃತ್ತಿ ಶಿಕ್ಷಣದ ಕೊರತೆಯನ್ನು ಕಂಡ ನಾವು ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ಸ್ಥಳೀಯವಾಗಿ ಪರಿಸರದ ಯುವಜನತೆಗೆ ಅವು ಲಭಿಸುವಂತೆ ಮಾಡಿದ್ದೇವೆ. ದ.ಕ. ಮತ್ತು ಕೊಡಗು ಜಿಲ್ಲೆಗಳನ್ನು ಹೊಂದಿಕೊಂಡಂತೆ, ಶಿಕ್ಷಣವನ್ನು ಮುಖ್ಯವಾಗಿಟ್ಟುಕೊಂಡು ೧೧೨ ಕೊಠಡಿಗಳ ನಿರ್ಮಾಣಕ್ಕೆ, ಧನಸಹಾಯ ಮಾಡಿದ್ದೇವೆ. ಅದರಲ್ಲಿ ಜ್ಞಾನ ದೇಗುಲಗಳಿರಬಹುದು. ಶಾಲಾ ಕೊಠಡಿಗಳಿರಬಹುದು. ಸುಳ್ಯ ಪರಿಸರದ ಒಟ್ಟು ಪ್ರಗತಿಯ ದೃಷ್ಟಿಯಿಂದ ೬೪ ಯುವಕ -ಯುವತಿ ಮಂಡಲಗಳ ಸ್ಥಾಪನೆಗೆ ಸಹಕಾರ ನೀಡಿದ್ದೇವೆ. ಅದರಲ್ಲೂ ೧೬ ಸ್ವಂತ ಕಟ್ಟಡಗಳನ್ನು ಪಡೆಯುವಲ್ಲಿ ಧನಸಹಾಯ ಮಾಡಿದ್ದೇವೆ. ನಮ್ಮ ಮುಖ್ಯ ಉದ್ದೇಶ ಯುವ ಜನತೆಯಲ್ಲಿ ಪ್ರಗತಿರ ದೃಷ್ಟಿ, ಮೂಡಬೇಕೆನ್ನುವುದು. ದೇಶದ ಪ್ರಗತಿಯಲ್ಲಿ ಯುವಜನತೆಯ ಪಾತ್ರ ಮಹತ್ತರವಾದುದು. ಈ ದೃಷ್ಟಿಯಿಂದ ಪರಿಸರದ ಸರ್ವತೋಮುಖ ಪ್ರಗತಿಯಲ್ಲಿ ತಮ್ಮ ಪಾತ್ರವಿದೆ ಎಂದು ಶ್ರೀ ಕುರುಂಜಿಯವರು ಆತ್ಮವಿಶ್ವಾಸ ದಿಂದ ಹೇಳುತ್ತಾರೆ.

ಇಂಜಿನಿಯರಿಂಗ್, ವೈದ್ಯಕೀಯ ಕಾಲೇಜುಗಳಂತಹ ಸಂಸ್ಥೆಗಳನ್ನು ಸ್ಥಾಪಿಸಿ ಪೋಷಿಸುವಲ್ಲಿ ಸಮಾಜದ ಸಹಕಾರವನ್ನು ಸ್ಮರಿಸುವ ಶ್ರೀ ಕುರುಂಜಿಯವರು, ಶಿಕ್ಷಣ ಸಂಸ್ಥೆಗಳನ್ನು ಆರಂಭಿಸಿದ ಸಂದರ್ಭದಲ್ಲಿ ಎದುರಾದ ತೊಡಕುಗಳನ್ನು ಹೇಳಿಕೊಳ್ಳುವುದಕ್ಕೂ ಮರೆಯುವುದಿಲ್ಲ. ಅದು ಅವರಲ್ಲಿ ಸಹಜವಾಗಿ ವ್ಯಕ್ತವಾಗುತ್ತದೆ. ಅನೇಕರಲ್ಲಿ ಬಹಳಷ್ಟು ಹಣ ಇರಬಹುದು. ಆದರೆ ಅದು ಸಮಾಜದ ಉಪಯೋಗಕ್ಕೆ ಬರಬೇಕು. ಇಲ್ಲದಿದ್ದರೆ ಅದು ವ್ಯರ್ಥ. ಅರ್ಥ ಪರಾರ್ಥಕ್ಕಾಗಿ ಇರಬೇಕು. ಸುಳ್ಯದಲ್ಲಿ ಶಿಕ್ಷಣ ಸಂಸ್ಥೆಗಳನ್ನು ಆರಂಭಿಸುವ ಸಾಹಸ ಆರಂಭವಾದದ್ದು ಒಂದು ಕುಟುಂಬದಿಂದ. ಮುಂದೆ ಏಕವ್ಯಕ್ತಿಯಿಂದ. ಆರ್ಥಿಕವಾಗಿ ಬೇರೆ ಯಾವ ಮೂಲವು ಇಲ್ಲ. ಇಂತಹ ಸಾಹಸಕ್ಕೆ 'ವಿದ್ಯೆಯೆ ಎಲ್ಲದಕ್ಕೂ ಮೂಲ' ಎನ್ನುವ ಮೂಲ ಪ್ರೇರಣೆ. ಈ ಪ್ರೇರಣೆಗೆ ಪರಿಸರ ಕಾರಣವಾಯಿತು. ಅಜ್ಞಾನ, ಬಡತನದಿಂದ ಬಳಲುವ ಸಮಾಜಕ್ಕೆ ಅರಿವನ್ನು ನೀಡಬೇಕು. ಇದು ದೇಶದ ಪ್ರಗತಿಗೆ ಕಾರಣವಾಗುತ್ತದೆ. ಈ ನಿಟ್ಟಿನಲ್ಲಿ ಸಮಾಜದಿಂದ ನನಗೇನು ನಿರೀಕ್ಷೆಗಳಿಲ್ಲ. ನನ್ನಿಂದ ಸಮಾಜಕ್ಕೆ ಉಪಕಾರವಾಗಬೇಕು. ನಾವು ಸುಳ್ಯದಲ್ಲಿ ಹೈಸ್ಕೂಲು ಮಾಡಬೇಕಾದ ಸಂದರ್ಭದಲ್ಲಿ ಹಣ ಸಂಗ್ರಹಕ್ಕಾಗಿ ನಾಟಕ ಆಡಿಸಿದ್ದೇವೆ. ನಮ್ಮ ಮಾತೃ ಸಂಸ್ಥೆಯಾದ ನೆಹರು ಮೆಮೋರಿಯಲ್ ಕಾಲೇಜನ್ನು ಸ್ಥಾಪಿಸುವುದು ಆರ್ಥಿಕವಾಗಿ ಬಹಳ ಸಮಸ್ಯೆಯಾಗಿತ್ತು. ಇಂದು ಪೋಷಕರು ತಮ್ಮ ಮಕ್ಕಳನ್ನು

ನಮ್ಮ ಕಾಲೇಜುಗಳಿಗೆ ಸೇರಿಸುವುದರ ಮೂಲಕ ಸಹಕರಿಸುತ್ತಾರೆ. ಈಗ ನಮ್ಮ ಪರಿಸರದ ಯುವಕರು, ಇಂಜಿನಿಯರ್, ಡಾಕ್ಟರರಾಗುವುದನ್ನು ನೋಡಿ ನಾನು ತೃಪ್ತಿ ಹೊಂದುತ್ತೇನೆನ್ನುವ ಸಹೃದಯತೆ ಶ್ರೀ ಕುರುಂಜಿಯವರದ್ದು.

ಶಿಕ್ಷಣ ಸಂಸ್ಥೆಗಳನ್ನು ನಡೆಸುವುದು ಸುಲಭದ ಕಾರ್ಯವಲ್ಲ. ಅಲ್ಲಿ ಅನೇಕ ಅಡ್ಡಿ ಆತಂಕಗಳು ಇದ್ದೇ ಇವೆ. ವರ್ತಮಾನದಲ್ಲಿ ವಿದ್ಯಾಸಂಸ್ಥೆಗಳಲ್ಲಿ ಸಮಯ ಸಾಧಕತೆ ಮತ್ತು ರಾಜಕೀಯ ತುಂಬಿದೆ ಎನ್ನುವ ಪ್ರಜ್ಞಾವಂತರ ಆತಂಕಕ್ಕೂ ಸಹಮತ ಸೂಚಿಸುವ ಶ್ರೀ ಕುರುಂಜಿಯವರು ಸರಸ್ವತಿ ಮಂದಿರಗಳಲ್ಲಿ ಈ ಬಗೆಯ ರಾಡಿ ಸರಿಯಲ್ಲವೆಂದು ಸೂಚಿಸುತ್ತಾರೆ. ಇತ್ತೀಚೆಗೆ ಸರಕಾರದ ಶಿಕ್ಷಣ ನೀತಿಯಿಂದಾಗಿ ಆರ್ಥಿಕ ಸ್ಥಿತಿವಂತರು ಮಾತ್ರ ವೃತ್ತಿಪರ ಕೋರ್ಸುಗಳಿಗೆ ಸೇರಲು ಸಾಧ್ಯವಾಗುತ್ತಿದೆ. ತೀರ ಸಾಮಾನ್ಯರಷ್ಟೆ, ಕಲೆ, ವಾಣಿಜ್ಯ ವಿಜ್ಞಾನಗಳಂತಹ ಮೂಲ ಸಂಪ್ರದಾಯಿಕ ಶಿಸ್ತುಗಳಲ್ಲಿ ಉಳಿದುಕೊಳ್ಳುತ್ತಿದ್ದಾರೆ. ಇದು ಒಂದು ಬಗೆಯ ಬೌದ್ಧಿಕ ಅಸಮತೋಲನಕ್ಕೆ ಕಾರಣವಾಗಿ ವರ್ಗ ವ್ಯವಸ್ಥೆಯನ್ನು ಯಥಾಸ್ಥಿತಿಯಲ್ಲಿ ಮುಂದುವರಿಸುವುದಕ್ಕೆ ಸಹಕಾರಿ ಎನ್ನುವ ಪ್ರಜ್ಞೆ ಶ್ರೀ ಕುರುಂಜಿಯವರನ್ನು ಕಾಡಿದೆ. ಆದರೆ ಒಂದು ದೇಶದ ಪ್ರಗತಿ ಮುಖ್ಯವಾಗಿರುವಾಗ, ಜಗತ್ತಿನ ಇತರ ರಾಷ್ಟ್ರಗಳು ಆ ದಿಕ್ಕಿನಲ್ಲಿ ಚಲನಶೀಲವಾಗಿರುವಾಗ, ನಾವು ಕೈಕಟ್ಟಿ ಸುಮ್ಮನಿರುವುದೇ? ಎನ್ನುವ ಈ ಮರು ಪ್ರಶ್ನೆ ಅವರನ್ನು ಎಚ್ಚರಿಸುತ್ತದೆ. ಅದಕ್ಕಾಗಿ ವೃತ್ತಿಪರ ಶಿಕ್ಷಣ ಮುಖ್ಯ. ಅದಕ್ಕೆ ಪ್ರೋತ್ಸಾಹ ಕೊಡುವುದು ಅನಿವಾರ್ಯ. ಈ ಕುರಿತು ಇಡೀ ಸಮಾಜವೇ ಆಲೋಚಿಸಬೇಕು. ಸರಕಾರ ಈ ದೃಷ್ಟಿಯಲ್ಲಿ ಕಾರ್ಯಸೂಚಿಗಳನ್ನು ರೂಪಿಸಿದೆ. ಗ್ರಾಮೀಣ ಪ್ರದೇಶದ ಹಿಂದುಗಳಿಂದ ಜಾತಿ-ವರ್ಗಗಳಿಗೆ ಇಷ್ಟಿಷ್ಟು ಸೀಟುಗಳೆಂದು ಕಾಯ್ದಿರಿಸಿದೆ. ಪ್ರಕೃತಿ ನಿಯಮದಂತೆ ಎಲ್ಲಾ ವರ್ಗದ ಬುದ್ಧಿವಂತರಿಗೂ ಅವಕಾಶ ಇದ್ದೇ ಇದೆ. ನೋಡಿ, ಬದುಕಿಗೆ ಇರುವ ಸಾಧ್ಯತೆಗಳು ಹಲವು. ಹಾಗಿರುವಾಗ ಸಾಮಾನ್ಯ ಬುದ್ಧಿವಂತರಿಗೂ ಅವಕಾಶಗಳು ಇದ್ದೇ ಇರುತ್ತವೆ. ಶಿಕ್ಷಣ ಪ್ರಕ್ರಿಯೆಯಲ್ಲಿ ಅಧ್ಯಾಪಕ - ವಿದ್ಯಾರ್ಥಿ - ಪೋಷಕರು - ಆಡಳಿತ ಮಂಡಳಿ ಇವು ಪ್ರಧಾನ ಅಂಗಗಳು. ಈ ನಾಲ್ಕು ಚಕ್ರಗಳು ಸಮಾನವಾಗಿರುವಾಗ ಶಿಕ್ಷಣದ ಪರಿಪೂರ್ಣತೆ. ನನ್ನ ದೃಷ್ಟಿಯಲ್ಲಿ ಅಧ್ಯಾಪಕರಷ್ಟೇ ಪೋಷಕರೂ ಮುಖ್ಯರಾಗುತ್ತಾರೆ. ತಮ್ಮ ಮಕ್ಕಳನ್ನು ಸರಿಯಾದ ದಾರಿಯಲ್ಲಿ ಹೋಗಲು ಮಾರ್ಗದರ್ಶನ ಮಾಡುವುದು ಅವರ ಕರ್ತವ್ಯ. ಇವತ್ತು ಇಂಗ್ಲಿಷ್ ಭಾಷಾ ಜಗತ್ತಿನಲ್ಲಿ ಪ್ರಮುಖ ವ್ಯಾವಹಾರಿಕ ಭಾಷೆಯಾಗಿರುವಾಗ ಅದರ ಕುರಿತಾದ ನಿರಾಕರಣೆ ಸಲ್ಲದು. ನಮ್ಮ ಮಾತೃ ಭಾಷೆ ಅನನ್ಯವಾದುದು. ಅದನ್ನು ಮರೆಯುವುದೆಂದರೆ ಹೆತ್ತ ತಾಯಿಯನ್ನು ಮರೆಯುವಂತೆ. ವೃತ್ತಿಪರ ಶಿಕ್ಷಣದಲ್ಲಿ ಇಂಗ್ಲಿಷ್ ಹೆಚ್ಚು ಉಪಕಾರವಾಗುತ್ತದೆ. ಈ ದೃಷ್ಟಿಯಿಂದ ಸುಳ್ಯ ತಾಲೂಕಿನ ೧೫೨ ಶಾಲೆಗಳಿಗೆ ಇಂಗ್ಲಿಷ್ ಲೈಬ್ರೆರಿಗಳನ್ನು ಕೊಟ್ಟಿದ್ದೇನೆ. ಜೊತೆಗೆ ಎಂಟು ಪದವಿಪೂರ್ವ ಕಾಲೇಜು ಗಳಲ್ಲಿ, ವೃತ್ತಿಪರ ಶಿಕ್ಷಣಕ್ಕೆ ಪೂರಕವಾಗುವಂತೆ, ವಿಜ್ಞಾನ ತರಗತಿಗಳನ್ನು ತೆರೆಸಿದ್ದೇವೆ. ನಮ್ಮ ಸಹಕಾರವನ್ನು ನೀಡಿದ್ದೇವೆ. ಇದರ ಮುಖ್ಯ ಉದ್ದೇಶ ವೃತ್ತಿಪರ ಶಿಕ್ಷಣ ನಮ್ಮ ಗ್ರಾಮೀಣ ಯುವಕರಿಗೂ ಸಿಗುವಂತಾಗಬೇಕು. ನಗರದವರಿಗೆ ಮಾತ್ರ ಸಿಗುವ ಇಂತಹ ಶಿಕ್ಷಣ ನಮ್ಮವರಿಗೂ ಸಿಕ್ಕಿ, ಅವರೂ ಈ ಸ್ಪರ್ಧಾತ್ಮಕ

ಜಗತ್ತಿನಲ್ಲಿ ತಮ್ಮ ಇರುವಿಕೆಯನ್ನು ತೋರಿಸಿ ಕೊಡಲಿ ಎನ್ನುವುದು ಶ್ರೀ ಕುರುಂಜಿಯವರ ಆಶಯ.

ಇಂದು ಶಿಕ್ಷಣದ ಪ್ರಕ್ರಿಯೆ ಸಾಗುತ್ತಿರುವ ದಿಕ್ಕನ್ನು ಗಮನಿಸಿದರೆ, ಅದು ಸರಕಾರದ ಖಾಸಗೀಕರಣ ನೀತಿಗೆ ಅನುಗುಣವಾಗಿರುವುದು ಸ್ಪಷ್ಟವಾಗುತ್ತಿದೆ. ಈ ಕುರಿತು ಶ್ರೀ ಕುರುಂಜಿಯವರ ನಿಲುವು, ಪ್ರಯೋಗ ಶೀಲ ಶಿಕ್ಷಣ ತಜ್ಞನ ನಿಲುವಾಗಿದೆ. ಸರಕಾರದ ಒಡೆತನದಿಂದ ಖಾಸಗಿಯವರಿಗೆ ವರ್ಗಾವಣೆಯಾಗುವುದು ಶಿಕ್ಷಣದ ಆಮೂಲಾಗ್ರ ಬದಲಾವಣೆಯ ದೃಷ್ಟಿಯಿಂದ ಮುಖ್ಯವೆನ್ನುತ್ತಾರೆ. ಸರಕಾರದ ಒಡೆತನದಲ್ಲಿ ಶಿಕ್ಷಣ ಏನಾಗುತ್ತಿದೆ ಎನ್ನುವ ಸ್ಪಷ್ಟ ಚಿತ್ರಣ ಅವರಿಗಿದೆ. ಖಾಸಗಿ ಸಂಸ್ಥೆಗಳಲ್ಲಿ ಅಚ್ಚುಕಟ್ಟುತನ, ಪೂರಕ ಅವಶ್ಯಕತೆಗಳು (Infrastructure) ಅಧ್ಯಾಪಕ, ಸಿಬ್ಬಂದಿ ಪೂರ್ಣ ಪ್ರಮಾಣದಲ್ಲಿದ್ದು ವಿದ್ಯಾರ್ಥಿಗಳಿಗೆ ಮತ್ತು ಒಟ್ಟು ಶಿಕ್ಷಣ ಪ್ರಕ್ರಿಯೆಗೆ ನ್ಯಾಯ ಸಂದಾಯವಾಗುತ್ತದೆ. ಖಾಸಗಿಯವರಲ್ಲೂ ಸ್ಪರ್ಧೆ ಏರ್ಪಟ್ಟು ಸ್ವಂತ ಗೌರವದ ಪ್ರಶ್ನೆಯಾಗಿ ಶಿಕ್ಷಣದ ಮೌಲ್ಯ (quality) ಸಹಜವಾಗಿ ಸುಧಾರಿಸುತ್ತದೆ. ಕೆಲವು ಖಾಸಗಿ ಶಿಕ್ಷಣ ಸಂಸ್ಥೆಗಳು ವ್ಯಾಪಾರಿ ಮನೋಧರ್ಮದಿಂದ ವ್ಯವಹರಿಸುತ್ತವೆ. ನಿಜ ಆದರೆ ಸರಕಾರ ತಾನು ಮಾಡುವ 'ಕಾನೂನು ನೀತಿ'ಯಲ್ಲಿ (Policy Matter) ಬಿಗುತನ ಮತ್ತು ಅನುಷ್ಠಾನಗೊಳಿಸುವಲ್ಲಿ ಪ್ರಾಮಾಣಿಕತೆ ತೋರಿಸಿದರೆ ಇದನ್ನು ನಿಯಂತ್ರಿಸಲು ಸಾಧ್ಯ ಎನ್ನುವ ಸಲಹೆಯನ್ನು ಶ್ರೀ ಕುರುಂಜಿಯವರು ನೀಡುತ್ತಾರೆ. ಖಾಸಗಿಯವರು ನಡೆಸುತ್ತಿರುವ ಅನೇಕ ಶಾಲಾ ಕಾಲೇಜುಗಳ ಉದಾಹರಣೆಯನ್ನು ನೀಡುತ್ತ ಅಲ್ಲಿನ ಫಲಿತಾಂಶಗಳನ್ನು ಸರಕಾರಿ ಶಾಲಾ ಕಾಲೇಜುಗಳ ಫಲಿತಾಂಶಗಳೊಂದಿಗೆ ತುಲನಾತ್ಮಕವಾಗಿ ತೂಗಿ ನೋಡಿ ತಮ್ಮ ಖಾಸಗೀಕರಣ ಕುರಿತಾದ ಒಲವನ್ನು ಸಮರ್ಥಿಸಿಕೊಳ್ಳುತ್ತಾರೆ. ಬಹಳ ಮುಖ್ಯವಾಗಿ ವೃತ್ತಿಪರ ಉನ್ನತ ಶಿಕ್ಷಣ ಖಂಡಿತ ಖಾಸಗೀಕರಣವಾಗಬೇಕು. ಮಾಧ್ಯಮಿಕ ಶಿಕ್ಷಣವನ್ನು ಕೂಡಾ ಖಾಸಗಿಯವರಿಗೆ ಕೊಟ್ಟರೆ ನಷ್ಟವಿಲ್ಲ. ಬೇಕಾದರೆ ಸರಕಾರವೂ ನಡೆಸಲಿ ಎನ್ನುವ ಶ್ರೀ ಕುರುಂಜಿಯವರು ಇಲ್ಲಿ ಪ್ರಯೋಗಶೀಲ ದೃಷ್ಟಿಯನ್ನು ಹೊಂದುತ್ತಾರೆ. ಈ ಬಗೆಯಿಂದಾಗಿಯೇ ಅವರ ಸಂಸ್ಥೆಗಳು ಹೆಚ್ಚು ಆಕರ್ಷಕವಾಗಿ ದೇಶದ ಗಮನ ಸೆಳೆಯಲು ಸಾಧ್ಯವಾಗಿದೆ. ಸಂಖ್ಯಾ ದೃಷ್ಟಿಗಿಂತ ಮೌಲ್ಯ ದೃಷ್ಟಿ ಮುಖ್ಯ ಎನ್ನುವುದು ಶ್ರೀ ಕುರುಂಜಿಯವರ ತತ್ವ.

ಶ್ರೀ ಕುರುಂಜಿಯವರು ಅರ್ಥಶಾಸ್ತ್ರದ ಅಧ್ಯಯನ ಮಾಡದೆ ಇರಬಹುದು. ಆದರೆ ಈ ಕುರಿತಾದ ಚಿಂತನೆ ಯಾವ ಅರ್ಥಶಾಸ್ತ್ರಜ್ಞನ ಚಿಂತನೆಗೂ ಕಡಿಮೆ ಮಟ್ಟದ್ದಲ್ಲ. ಅವರ ಪ್ರಯೋಗಶೀಲ ಅರ್ಥನೀತಿಯ ಬಗ್ಗೆ ವಿಚಾರಿಸಿದರೆ ಯಾವುದೇ ಗೊಂದಲಗಳಿಲ್ಲದೆ ವಿವರಿಸುತ್ತಾರೆ ಮತ್ತು ವಿಚಾರಿಸಿದವರಿಗೆ ತನ್ನ ಉಳಿತಾಯ ಯೋಜನೆಯ ಉಪಾಯಗಳನ್ನು ಹೇಳಿಕೊಡುತ್ತಾರೆ. ಮೂಲತಃ ನಾವು ಕೃಷಿಕರು. ಅಡಿಕೆ ಬೆಳೆ ಬೆಳೆಯುತ್ತೇವೆ. ಅದೇ ನಮ್ಮ ಬಂಡವಾಳದ ಮೂಲ. ಜೀವನೋಪಾಯದ ವೆಚ್ಚವನ್ನುಳಿದ ಸಂಪಾದನೆಯನ್ನು ಉಳಿತಾಯ ಯೋಜನೆಗಳಲ್ಲಿ ತೊಡಗಿಸುತ್ತೇವೆ. ಬಂದ ಲಾಭಾಂಶವನ್ನು ವಿವಿಧ ಉದ್ದೇಶಗಳಿಗೆ ಉಪಯೋಗಿಸುತ್ತೇವೆ. ಅದರಲ್ಲೂ ಮುಖ್ಯವಾಗಿ ಶಿಕ್ಷಣಕ್ಕೆ ಸಂಬಂಧಿಸಿದಂತೆ ಬಹುಪಾಲು ಹಣವನ್ನು ವ್ಯಯಿಸುತ್ತೇವೆ. ಹಣ ಉಳಿತಾಯ ಮಾಡಬೇಕಾದರೆ ಮನುಷ್ಯ ಮುಖ್ಯವಾಗಿ ದುಶ್ಚಟಗಳಿಂದ ಮುಕ್ತನಾಗಿರಬೇಕು. ನಮಗೆ ಯಾವ ಅಭ್ಯಾಸಗಳು ಇಲ್ಲದೆ

ಇರುವುದರಿಂದ ದೊಡ್ಡ ಪ್ರಮಾಣದಲ್ಲಿ ಹಣವನ್ನು ಉಳಿತಾಯ ಯೋಜನೆಗಳಲ್ಲಿ ತೊಡಗಿಸಲು ಸಾಧ್ಯವಾಗಿದೆ. ಮೂಲಧನವನ್ನು ಹಾಗೆಯೇ ಉಳಿಸಿಕೊಂಡು, ಬರುವ ಲಾಭದ ಧನವನ್ನು ಸಮಾಜದ ಉದ್ಧಾರದ ದೃಷ್ಟಿಯಿಂದ ಅಷ್ಟಿಷ್ಟು ದಾನಧರ್ಮ ಮಾಡಿದ್ದೇವೆ. ಮುಂದೆಯು ಮಾಡುತ್ತೇವೆ. ಇಂದು ವಿಶ್ವಮಟ್ಟದಲ್ಲಿ ಆಗುತ್ತಿರುವ ಆರ್ಥಿಕ ಸಿದ್ಧಾಂತದಿಂದಾಗಿ, ಮುಕ್ತ ಮಾರುಕಟ್ಟೆ, ವ್ಯಾಪಾರ ನೀತಿಯಿಂದಾಗಿ ಅಡಿಕೆಗೆ ಬೆಲೆ ಕುಸಿದಿದೆನ್ನಲಾಗುತ್ತದೆ. ಆದರೆ ಈಗ ಅಡಿಕೆಗೆ ಸರಕಾರ ನಿಗದಿಪಡಿಸಿದ ಬೆಂಬಲ ಬೆಲೆ ಯುಕ್ತವಾಗಿಯೆ ಇದೆ. ಒಮ್ಮೆ ಅಡಿಕೆಗೆ ಏರಿದ ಹುಚ್ಚು ಬೆಲೆ ನ್ಯಾಯಯುತ ವಾದುದಲ್ಲ. ನಾವೀಗ ಅಡಿಕೆ ಬೆಳೆಗಾರರು, ಬೆಲೆ ಕುಸಿದ ಸಂದರ್ಭಕ್ಕೆ ಹೊಂದಿಕೊಂಡು 'ಮಿತವ್ಯಯ' ಮಾಡೋಣ. ಉಡುಗೆ ತೊಡುಗೆಗಳಲ್ಲಿ ದುಬಾರಿತನ ಬೇಡ. ಸರಳ ಜೀವನಕ್ಕೆ ಈಗಿನ ಬೆಲೆ ಸಾಕು. ಇದು ಶ್ರೀ ಕುರುಂಜಿಯವರ ಆರ್ಥಿಕ ನೀತಿಯ ಸರಳ ಸೂತ್ರಗಳು.

ವಿದ್ಯಾಸಂಸ್ಥೆಗಳು ಸರ್ವಸಮಾನತಾ ಭಾವದ ಆಧಾರದಲ್ಲಿ ವ್ಯಕ್ತಿಯ ಸರ್ವಾಂಗೀಣ ವಿಕಸನಕ್ಕೆ ಕಾರಣವಾಗಬೇಕು. ಇದು ಡಾ. ಎಸ್. ರಾಧಾಕೃಷ್ಣನ್‌ರವರ ಮಾತು. ಈ ಮಾತನ್ನು ಶ್ರೀ ಕುರುಂಜಿ ಯವರು ಮೆಚ್ಚುತ್ತಾರೆ. ಈ ಅರ್ಥದಲ್ಲಿ ಶಿಕ್ಷಕರ ದಿನಾಚರಣೆಯನ್ನು ಅರ್ಥಪೂರ್ಣವಾಗಿಸುವಲ್ಲಿ ಅವರು ವಿಶೇಷ ಮುತುವರ್ಜಿ ವಹಿಸುತ್ತಾರೆ. ಶಿಕ್ಷಣದ ಪ್ರಕ್ರಿಯೆಯಲ್ಲಿ ಶಿಕ್ಷಕ ಮುಖ್ಯ ಅಂಗ. ಶಿಕ್ಷಕರು ದೇಶದ ಶಿಲ್ಪಿಗಳು. ಅವರು ಗೌರವ ಯೋಗ್ಯರು ಎನ್ನುವ ಶ್ರೀ ಕುರುಂಜಿಯವರಿಗೆ ಶಿಕ್ಷಕರಲ್ಲಿ ಅಪಾರ ಗೌರವ ಮತ್ತು ಪ್ರೀತಿ. ತಮ್ಮ ಗುರುಗಳಾಗಿದ್ದ, ಪ್ರಮುಖ ಕವಿ ವಿದ್ವಾಂಸರಾಗಿದ್ದ ದಿ. ಕೊಳಂಬೆ ಪುಟ್ಟಣ್ಣ ಗೌಡರು ತಮ್ಮ ಮೇಲೆ ಬೀರಿದ ಪ್ರಭಾವವನ್ನು ಸ್ಮರಿಸುತ್ತಾರೆ. ಶಿಕ್ಷಕರ ಮೇಲಿರುವ ವಿಶೇಷ ಗೌರವಕ್ಕಾಗಿ ಒಂದೂವರೆ ಲಕ್ಷ ಹಣವನ್ನು ಉಳಿತಾಯ ಯೋಜನೆಯಲ್ಲಿ ತೊಡಗಿಸಿ, ಬರುವ ಬಡ್ಡಿ ಹಣದಿಂದ ಸುಳ್ಯ ತಾಲೂಕಿಗೆ ಸಂಬಂಧಿಸಿದಂತೆ, ವಿಶೇಷ ಸಾಧನೆ ಮಾಡಿದ ಶಿಕ್ಷಕರನ್ನು ಗುರುತಿಸಿ ಪ್ರತಿವರ್ಷ ಶಿಕ್ಷಕರ ದಿನದಂದು ಗೌರವಿಸುವ ಪರಂಪರೆಯನ್ನು ಶ್ರೀಯುತರು ಹುಟ್ಟುಹಾಕಿದ್ದಾರೆ.

ಸರ್ವ ಸಮಾನತೆಯ ದೃಷ್ಟಿಯಿಂದ ತಮ್ಮ ಎಲ್ಲಾ ಶಿಕ್ಷಣ ಸಂಸ್ಥೆಗಳಲ್ಲಿ ಸಮಾಜದ ಎಲ್ಲಾ ಜಾತಿ-ವರ್ಗಗಳ ವಿದ್ಯಾರ್ಥಿಗಳಿಗೆ ಮುಕ್ತವಾಗಿ ಮತ್ತು ಉದಾರವಾಗಿ ಅಧ್ಯಯನ ಮಾಡುವ ಅವಕಾಶವನ್ನು ಕಲ್ಪಿಸಿದ್ದೇವೆ. ನಮ್ಮಲ್ಲಿ ತಾರತಮ್ಯದ ಪ್ರಶ್ನೆಯೆ ಇಲ್ಲ. ಯಾಕೆಂದರೆ ನಾವು ಶಿಕ್ಷಣ ಸಂಸ್ಥೆಯನ್ನು ಕಟ್ಟಿದ ಉದ್ದೇಶವೇ ಸಮಾಜದ ಎಲ್ಲಾ ವರ್ಗಗಳು ಜ್ಞಾನವನ್ನು ಪಡೆಯಬೇಕನ್ನುವುದು. ಈ ಮಾತುಗಳನ್ನು ಆಡುವ ಶ್ರೀ ಕುರುಂಜಿಯವರು ಒಬ್ಬ ಮಾನವತಾವಾದಿಯಾಗಿ ಕಂಡುಬರುತ್ತಾರೆ.

ಪದವಿ ಕಾಲೇಜುಗಳನ್ನು, ತಾಂತ್ರಿಕ ಮತ್ತು ವೈದ್ಯಕೀಯ ಸಂಸ್ಥೆಗಳನ್ನು ಸ್ಥಾಪಿಸಿ ವ್ಯವಸ್ಥಿತವಾಗಿ ಆಡಳಿತ ನಡೆಸುತ್ತಿರುವ ಒಕ್ಕಲು ಮನೆತನದ ಶ್ರೀ ಕುರುಂಜಿಯವರನ್ನು ನೀವೊಂದು ಕೃಷಿ ವಿದ್ಯಾಲಯವನ್ನು ಸ್ಥಾಪಿಸಿದರೆ ಒಕ್ಕಲಿಗ ಸಮುದಾಯಗಳಿಗೆ ಅದರಿಂದ ಬಹುಮುಖಿ ಉಪಕಾರ ವಾಗಲಾರದೆ? ಎಂದು ಸಂಪಾದಕ್ಕೇಳಿದರೆ, ಸಾಮಾನ್ಯವಾದ ಮತ್ತು ಅಷ್ಟೆ ಮಹತ್ವಪೂರ್ಣವಾದ ಅಭಿಪ್ರಾಯಗಳನ್ನು ವ್ಯಕ್ತಮಾಡುತ್ತಾರೆ. ಸರಕಾರವೇ ಕೃಷಿ ವಿದ್ಯಾಲಯಗಳನ್ನು ಅಚ್ಚುಕಟ್ಟಾಗಿ

ನಡೆಸುತ್ತಿದೆ. ಖಾಸಗಿಯವರು ನಡೆಸಬಹುದಾದರೂ ಅದು ಸಣ್ಣ ಕಾರ್ಯವಲ್ಲ. ಅದಕ್ಕೆ ೬೦೦ ಎಕರೆ ಭೂಮಿಯ ಅವಶ್ಯಕತೆ ಇದೆ. ಪೂರಕ ಅವಶ್ಯಕತೆಗಳನ್ನು ಹೊಂದಿಸಿಕೊಳ್ಳುವುದು ಅಷ್ಟೇ ತ್ರಾಸದಾಯಕ. ಜೊತೆಗೆ ಇಂದು ಕೃಷಿ ಎನ್ನುವುದೇ ಲಾಭದಾಯಕವಲ್ಲವಾದ್ದರಿಂದ ಆ ಕುರಿತಾಗಿ ಸಮಾಜದಲ್ಲಿ ಬೇಡಿಕೆಯೂ ಇಲ್ಲ. 'ಅವಶ್ಯಕತೆಗೆ ಅವಕಾಶ' ಎನ್ನುವ ನೀತಿಯನ್ನನುಸರಿಸಬೇಕು. 'ವಿಶ್ವ ಮಾರುಕಟ್ಟೆ'ಯ ಗೊಂದಲ, ಜಾಗತೀಕರಣ ಈ ಎಲ್ಲಾ ವಾಸ್ತವಗಳ ಅರಿವಿರುವಾಗ ಇದು ಸ್ವಲ್ಪ ಆಲೋಚನೆ ಮಾಡಬೇಕಾದ ವಿಷಯವಾಗಿದೆ. ಆದರೂ ಬಯೋ ಟೆಕ್ನಾಲಜಿಗೆ ಒತ್ತು ಕೊಡುವ ಕಾಲ ಬಂದಿರುವಾಗ ಈ ಬಗ್ಗೆ ಚಿಂತಿಸಬೇಕಾದ ಅಗತ್ಯವಿದೆ. ಎಲ್ಲವೂ ಕಾಲದಿಂದ ನಿರ್ಧಾರವಾಗುತ್ತದೆನ್ನುವ ಆಶಾವಾದ ಈ ಕುರಿತಾಗಿ ಶ್ರೀ ಕುರುಂಜಿಯವರಲ್ಲಿ ಕಾಣುತ್ತದೆ.

ಸಾಮಾಜಿಕವಾಗಿ ಶ್ರೀ ಕುರುಂಜಿಯವರ ಕೊಡುಗೆಗಳು ಅನನ್ಯವಾದವುಗಳು. ಶಿಕ್ಷಣದಷ್ಟೆ ದೇಹ ಮನಸ್ಸುಗಳ ಸ್ವಾಸ್ಥ್ಯ ಮುಖ್ಯವೆಂದು ಪರಿಗಣಿಸುವ ಅವರು ಸಮಾಜದ ಒಟ್ಟು ಹಿತ ದೃಷ್ಟಿಯಿಂದ ಶ್ರಮಿಸುತ್ತಿದ್ದಾರೆ. ಅರಿವು ಅನೇಕ ಸಾಮಾಜಿಕ ಪಿಡುಗುಗಳನ್ನು ನಿವಾರಿಸಿಕೊಳ್ಳಲು ಸಾಧನವೆನ್ನುವ ಕಾರಣಕ್ಕಾಗಿ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿದ್ದೇವೆ. ದುರದೃಷ್ಟವಶಾತ್ ನಿರಂತರವಾಗಿ ಸಮಾಜ ಮುಖದಲ್ಲಿ ಮತಾಂಧತೆ, ತಾರತಮ್ಯ ಭಾವ, ವರದಕ್ಷಿಣೆ, ಜಾತಿ ವೈಷಮ್ಯ, ಬಡತನ, ಮೂಢನಂಬಿಕೆ ಇವೇ ಮೊದಲಾದ ಪಿಡುಗುಗಳು ಕಂಡು ಬರುತ್ತಿವೆ. ಇದಕ್ಕೆಲ್ಲ ನಮ್ಮಿಂದ ಪರಿಹಾರ ಸಾಧ್ಯವಿಲ್ಲವೇ? ಖಂಡಿತವಿದೆ. ಮುಖ್ಯವಾಗಿ ನಾವು ವಿಶಾಲದೃಷ್ಟಿಯನ್ನು ಬೆಳೆಸಿಕೊಳ್ಳಬೇಕು. ನಾವೆಲ್ಲ ಮನುಷ್ಯರೆನ್ನುವ ಮೂಲಭೂತ ಅರಿವು ಬರಬೇಕು. ಬುದ್ಧ, ಏಸು, ಪೈಗಂಬರ್ ಬದುಕಿ ತೋರಿಸಿದ ಶಾಂತಿ, ಸೌಹಾರ್ದತೆ ಸಹಬಾಳ್ವೆ ಮುಂತಾದ ಮಾನವೀಯ ಅಂತಃಕರಣದ ನೆಲೆಗಳು ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡಬಲ್ಲುವು. ಆಧುನಿಕ ವೈಜ್ಞಾನಿಕ ಮನೋಧರ್ಮವನ್ನು ಅರ್ಥೈಸಿ ಬೆಳೆಸಿಕೊಳ್ಳಬೇಕು. ಹಳೆಯದನ್ನು ತಿರಸ್ಕರಿಸಿದೆ ಹೊಸದೆನ್ನುವ ಕಾರಣಕ್ಕಾಗಿ ಎಲ್ಲವನ್ನೂ ಪುರಸ್ಕರಿಸದೆ ಇವೆರಡರ ಸಮನ್ವಯ ಮುಖ್ಯವಾಗಬೇಕು ಎನ್ನುವ ಶ್ರೀ ಕುರುಂಜಿಯವರು ಪರಂಪರೆ ಮತ್ತು ಆಧುನಿಕತೆಯ ಸಮನ್ವಯಕಾರರಾಗಿ ಕಂಡುಬರುತ್ತಾರೆ.

ವರ್ತಮಾನದಲ್ಲಿ ಸರಕಾರದ ಬೊಕ್ಕಸಕ್ಕೆ ಬರುವ ಆದಾಯದಲ್ಲಿ ಬಹುಪಾಲು ಅಬಕಾರಿಯಿಂದ ಬರುತ್ತಿದೆ. ಅಬಕಾರಿ ಮುಕ್ತ ರಾಷ್ಟ್ರದ ಕಲ್ಪನೆ ಗಾಂಧಿ ಕನಸರಿಸಿದ್ದು, ಒಂದು ವೇಳೆ ಸರಕಾರ ಗಾಂಧೀಜಿಯ ಕನಸನ್ನು ನನಸಾಗಿಸುವ ಪ್ರಯತ್ನದಲ್ಲಿ ತೊಡಗಿದರೆ, ನಾನು ಬಹಳ ಮುತುವರ್ಜಿಯಿಂದ ಅದರ ಪರವಾಗಿ ಕೈಜೋಡಿಸುತ್ತೇನೆ. ಯಾಕೆಂದರೆ ಮದ್ಯಪಾನ ನಮ್ಮ ಸಮಾಜದಲ್ಲಿರುವ ಬಹುದೊಡ್ಡ ಪಿಡುಗು. ಮದ್ಯಪಾನ ಮಾನಸಿಕ ಅಸಮತೋಲನಕ್ಕೆ ಕಾರಣವಾಗಿ ವಿನಾಶಕಾರಿ ಸಮಾಜ ಬಾಹಿರ ಚಟುವಟಿಕೆಗಳು ಆರಂಭವಾಗುತ್ತವೆ. ಯುವ ಜನಾಂಗ ಈ ಪಿಡುಗಿಗೆ ಬಲಿಯಾಗುತ್ತಿರುವುದು ವಿಷಾದಕರ ನೋಡಿ. ನಾನು ಒಂದು ವೇಳೆ ಈ ಪಿಡುಗಿನಿಂದ ದೂರ ಉಳಿಯದೆ ಇರುತ್ತಿದ್ದರೆ, ಇಷ್ಟೆಲ್ಲ ಸಂಸ್ಥೆಗಳನ್ನು ಕಟ್ಟಲು ಸಾಧ್ಯವಾಗುತ್ತಿತ್ತೇ? ಇಲ್ಲ. ಇದನ್ನೆಲ್ಲ ಮನಗಂಡು ನಾನು ಭಾಗವಹಿಸುವ ಸಮಾರಂಭದಲ್ಲಿ ಸಂದರ್ಭೋಚಿತವಾಗಿ ತಿಳಿಯಪಡಿಸುತ್ತೇನೆ. ಈ ಅರ್ಥದಲ್ಲಿ

ಸರಕಾರದ ಯಾವ ನೀತಿಗೂ ಕಾಯದೆ ಅಧಿಕೃತವಾಗಿ ಮದ್ಯಪಾನಕ್ಕೆ ವಿರೋಧವನ್ನು ವ್ಯಕ್ತಪಡಿಸಿದ್ದೇನೆ. ನಾವು ಮಾತನ್ನು ಕೃತಿಗಿಳಿಸಿ ತೋರಿಸಿದ್ದೇವೆ. ನಮ್ಮ ಕುಟುಂಬದಲ್ಲಿ ಯಾರಿಗೂ ಈ ದುಶ್ಚಟವಿಲ್ಲ. ಹಾಗಾಗಿ ಎಲ್ಲರೂ ಸ್ಥಿತಿವಂತರಾಗಿದ್ದಾರೆ. ಸಮಾಜದಲ್ಲಿ ಒಂದಲ್ಲ ಒಂದು ಬಗೆಯ ಗೌರವಕ್ಕೆ ಪಾತ್ರರಾಗಿದ್ದಾರೆ. ಸರಕಾರಕ್ಕೆ ಅಬಕಾರಿಯಿಂದ ಎಷ್ಟೇ ಆದಾಯ ಬರಲಿ ಅದು ಮುಖ್ಯವಲ್ಲ. ಖಂಡಿತ ಸರಕಾರ ನೀತಿಯನ್ನು ಜಾರಿಗೆ ತಂದರೆ, ಸುಳ್ಯವನ್ನು ಮದ್ಯ ಮುಕ್ತ ತಾಲೂಕನ್ನಾಗಿಸುವ ಕಾರ್ಯದಲ್ಲಿ ನಮ್ಮಿಂದಾಗುವ ಯಾವ ಬಗೆಯ ಸಹಾಯವನ್ನು ಮಾಡಲು ಸಿದ್ಧ ಎನ್ನುವ ದೃಢನಿರ್ಧಾರವನ್ನು ಶ್ರೀ ಕುರುಂಜಿಯವರು ವ್ಯಕ್ತಪಡಿಸುತ್ತಾರೆ.

ಸುಳ್ಯ ಪರಿಸರದ ಗೌಡ ಜನಾಂಗ ಆರ್ಥಿಕವಾಗಿ ಮುಂದುವರಿದಿರುವುದಕ್ಕೆ ಭೌಗೋಳಿಕತೆ ಒಂದು ಕಾರಣವಾದರೆ ಶೈಕ್ಷಣಿಕವಾಗಿಯೂ ಮುಂದುವರಿದಿರುವುದಕ್ಕೆ ಶ್ರೀ ಕುರುಂಜಿಯವರ ಕೊಡುಗೆ ಇನ್ನೊಂದು ಕಾರಣ. ಸುಳ್ಯ ಪರಿಸರದ ಈ ಬಗೆಯ ಪ್ರಗತಿಯನ್ನು ದ.ಕ ಜಿಲ್ಲೆಯ ಇತರ ಪರಿಸರದ ಗೌಡ ಜನಾಂಗದಲ್ಲಿ ಕಾಣಲು ಸಾಧ್ಯವಿಲ್ಲ. ಸುಳ್ಯದ ಅಭಿವೃದ್ಧಿಯಲ್ಲಿ ಶ್ರೀ ಕುರುಂಜಿಯವರ ಪಾತ್ರ ಮಹತ್ತರವಾದುದು ಎನ್ನುವ ವಿಚಾರವನ್ನು ಈ ಪರಿಸರದ ಜನ ಮುಕ್ತವಾಗಿ ಮತ್ತು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾರೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ಗೌಡರು ಆರ್ಥಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಮುಂದುವರಿಯುವುದರ ಕುರಿತಾಗಿಯೂ ಶ್ರೀ ಕುರುಂಜಿಯವರು ಗಮನಿಸುತ್ತಾರೆ. ಮುಖ್ಯವಾಗಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಹಿನ್ನೆಲೆಯಲ್ಲಿ ಬೇಡಿಕೆ, ಕೋರಿಕೆಗಳು ಬಂದಾಗಲೆಲ್ಲಾ ಸಲಹೆಗಳನ್ನು ಹಾಗೆಯೇ ಆರ್ಥಿಕವಾದ ಸಹಕಾರವನ್ನು ಕೊಟ್ಟಿದ್ದೇವೆ. ಸಮುದಾಯ, ವರ್ಗಗಳ ನಿರ್ಮಾಣ, ಶಾಲಾ ಕೊಠಡಿಗಳ ರಚನೆ, ರಂಗ ಮಂದಿರಗಳ ಸ್ಥಾಪನೆಗೆ ದ.ಕ ಜಿಲ್ಲೆಯ ಎಲ್ಲಾ ಭಾಗಗಳಿಗೂ ನೀಡಿದ್ದೇನೆ. ನಮ್ಮ ಜನಾಂಗ ಮಾತ್ರವಲ್ಲ: ಇಡೀ ಸಮುದಾಯವೇ ಮುಂದುವರಿಯುವುದು ಬಹಳ ಮುಖ್ಯವೆನ್ನುವುದು ನನ್ನ ಭಾವನೆ ಎಂದು ಶ್ರೀ ಕುರುಂಜಿಯವರು ಬಹುಜನ ಹಿತವನ್ನು ಬಯಸುತ್ತಾರೆ.

ಪ್ರಜಾಪ್ರಭುತ್ವವಾದಿ ವ್ಯವಸ್ಥೆಯಲ್ಲಿ ಜಾತಿ ಸಂಘಟನೆಗಳು ಎಷ್ಟರಮಟ್ಟಿಗೆ ಪೂರಕ ಮತ್ತು ಪ್ರಸ್ತುತ. ಜಾತಿ ಸಂಘಟನೆಗಳು ನಿಜವಾದ ಅರ್ಥವನ್ನು ಕಳೆದು ಕೊಂಡು ಜಾತಿ ರಾಜಕೀಯಕ್ಕೆ ಕಾರಣವಾಗುತ್ತವೆ ಎನ್ನುವ ಪ್ರಜ್ಞಾವಂತರ ಆತಂಕದ ಕಡೆಗೆ ಶ್ರೀ ಕುರುಂಜಿಯವರ ಗಮನವನ್ನು ಸೆಳೆದರೆ ಅವರು ಬಹಳ ಸ್ಪಷ್ಟವಾದ ಮಾತುಗಳಲ್ಲಿ ತಮ್ಮ ಅಭಿಪ್ರಾಯಗಳನ್ನು ನಮ್ಮ ಮುಂದಿಡುತ್ತಾರೆ. ನನಗೆ ರಾಜಕೀಯ ಕುರಿತಾದ ಯಾವ ಒಲವೂ ಇಲ್ಲ. ರಾಜಕೀಯದಲ್ಲಿ ತೊಡಗುವಷ್ಟು ಸಮಯ ನನ್ನಲ್ಲಿಲ್ಲ. ನನಗೆ ಯಾವ ರಾಜಕೀಯ ಪಕ್ಷದೊಂದಿಗೂ ಪರ-ವಿರೋಧದ ಸಂಬಂಧಗಳಿಲ್ಲ. ಆಡಳಿತಾತ್ಮಕವಾಗಿ ಒಂದು ಬಗೆಯ ಸಮನ್ವಯ ದೃಷ್ಟಿ ಮುಖ್ಯವೆಂದು ಅನ್ನಿಸಿದೆ. ಆದರೆ ರಾಜಕೀಯ ನಾಯಕರ ಸಮಾಜಮುಖಿ ಯೋಜನೆಗಳಲ್ಲಿ ಸಮಾಜದ ಹಿತ ದೃಷ್ಟಿಯಿಂದ ಹೊಂದಾಣಿಕೆ ಅನಿವಾರ್ಯ. ಅಷ್ಟರಮಟ್ಟಿಗೆ ಮಾತ್ರ ನನ್ನ ರಾಜಕೀಯ ಒಲವು.

ಜಾತಿ ಸಂಘಟನೆಗಳು ದೇಶದ ಪ್ರಗತಿಗೆ ಪೂರಕವಾಗುವುದಾದರೆ ಅದರಿಂದ ಏನು ನಷ್ಟವಿಲ್ಲ.

ವ್ಯಕ್ತಿ - ಜನಾಂಗಗಳ ಪ್ರಗತಿಯ ದೃಷ್ಟಿಯಿಂದಾಗಿ ಜಾತಿ ಸಂಘಟನೆಗಳು ಮುಖ್ಯವಾಗುತ್ತವೆ. ಅಲ್ಲದೆ ನಮ್ಮ ಬಹುಮುಖಿ ಸಾಂಸ್ಕೃತಿಕ ವೈವಿಧ್ಯತೆಗಳನ್ನು, ಪರಂಪರೆಯ ದೃಷ್ಟಿಯಿಂದ ರಕ್ಷಿಸಿಕೊಂಡು ಬರುವುದಕ್ಕೂ ಇದು ಪೂರಕವಾಗುತ್ತವೆ. ಜಾತಿ ನೆಲೆಯಲ್ಲಿ ಇರುವ ಅನೇಕ ಮೂಢನಂಬಿಕೆಗಳನ್ನು, ಅಂಧಶ್ರದ್ಧೆಗಳನ್ನು, ಪ್ರಗತಿ ವಿರೋಧಿಯಾದ ಸಂಗತಿಗಳನ್ನು ಸಾಂಘಿಕವಾಗಿ ಉಚ್ಚಾಟಿಸಲು ಜಾತಿ ಸಂಘಟನೆಗಳು ಮುಖ್ಯವಾಗಬೇಕು, ಎನ್ನುವ ಸಲಹೆಯನ್ನು ಶ್ರೀ ಕುರುಂಜಿಯವರು ಕೊಡುತ್ತಾರೆ.

ಶ್ರೀ ಕುರುಂಜಿಯವರು ಸಾಹಿತ್ಯ ಪ್ರೇಮಿ ಕಲಾ ಪೋಷಕರು. ಈ ಪ್ರೀತಿಗೆ ಕಾರಣವಾದ ಸಾಂಸ್ಕೃತಿಕ ಹಿನ್ನಲೆಯನ್ನು ತನ್ಮಯತೆಯಿಂದ ವಿವರಿಸುತ್ತಾರೆ. 'ಲೋಕೋ ಭಿನ್ನರುಚಿಃ' ಎಂಬಂತೆ ಒಬ್ಬೊಬ್ಬರಿಗೆ ಒಂದೊಂದು ಅಭಿರುಚಿ. ನನಗೆ ಕಲೆಗಳಲ್ಲಿ ಅಭಿರುಚಿ. ಯಾಕೆಂದರೆ ದುಡಿದು ಬಂದು ಆಯಾಸಗೊಂಡ ಮೈಮನಗಳಿಗೆ ಆನಂದವೂ ಮುಖ್ಯ. ಇದನ್ನು ಕಲಾಪ್ರಕಾರಗಳು ನೀಡುತ್ತವೆ. ನನ್ನ ತಂದೆಯವರಾದ ದಿವಂಗತ ಮಾಲಿಂಗ ಗೌಡರು ವೃತ್ತಿಯಲ್ಲಿ ಶಾಲಾ ಮಾಸ್ತರರಾಗಿದ್ದರು. ಅವರು ಪಾಠ ಪ್ರವಚನಗಳನ್ನು ಮಾಡುವುದರ ಜೊತೆಗೆ ಪ್ರವೃತ್ತಿಯಲ್ಲಿ ಯಕ್ಷಗಾನ ಕಲಾವಿದರು ಕೂಡ ಆಗಿದ್ದರು. ಅವರು ಭಾಗವತಿಕೆಯಲ್ಲಿ ಬಹುಜನ ಪ್ರಿಯರಾಗಿದ್ದರು. ಅವರು ಪ್ರಾತಃ ಕಾಲದಲ್ಲಿ ಹಾಡುತ್ತಿದ್ದ 'ಮೋಹನ ರಾಗ' ಇವತ್ತು ಕೂಡ ನನ್ನ ಕಿವಿಯಲ್ಲಿ ಗುಂಯ್ಗುಟ್ಟುತ್ತಿದೆ. ಅವರು ಭಾಗವತಿಕೆಯ ಜೊತೆಗೆ ಮೃದಂಗ, ಘಂಟಾಶೀಲ, ಮದನಶೀಲಗಳನ್ನು ನುಡಿಸುತ್ತಿದ್ದರು. ಒಂದಷ್ಟು ಹುಡುಗರನ್ನು ಸೇರಿಸಿಕೊಂಡು, 'ಯಕ್ಷಗಾನ ತಾಳ ಮದ್ದಳೆ' ಕೂಟವನ್ನು ನಡೆಸುತ್ತಿದ್ದರು. ಆಗ ನಾನು ಅರ್ಥ ಮಾತಾಡುತ್ತಿದ್ದೆ. ಈ ಹಿನ್ನೆಲೆ ಇವತ್ತೂ ಸಹ ರಾತ್ರಿ ಹೊತ್ತುಕೂತು ಯಕ್ಷಗಾನ ಪ್ರದರ್ಶನಗಳನ್ನು ನೋಡುವಂತೆ ಮಾಡುತ್ತಿದೆ.

ಸಾಹಿತ್ಯವೂ ಅಷ್ಟೆ. ಓದುವ ಹವ್ಯಾಸ. ಈಗೀಗ ಕಡಿಮೆ. ಸಮಯವಿಲ್ಲ. ಆದರೆ ಸಾಹಿತ್ಯ ಸಮಾರಂಭಗಳಲ್ಲಿ ವಿದ್ವಾಂಸರ ಮಾತುಗಳನ್ನು ಆಲಿಸುವುದು ಬಹಳ ಇಷ್ಟದ ವಿಚಾರ. ಬಲ್ಲವರು ಹೇಳುವಂತೆ 'ಹತ್ತು ಪುಸ್ತಕ ಓದುವುದಕ್ಕಿಂತ ಒಂದು ಒಳ್ಳೆಯ ಭಾಷಣ ಕೇಳುವುದು ಒಳ್ಳೆಯದು ಅಂತ' ಹಾಗೆ. ನೋಡಿ ನಾವು ದ.ಕ ಜಿಲ್ಲಾ ೭ನೇ ಕನ್ನಡ ಸಾಹಿತ್ಯ ಸಮ್ಮೇಳನವನ್ನು ೧೯೯೯ರಲ್ಲಿ ನಮ್ಮಲ್ಲಿ ನಡೆಸಲು ಈ ಹಿನ್ನಲೆಯು ಒಂದು ಕಾರಣವಾಗಿತ್ತು. ನಮ್ಮ ಕ್ಯಾಂಪಸ್‌ನಲ್ಲಿ ಸಾಹಿತ್ಯ ಚರ್ಚೆ ನಡೆಸುವುದು ನಮಗೆ ಹೆಮ್ಮೆ ಮತ್ತು ಸಂತೋಷದ ವಿಷಯವಾಗಿತ್ತು. ನಮ್ಮ ಸಂಸ್ಥೆಗಳಲ್ಲೂ ಅನೇಕ ಜನ ಬರಹಗಾರರಿದ್ದಾರೆ. ಯಾವುದೇ ಸಾಹಿತ್ಯ ಕೃತಿಗಳ ಬಿಡುಗಡೆ ಸಂದರ್ಭದಲ್ಲೂ ಪ್ರೋತ್ಸಾಹ ರೂಪದಲ್ಲಿ ಹಣಕೊಟ್ಟು ಒಂದಷ್ಟು ಪುಸ್ತಕಗಳನ್ನು ಪಡೆದುಕೊಳ್ಳುವ ಪರಿಪಾಠ ನನ್ನದು. ಸಾಹಿತ್ಯವೆನ್ನುವುದು ಬದುಕನ್ನು ಕುರಿತದ್ದಾಗಿರುವುದರಿಂದ ಅದು ಬಹಳ ಮುಖ್ಯ. ಅದಕ್ಕೆ ಪ್ರೋತ್ಸಾಹ ಕೊಡುವುದು ನಮ್ಮೆಲ್ಲರ ಕರ್ತವ್ಯವೆಂದು ಶ್ರೀ ಕುರುಂಜಿಯವರು ಸಾಹಿತ್ಯದ ಕುರಿತಾದ ಪ್ರೀತಿಯ ಬಗ್ಗೆ ಅಭಿಪ್ರಾಯಪಡುತ್ತಾರೆ. ಸಾಹಿತ್ಯದ ಕುರಿತಾದ ಸಭೆ - ಗೋಷ್ಠಿಗಳಿಗೆ ಪ್ರೋತ್ಸಾಹ ರೂಪವಾಗಿ ಧನಸಹಾಯವನ್ನು ಮಾಡುತ್ತಾರೆ.

ಇಂದು ಶಿಕ್ಷಣ ಸಂಸ್ಥೆಗಳ ಸಮಾರಂಭ, ವರ್ಧಂತಿಗಳಲ್ಲಿ 'ಫ್ಯಾಶನ್ ಶೋ', ಸಾಹಿತ್ಯದ ಗಂಧಗಾಳಿಯಿಲ್ಲದ ಸಿನಿಮಾ ಹಾಡುಗಳಿಗೆ ನರ್ತಿಸುವ ಸಂಪ್ರದಾಯ ರೂಪುಗೊಳ್ಳುತ್ತಿದೆ. ಇದನ್ನು ಯುವಕರು ಸಂಸ್ಕೃತಿಯೆಂದು ಭಾವಿಸುವ ಅಪಾಯವಿದೆ. ಇದು ಸಲ್ಲ. ಸದಾಭಿರುಚಿಯನ್ನುಂಟು ಮಾಡುವ ಮಾನವೀಯ ಅಂಶಗಳಾದ, ಪ್ರೀತಿ, ದಯೆ, ಶಾಂತಿ, ಸಹಬಾಳ್ವೆಗಳನ್ನು ರೂಪಿಸಿಕೊಳ್ಳಲು ಪ್ರೇರಣೆ ಯಾಗಬಲ್ಲ ಕಲಾಪ್ರಕಾರಗಳು ಪ್ರದರ್ಶನಗೊಳ್ಳಬೇಕು. ಇವತ್ತು ಯಕ್ಷಗಾನದಂತ ಕಲೆಗಳು ಗೌಣ ವಾಗುತ್ತಿವೆ. ಇಡೀ ರಾತ್ರಿ ಬಯಲಾಟ ನೋಡುವಷ್ಟು ಇಂದು ಸಮಯ ಯಾರಿಗೂ ಇಲ್ಲ. ನಿಜ ಹಾಗೆಂದು ಅದನ್ನು ಮರೆಯುವುದು ಸರಿಯಲ್ಲ. ಬದಲಾದ ಕಾಲಗತಿಗೆ ಕಲೆಯು ಗತಿಯನ್ನು ಹೊಂದಿಸಿಕೊಳ್ಳಬೇಕು. ಯಕ್ಷಗಾನದಲ್ಲಿ ಬರುವ ಸಮರ್ಥ ಪಾತ್ರ - ಅರ್ಥಧಾರಿಗಳ ಸಾಂದರ್ಭಿಕ ಸಂವಾದಗಳು ಎಂತಹ ತಾರ್ಕಿಕ ಶಕ್ತಿಯನ್ನು ನೀಡಬಲ್ಲವು. ಇಂತಹ ಕಲಾಪ್ರಕಾರಗಳನ್ನು ನಾವು ಪೋಷಿಸಿಕೊಳ್ಳಬೇಕು. ಈ ಮೂಲಕ ನಮ್ಮ ಸಾಂಸ್ಕೃತಿಕ ನೆಲೆಗಳನ್ನು ಕಾಯ್ದುಕೊಳ್ಳಬೇಕು. ಭೋಗ ಸಂಸ್ಕೃತಿಯ ಸರಕುಗಳನ್ನು ನಿರಾಕರಿಸಬೇಕು ಎನ್ನುವ ಶ್ರೀ ಕುರುಂಜಿಯವರು ಸಂಸ್ಕೃತಿ ಚಿಂತಕರಾಗಿ ಕಂಡುಬರುತ್ತಾರೆ.

ನನ್ನ ವ್ಯಕ್ತಿತ್ವದ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳೆಂದರೆ ಮಹಾತ್ಮ ಗಾಂಧಿ, ಜವಾಹರಲಾಲ ನೆಹರು, ಮಣಿಪಾಲದ ಟಿ.ಎಂ.ಎ. ಪೈ. ನಾನು ಅಳವಡಿಸಿಕೊಂಡಿರುವ ಸತ್ಯ, ಪ್ರೇಮ, ಧರ್ಮನಿರತೆ, ಮಾತು, ಶಾಂತಿ, ತಾಳ್ಮೆ, ಧೈರ್ಯ ಈ ಅಷ್ಟಗುಣಗಳು ಮತ್ತು ಪರಿಶ್ರಮ ಏಕಾಗ್ರತೆ ಪ್ರಾಮಾಣಿಕತೆ ಸಮಯ ಪ್ರಜ್ಞೆ ಮತ್ತು ತ್ಯಾಗ -ಸೇವೆ. ಈ ಪಂಚಸೂತ್ರಗಳು ಗಾಂಧಿ ಪ್ರೇರಿತವಾದವುಗಳು. ಆಧುನಿಕ ಭಾರತ ಕಟ್ಟುವ ನೆಹರು ಚಿಂತನೆ ಆಧುನಿಕ ಸುಳ್ಯ ಕಟ್ಟುವ ನನ್ನ ಕಲ್ಪನೆಗೆ ಮಾದರಿ. ಈ ಅರ್ಥದಲ್ಲಿ ನಮ್ಮ ಮಾತೃಸಂಸ್ಥೆಗೆ ಅದರ ಸ್ಮರಣಾರ್ಥವಾಗಿ ನೆಹರು ಮೆಮೋರಿಯಲ್ ಕಾಲೇಜು ಎಂದು ನಾಮಧೇಯ ಮಾಡಿದ್ದೇವೆ. ಶಿಕ್ಷಣ ಸಂಸ್ಥೆಗಳನ್ನು ಕಟ್ಟುವಲ್ಲಿ, ಸುಳ್ಯವನ್ನು ಮಿನಿ ಭಾರತ ಮಾಡುವಲ್ಲಿ ಮಣಿಪಾಲದ ಶಿಲ್ಪಿ ಟಿ.ಎಂ.ಎ. ಪೈ ಪ್ರೇರಣೆಯಾಗಿದ್ದಾರೆ ಎನ್ನುವಲ್ಲಿ ತನಗಾದ ಪ್ರೇರಣೆಯ ಮೂಲಗಳನ್ನು ಸಕಾರಾತ್ಮಕವಾಗಿ ಉಲ್ಲೇಖಿಸುತ್ತಾರೆ.

ನನ್ನ ಜೀವನದಲ್ಲಿ ನೋವಿನ ಪ್ರಸಂಗಗಳಿಲ್ಲ. ಯೋಜನಾಬದ್ಧವಾಗಿ ಕಾರ್ಯಗಳನ್ನು ಮಾಡಬೇಕು. ಕಷ್ಟಗಳು ಎದುರಾಗುತ್ತವೆ. ಅವು ಸೋಲುಗಳಲ್ಲ. ಧೈರ್ಯದಿಂದ ಮುಂದುವರಿಸುತ್ತೇವೆ. ಯಶಸ್ಸಾಗಿದೆ. ಮನುಷ್ಯನಲ್ಲಿ ದುಶ್ಚಟಗಳಿರಬಾರದು. ಮನೆಯ ನೆಮ್ಮದಿ ಸಮಾಜ ಮುಖದಲ್ಲಿ ಕ್ರಿಯಾತತ್ಪರತೆಯನ್ನು ತಂದು ಕೊಡುವ ಮೂಲ. ಪ್ರತಿಯೊಬ್ಬರ ದಾಂಪತ್ಯ ಜೀವನವೂ ಚಿರಂತಿರಬೇಕು. ಬಿರಂತಿರಬಾರದು ಎನ್ನುವ ತತ್ವದಲ್ಲಿ ತಮ್ಮ ಶ್ರೀಮತಿಯರಾದ ಜಾನಕಿ ವೆಂಕಟ್ರಮಣ ಗೌಡರ ಸಹಕಾರ, ಸ್ಫೂರ್ತಿಯ ನೆಲೆಯನ್ನು ಗುರುತಿಸಿ ಕೊಂಡಿದ್ದಾರೆ.

ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಶನ್ (ರಿ) ಸುಳ್ಯಕ್ಕೆ ಮೆಡಿಕಲ್ ಕಾಲೇಜನ್ನು ಹೊಂದಿಸಿ ಕೊಳ್ಳುವುದು ನನ್ನ ಜೀವನದ ದೊಡ್ಡಗುರಿ ಎಂದುಕೊಂಡಿದ್ದ ಶ್ರೀ ಕುರುಂಜಿಯವರ 'ಮರಳಿ ಯತ್ನವ ಮಾಡು' ಎಂಬ ಹದಿನೇಳು ವರ್ಷಗಳ ದೀರ್ಘ ಹೋರಾಟದ ಫಲಕ್ಕೆ ಈ ವರ್ಷ ಇದು

ಮಣಿಯಲೇಬೇಕಾಯಿತು. ಈಗ ನನಗೆ ಸಮಾಧಾನವಾಗಿದೆ ಎನ್ನುವ ಶ್ರೀ ಕುರುಂಜಿಯವರನ್ನು ಮುಂದಿನ ಗುರಿಯೇನೆಂದು ಪ್ರಶ್ನಿಸಿದದರೆ ಸಾಧನೆಗೆ ಅಂತ್ಯವಿಲ್ಲ. ಕಾಲವೇ ಅದನ್ನು ನಿರ್ಧರಿಸುತ್ತದೆ ಎನ್ನುವ ಕ್ರಿಯಾ ತತ್ಪರತೆಯ ದಾರ್ಶನಿಕ ನಿಲುವನ್ನು ವ್ಯಕ್ತ ಮಾಡುತ್ತಾರೆ. ನನಗೆ ವೈದ್ಯಕೀಯದ ಕುರಿತಾಗಿ ಮೊದಲಿಂದಲೂ ಒಲವು. ಆ ಕಾರಣಕ್ಕಾಗಿಯೇ ನನ್ನ ಇಬ್ಬರು ಗಂಡು ಮಕ್ಕಳನ್ನು ವೈದ್ಯಕೀಯ ಪದವೀಧರರಾಗುವಂತೆ ಪ್ರೇರೇಪಿಸಿದೆ ಹಾಗೆಯೆ ಡಾಕ್ಟರ್ ಅಳಿಯನನ್ನು ಇಷ್ಟಪಟ್ಟೆ. ಈಗ ಮೆಡಿಕಲ್ ಕಾಲೇಜನ್ನು ಸ್ಥಾಪಿಸಿದೆ. ಇದರ ಸ್ಥಾಪನೆಯಲ್ಲಿ ಎಲ್ಲರದ್ದು ಮಹತ್ತರ ಪಾತ್ರವಿದೆ. ಈಗ ನನಗೆ ಸಂತೃಪ್ತಿಯಿದೆಯೆಂದು ಶ್ರೀ ಕುರುಂಜಿಯವರು ತೃಪ್ತಿಯ ನಿಟ್ಟುಸಿರು ಬಿಡುತ್ತಾರೆ.

ಭಕ್ತಿ ಭಂಡಾರಿ ಬಸವಣ್ಣನವರ 'ಕಾಯಕವೇ ಕೈಲಾಸ'ವೆನ್ನುವ ತತ್ವಕ್ಕೆ ಅಂಟಿಕೊಂಡು ದುಡಿಯುವ, ದುಡಿಮೆಯಲ್ಲಿ ದೇವರನ್ನು ಕಾಣುವ ಶ್ರೀ ಕುರುಂಜಿಯವರು ಈಗ ಸುಳ್ಯದ ಅಶಕ್ತ ಜನರ ಕೊರತೆಯನ್ನು ನೀಗುವ ನಿಟ್ಟಿನಲ್ಲಿ ಸುಳ್ಯ ಚೆನ್ನಕೇಶವ ದೇವಸ್ಥಾನದ ಜೀರ್ಣೋದ್ಧಾರ ಕಾರ್ಯದಲ್ಲಿ ತೊಡಗಿದ್ದಾರೆ. ಸುಮಾರು ಒಂದು ಕೋಟಿ ರೂಪಾಯಿಗಿಂತಲೂ ಹೆಚ್ಚಿನ ಧನಸಹಾಯವನ್ನು ಮಾಡುತ್ತಿದ್ದಾರೆ. ಶಿಕ್ಷಣ ಸಂಸ್ಥೆಗಳನ್ನು ಕಟ್ಟುವ ಕಾರ್ಯ ಒಂದು ಹಂತ ಮುಟ್ಟಿದೆ. ಇನ್ನು ಅದನ್ನು ಅಭಿವೃದ್ಧಿಪಡಿಸುವ ಕಾರ್ಯ. ಹಾಗಾಗಿ ಈಗ ಹಿಂದಿನ ಒತ್ತಡಗಳಿಲ್ಲ. ಈಗ ದೈವಿಕತೆಯ ಕಡೆಗೆ ಹೆಚ್ಚು ಗಮನ ಕೊಡುವ ಸಂದರ್ಭವೂ ಬಂದಿದೆ. ಇದು ನಂಬಿಕೆಯಲ್ಲಾದ ಪರಿವರ್ತನೆಯ ಪ್ರಶ್ನೆಯಲ್ಲ. ಸಾಮಾಜಿಕ ಅವಶ್ಯಕತೆಯ ದೃಷ್ಟಿ ಎನ್ನುವುದು ಶ್ರೀ ಕುರುಂಜಿಯವ ಅಭಿಪ್ರಾಯ.

ಮನುಷ್ಯ ಜೀವನದ ಎಲ್ಲಾ ರಂಗಗಳಲ್ಲಿಯು ಶ್ರೀ ಕುರುಂಜಿ ವೆಂಕಟ್ರಮಣ ಗೌಡರು ತಮ್ಮ ಕರ್ತೃತ್ವ ಶಕ್ತಿಯನ್ನು ತೋರಿಸಿಕೊಟ್ಟಿದ್ದಾರೆ. ಅವರ ಯೋಚನೆ ಮತ್ತು ಯೋಜನೆಗಳು ರೂಪುಗೊಂಡದ್ದು ಈ ಮಣ್ಣಿಗೆ ಅಂಟಿಕೊಂಡಂತೆ. ಒಕ್ಕಲು ಮನೆತನದಿಂದ ಬಂದಿರುವ ಶ್ರೀ ಗೌಡರಲ್ಲಿ ಕಾಣುವ ದಾರ್ಶನಿಕತೆ ಪ್ರಗತಿಪರ ಬದುಕಿಗೆ ಪೂರಕವಾಗಿದೆ. ಇದು ಯಾವುದೇ ಜನಾಂಗದ ಅಭಿವೃದ್ಧಿಗೂ ಮಾದರಿ, ಮಾರ್ಗದರ್ಶಕವಾಗಬಹುದಾದ ವ್ಯಾಪ್ತಿ ಮತ್ತು ಅನನ್ಯತೆ ಉಳ್ಳದ್ದು.



ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಡಿ. ದೇವರಾಜ ಅರಸು ಸುಳ್ಯಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಮುಖ್ಯಮಂತ್ರಿಗಳೊಂದಿಗೆ ಶ್ರೀ ಕುರುಂಜಿಯವರು.



ತನ್ನ ಸ್ಫೂರ್ತಿಯ ಸೆಲೆ ಸಹಧರ್ಮಿಣಿ ಶ್ರೀಮತಿ ಜಾನಕಿಯವರೊಂದಿಗೆ ತಾನು ಬೆಳೆದ ಅಡಿಕೆ ತೋಟದಲ್ಲಿ ಶ್ರೀ ಕುರುಂಜಿಯವರು.



ಕುರುಂಜಿಬಾಗ್‌ನಲ್ಲಿ ನಡೆದ ದಕ್ಷಿಣ ಕನ್ನಡ ಜಿಲ್ಲಾ ಏಳನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ
ಗೌರವಾಧ್ಯಕ್ಷರಾಗಿ ಶ್ರೀ ಕುರುಂಜಿಯವರು.



ರಾಜೀವ ಗಾಂಧಿ ರಾಷ್ಟ್ರೀಯ ಏಕತಾ ಪ್ರಶಸ್ತಿ ಪಡೆದ ಸಂದರ್ಭದಲ್ಲಿ
ಶ್ರೀ ಕುರುಂಜಿಯವರು, ಲೋಕಸಭಾ ಅಧ್ಯಕ್ಷರಾದ ಶ್ರೀ ಶಿವರಾಜ್ ಪಾಟೀಲ್‌ರೊಂದಿಗೆ (೧೯೯೩).



ವೈದ್ಯಕೀಯ ಮಹಾವಿದ್ಯಾಲಯದ ಶಂಕು ಸ್ಥಾಪನೆಯ ಸಂದರ್ಭದಲ್ಲಿ ಧಾರ್ಮಿಕ ಮತ್ತು ರಾಜಕೀಯ ನಾಯಕರೊಂದಿಗೆ ಶ್ರೀ ಕುರುಂಜಿಯವರು.



ವಿದ್ಯಾನಗರ, ಕುರುಂಜಿಬಾಗ್



ಕೆ.ವಿ.ಜಿ. ವೈದ್ಯಕೀಯ ಮಹಾವಿದ್ಯಾಲಯ ಮತ್ತು ಆಸ್ಪತ್ರೆ

# ಗೌಡರ ಏಳುಬೀಳು - ಚಾರಿತ್ರಿಕ ಅವಲೋಕನ

ಎನ್.ಎಸ್. ದೇವಿಪ್ರಸಾದ್

ಒಂದೂವರೆ ಶತಮಾನದ ಹಿಂದೆ ಗೌಡ ಜನಾಂಗದವರು ಹೇಗಿದ್ದರು? ಅಮರ ಸುಳ್ಯ ದಂಗೆಯ ನಂತರದ ನೂರಹತ್ತು ವರ್ಷಗಳಲ್ಲಿ ಬ್ರಿಟಿಷ್ ವಿರೋಧಿಗಳೆಂದು ಗುರುತಿಸಿಕೊಂಡ ನಂತರ ಅವರು ಎಷ್ಟು ಅವನತಿಯನ್ನು ಕಂಡರು. ಮುಂದೆ ಸ್ವಾತಂತ್ರ್ಯ ಸಿಕ್ಕಿದ ನಂತರದ ೫೦ ವರ್ಷಗಳಲ್ಲಿ ಗೌಡ ಜನಾಂಗ ಸಾಧಿಸಿದ ಮುನ್ನಡೆ ಇವುಗಳನ್ನು ವಿಶ್ಲೇಷಿಸುವುದು ಅಗತ್ಯವಾಗಿದೆ. ಇದಕ್ಕಾಗಿ ಕೊಡಗಿನ ಮತ್ತು ಅಮರ ಸುಳ್ಯ ದಂಗೆಯ ಚರಿತ್ರೆಯನ್ನು ತಿಳಿದುಕೊಳ್ಳಬೇಕಾಗುತ್ತದೆ.

## ಚರಿತ್ರೆಗೆ ಸೇರಿಹೋದ ಘಟನೆಗಳು ಸಂಭವಿಸಿದ ಪಕ್ಷಿನೋಟ

ಮಾನವ ಜೀವನಕ್ಕೆ ದುರ್ಗಮವಾದ ಅಂದಿನ ಕೊಡಗಿನ ಬಗ್ಗೆ ಹೈದರಾಲಿಗೆ ಆಸಕ್ತಿ ಉಂಟಾಯಿತು. ಮಲಬಾರಿಗೆ ಹೋಗಲು ಅತ್ಯಂತ ಹತ್ತಿರದ ಮತ್ತು ಅನುಕೂಲಕರವಾದ ದಾರಿ ಇದಾಗಿರುವುದೇ ಈ ಆಸಕ್ತಿಗೆ ಮೂಲಕಾರಣ. ಮೊದಲಾದರೆ ಸೇನೆಯು ಬಿದನೂರು ಉತ್ತರಕನ್ನಡಗಳ ಮೂಲಕವಾಗಿಯೋ ಅಥವಾ ಕೊಯಮತ್ತೂರು ಪಾಲ್‌ಘಾಟ್‌ಗಳ ಮೂಲಕವಾಗಿಯೋ ಮಲಬಾರಿಗೆ ಹೋಗಬೇಕಾಗಿತ್ತು. ಮೊದಲು ಕೊಡಗನ್ನು ಗೆಲ್ಲಬೇಕೆಂದು ಹೈದರ್ ನಿರ್ಧರಿಸಲು ಇದೇ ಕಾರಣ.[1] ಆಗ ಕೊಡಗಿನ ವಿಸ್ತೀರ್ಣ ಅಂದಾಜು ೬೬೨ ಚದರ ಮೈಲು ಜನ ಸಂಖ್ಯೆ ಹತ್ತು ಸಾವಿರ ಮೀರಿರಲಾರದು.

## ಚರಿತ್ರೆಕಾರರ ಪ್ರಕಾರ ಆಗಿನ ಕೊಡಗಿನ ವರ್ಣನೆ

‘ಈ ಆಶ್ಚರ್ಯಕರವಾದ ಕಾಡು ಸೀಮೆಯನ್ನು ಕುರಿತು ನಾವು ಏನನ್ನು ಹೇಳಬಲ್ಲೆ. ಅದರ ಹೆಸರು ಹೇಳುವಾಗಲೇ ಲೇಖನಿಯು ನಡುಗುತ್ತದೆ. ಅದರ ಬಿದಿರಮೆಳೆಗಳು ಅಬಿಸೀನಿಯದವನ ಕುರಿ ಉಣ್ಣೆ ಕೂದಲಿನ ಗುಂಗುರುಗಳಂತೆ ನುಗ್ಗಲ ಸಾಧ್ಯವಾಗಿವೆ. ದೊಡ್ಡ ದಾರಿಗಳೂ, ಸಣ್ಣ ದಾರಿಗಳೂ ಆಕಾಶದಲ್ಲಿ ನಕ್ಷತ್ರಗಳ ಮಧ್ಯೆ ನುಸುಳಿದಂತಿವೆ. ಈ ದೇಶದ ಗುಡ್ಡಗಳನ್ನೂ ಕಣಿವೆಗಳನ್ನೂ ಹಾದು ಹೋಗುವುದಕ್ಕೆ ಆಗುವುದೇ ಇಲ್ಲ. ತಗ್ಗು ಭೂಮಿಯಲ್ಲಿ ಭತ್ತದ ಬೆಳೆಯು ಎದೆಯಷ್ಟು ಎತ್ತರಕ್ಕೆ ನಿಂತಿರುತ್ತದೆ. ಸೂರ್ಯನು ಸ್ವತಃ ಶಾಖವುಳ್ಳವನಾದರೂ ಇಲ್ಲಿ ಚಳಿಗೆ ಹೆದರಿ ಪ್ರತಿದಿನವೂ ಮೋಡಗಳಿಂದ ತನ್ನನ್ನು ಮುಚ್ಚಿಕೊಂಡು ಇಲ್ಲಿಂದ ಅವಸರವಸರವಾಗಿ ಹೋಗಿಬಿಡುತ್ತಾನೆ. ಪ್ರತಿ

ರಾತ್ರಿಯು ಚುರುಕಾಗಿ ಪ್ರಯಾಣ ಮಾಡುವ ಚಂದಿರನು ಆಕಾಶದ ನೀಲಿ ಬಣ್ಣದ ಮುಸುಕಿನಲ್ಲಿ ತನ್ನ ಮುಖವನ್ನು ಮುಚ್ಚಿಕೊಳ್ಳುತ್ತಾನೆ. ಬೇಸಿಗೆಯಲ್ಲಿ ಹೀಗಾದರೆ ಮಳೆಗಾಲದಲ್ಲಿ ದೇವರೇ ನಮ್ಮನ್ನು ಕಾಪಾಡಬೇಕು. ಮಳೆಗಾಲದ ಆರು ತಿಂಗಳುಗಳಲ್ಲಿ ಈ ದೇಶದಲ್ಲೆಲ್ಲಾ ಮಳೆಯು ಸುರಿದು ದುಃಖದಲ್ಲಿ ಇರುವ ಕಣ್ಣುಗಳಲ್ಲಿ ನೀರು ತುಂಬಿಕೊಂಡಿರುವಂತೆ ಭೂಮಿಯೆಲ್ಲಾ ನೀರಿನಿಂದ ತುಂಬಿಕೊಂಡಿರುತ್ತದೆ. ಸಾಯಂಕಾಲದಿಂದ ತೊಡಗಿ ಸೂರ್ಯೋದಯವಾಗಿ ಎರಡು ಗಂಟೆಗಳವರೆಗೆ ಹಿಮವು ಗುಡ್ಡಗಳನ್ನೂ, ಕಣಿವೆಗಳನ್ನೂ ಮುಚ್ಚಿಕೊಂಡಿರುತ್ತದೆ. ಅನೇಕ ಎತ್ತರವಾದ ದೃಢಕಾಯರಾದ ಚಟುವಟಿಕೆಯಿಂದ ಕೂಡಿದ ತರುಣರು ಚಳಿಯಿಂದ ಅವರ ಅಂಗಾಂಗಗಳ ಬಿಸಿಯನ್ನು ಕಳೆದುಕೊಂಡು ರಾತ್ರಿ ಹೊತ್ತಿನಲ್ಲಿ ತಮ್ಮ ಸಣ್ಣ ಗುಡಿಸಲಿನಲ್ಲಿ ಕಾಲುಗಳು ಎದೆಗೆ ಮುಟ್ಟುವಂತೆ ಬಿಲ್ಲಿನ ಹಾಗೆ ಶರೀರವನ್ನು ಮುದುಡಿಕೊಂಡು ಮಲಗುತ್ತಾರೆ. ಆರು ತಿಂಗಳುಗಳವರೆಗೆ ರೈತರು ತಲೆಯಿಂದ ಕಾಲಿನವರೆಗೂ ಹಳೆ ಕಂಬಳಿ ಅಥವಾ ದಪ್ಪಬಟ್ಟೆಯಿಂದ ಮುಚ್ಚಿಕೊಂಡು ಒಂಭತ್ತು, ಹತ್ತು ಗಂಟೆಗಳ ಕೆಲಸಮಾಡುತ್ತಿರುತ್ತಾರೆ. ಈ ಸಮಯದಲ್ಲಿ ಮರದ ಎಲೆಗಳ ಮತ್ತು ಕೊಂಬೆಗಳಲ್ಲಿರುವ ಜಿಗಣೆಗಳು ಅವರನ್ನೂ, ಅವರ ದನ ಕರುಗಳನ್ನೂ ಕಚ್ಚಿ ತಮಗೆ ಬೇಕಾದಷ್ಟು ರಕ್ತವನ್ನು ಹೀರಿದ ಮೇಲೆಯೇ ಅವರ ಮೈಯನ್ನು ಬಿಡುತ್ತವೆ. ಇಲ್ಲಿನ ಚಳಿಯನ್ನು ವಿವರಿಸುವಾಗ ಬರೆಯುವುದಕ್ಕೆ ಮೊದಲೇ ಲೇಖನಿ ಹಿಡಿದ ಕೈ ಗಡ್ಡೆಗಟ್ಟಿದ ಸಮುದ್ರದೊಳಗೆ ಕೈಯನ್ನು ಮುಳುಗಿಸಿದರೆ ಹೇಗೋ ಹಾಗೇ ಮರಗಟ್ಟುತ್ತದೆ. ಈ ಹವೆಯನ್ನು ವಿವರಿಸುವ ನಾಲಗೆಯು ತುಟಿಗಳ ಒಳಗಡೆ ಮುಚ್ಚಿಕೊಂಡು ಇದ್ದರೂ, ಹೆದರಿಕೆಯಿಂದಲೂ, ಆಶ್ಚರ್ಯದಿಂದಲೂ, ಮಂಜುಗಡ್ಡೆಯ ಹಾಗೆ ಗಟ್ಟಿಯಾಗುತ್ತದೆ.’[೨]

ಇಂತಹ ಕೊಡಗಿಗೆ ಹೈದರಾಲಿಯು ಕೇರಳದ ವಯನಾಡಿಗೆ ಸೇರಿದ ಭೂಪ್ರದೇಶವನ್ನು ಸೇರಿಸುತ್ತಾನೆ. ಆಗ ಕೊಡಗಿನ ವಿಸ್ತೀರ್ಣವು ೧೫೮೪ ಚದರ ಮೈಲು ಆಗುತ್ತದೆ.

೧೮೦೭ರಲ್ಲಿ ದೊಡ್ಡವೀರರಾಜ ಬರೆಸಿದನೆನ್ನಲಾದ ರಾಜೇಂದ್ರನಾಮೆ ಒಂದು ಕಟ್ಟುಕಥೆಗಳ ಸಂಗ್ರಹ. ಇದರಲ್ಲಿ ೧೭೫ ವರ್ಷ ೨ ತಿಂಗಳು ೬ ದಿನಗಳ ಹಾಲೇರಿ ಮನೆತನದ ಚರಿತ್ರೆ ಬರೆಸಲ್ಪಟ್ಟಿದೆ. ಇದಕ್ಕೆ ಸಾಕ್ಷಿ ಆಧಾರಗಳಾಗಿ ಶಿಲಾಶಾಸನ, ತಾಮ್ರ ಪತ್ರ, ಕೋಟೆ, ಕೊತ್ತಲಗಳಾಗಲಿ ನೆರೆರಾಜ್ಯದ ಇತಿಹಾಸದಲ್ಲಿ ಸೇರಿಕೊಂಡ ದಾಖಲೆಗಳಾಗಲಿ, ಯಾವುದೂ ಇಲ್ಲ. ಇದೊಂದು ಕಪೋಲ ಕಲ್ಪಿತ ಬರವಣಿಗೆ ! , ರಾಬರ್ಟ್ ಅಬರ್‌ಕ್ರಾಂಬಿ ಇದನ್ನು ಇಂಗ್ಲೀಷ್‌ಗೆ ತರ್ಜುಮೆ ಮಾಡಿದನೆನ್ನಲಾಗಿದೆ. ಆದರೆ ಮೂಲ ಕೃತಿ ಇಂಗ್ಲೀಷ್‌ನಲ್ಲಿ ತಯಾರಾಗಿ ಅದು ಕನ್ನಡಕ್ಕೆ ಅನುವಾದಿಸಲ್ಪಟ್ಟಿರಬಹುದೆಂದು ಒಪ್ಪುವುದು ಹೆಚ್ಚು ಸಮಂಜಸವೆನ್ನಿಸುತ್ತದೆ. ಕೊಡಗಿಗೊಂದು ಚರಿತ್ರೆ ತಯಾರಿಸುವುದು ಬ್ರಿಟಿಷರಿಗೆ ಬೇಕಾಗಿತ್ತು. ಈ ಚರಿತ್ರೆ ಬರೆಸಲ್ಪಟ್ಟ ಕಾಲದಲ್ಲಿ, ದೊಡ್ಡವೀರರಾಜ ಪತ್ನಿ ವಿಯೋಗದಿಂದ ಮತಿಭ್ರಮಣೆ ಹೊಂದಿದ್ದನೆಂದು ಹೇಳಲಾಗಿದೆ. ಎರಡು ಶತಮಾನಗಳ ಚರಿತ್ರೆ ಸಂಗ್ರಹಿಸುವುದು ಆತನಿಗೆ ಇಂತಹ ಸ್ಥಿತಿಯಲ್ಲಿ ಸಾಧ್ಯವಿಲ್ಲದ ವಿಚಾರ. ಕೊಡಗನ್ನು ಕೇವಲ ಮೂರು ರಾಜರು ೧೭೮೦ರಿಂದ ೧೮೩೪ರ ತನಕ ಆಳಿದರು ಎಂಬುದನ್ನು ಮಾತ್ರ ಒಪ್ಪಿಕೊಳ್ಳಬಹುದು.

### ಒಸಗೆ

ಹೆಣ್ಣು ಪ್ರೌಢಾವಸ್ಥೆ ತಲುಪಿದಾಗ ಅಂದರೆ ಋತುಮತಿಯಾದಾಗ ರೂಢಿಯಲ್ಲಿರುವ ಸಂಪ್ರದಾಯವನ್ನು ಈ ಸಮುದಾಯದಲ್ಲಿ ಒಸಗೆ ಎಂದು ಕರೆಯಲಾಗುವುದು. ಈ ಸಂದರ್ಭದಲ್ಲಿ ಫಲವಂತಿಕೆಗೆ ಸಂಬಂಧಿಸಿದ ಅನೇಕ ಆಚರಣೆಗಳು ರೂಢಿಯಲ್ಲಿವೆ. ಹುಡುಗಿಗೆ ಋತುಸ್ರಾವವಾದ ಕೂಡಲೇ ಹಾಲು ಬರುವ ಮರದ ಕೆಳಗೆ ಆಕೆಯನ್ನು ಕುಳ್ಳಿರಿಸಿ ನೀರು ಹಾಕುವರು. ಇದು ಹೆಣ್ಣಿ ಫಲವಂತಿಕೆಗೆ ಅರ್ಹಳಾದುದರ ಸಂಕೇತ. ಅನಂತರ ಹುಡುಗಿಗೆ ಸ್ನಾನ ಮಾಡಿಸಿ, ಸಿಂಗರಿಸಿ, ಹಸೆ ಮೇಲೆ ಕುಳ್ಳಿರಿಸಿ ಅಕ್ಕಿ, ಬೆಲ್ಲ, ತೆಂಗಿನಕಾಯಿ, ವೀಳೆಯದೆಲೆ, ಅಡಿಕೆ ಓಲೆ ತೋಡು, ಹಸಿನೂಲು ಇವುಗಳನ್ನು ಆಕೆಯ ಮಡಿಲಿಗೆ ಇಟ್ಟು, 'ಮಡಿಲಕ್ಕಿ ಹುಯ್ಯುವ' ಶಾಸ್ತ್ರ ಮಾಡುವರು. ಇದು ಆ ಹುಡುಗಿ ವಂಶವಾಹಕಳಾಗಬೇಕೆಂದು ಹರಸುವ ಪ್ರತೀಕ. ಹನ್ನೆರಡು ದಿನಗಳ ಕಾಲ ಹೆಣ್ಣಿಗೆ ಪೌಷ್ಠಿಕ ಆಹಾರ ನೀಡುವರು, ನಿತ್ಯ ಸ್ನಾನ ಮಾಡಿಸಿ ಶುಚಿಯಾಗಿಡುವರು. ನಾಲ್ಕನೆಯ ದಿನದ ಋತುಸ್ನಾನ ವಾಗುವವರೆಗೆ ಆಕೆ ಅಡುಗೆ ಮನೆ, ದೇವರ ಮನೆಗಳಿಗೆ ಕಾಲಿಡುವಂತಿಲ್ಲ. ಹೊಸ್ತಿಲು ದಾಟುವುದಾಗಲಿ ಮನೆಯ ಕೆಲಸ ಕಾರ್ಯಗಳನ್ನು ಮಾಡುವುದಾಗಲೀ ನಿಷಿದ್ಧ. ಆದರೆ ಬಯಲು ಸೀಮೆಯ ಒಕ್ಕಲಿಗರಂತೆ 'ಗೂಡ್ಲು ಕೂಡುವ ಸಂಪ್ರದಾಯ' ಇವರಲ್ಲಿಲ್ಲದಿರುವುದು ಗಮನಾರ್ಹ. ಬಾಣಂತಿ ಮತ್ತು ಋತಿಮತಿಯಾದ ಹುಡುಗಿಗೆ ಮೆಂತ್ಯದ ಆಹಾರವನ್ನು ಹೇರಳವಾಗಿ ನೀಡುತ್ತಾರೆ.

ಹನ್ನೆರಡನೆಯ ದಿನ 'ಒಸಗೆ' ಆಚರಣೆಯನ್ನು ಹಿಂದೆಲ್ಲ ಅದ್ದೂರಿಯಿಂದ ಆಚರಿಸಲಾಗುತ್ತಿತ್ತು. ನೆಂಟರಿಷ್ಟರನ್ನು ಆಮಂತ್ರಿಸಲಾಗುತ್ತಿತ್ತು. ಒಸಗೆಯ ದಿನ ಹುಡುಗಿಯ ಸೋದರ ಮಾವ ಮತ್ತು ಸಮೀಪದ ಬಂಧುಗಳು ಗೂಡೆ ತರುವ ಶಾಸ್ತ್ರವಿದೆ. ಈ ಗೂಡೆಯಲ್ಲಿ ಬಾಳೆಹಣ್ಣು ತೆಂಗಿನಕಾಯಿ ಮೆಂತ್ಯದ ಹಿಟ್ಟು ರವಿಕೆ ಬಟ್ಟೆ ಇಟ್ಟಿರುತ್ತಾರೆ. ಅಂದಿನ ಪ್ರಮುಖ ಕಾರ್ಯಕ್ರಮ 'ಗಂಗೆ ತರಿಸುವುದು'. ಇದಕ್ಕೆ ನೀರು ಹೊರಿಸುವ ಶಾಸ್ತ್ರ ಎಂದೂ ಕೆಲವೆಡೆ ಕರೆಯುತ್ತಾರೆ. ಹುಡುಗಿಗೆ ಅಭ್ಯಂಜನ ಮಾಡಿಸಿ, ಸಿಂಗರಿಸಿ, ನಿಗದಿತ ಮುಹೂರ್ತದಲ್ಲಿ ವಾದ್ಯ ಸಮೇತ ಆಕೆಯನ್ನು ಸಮೀಪದ ಬಾವಿ ಅಥವಾ ಕೆರೆಗೆ ಕರೆದೊಯ್ದು ಮೂರು ಕಲಶದಲ್ಲಿ ನೀರು ತುಂಬಿ ಪೂಜಿಸುವರು. ಒಂದು ಕಲಶ ಹುಡುಗಿಗೆ ಹೊರಿಸುವರು. ಉಳಿದವನ್ನು ಮುತ್ತೈದೆಯರು ಹೊತ್ತುಕೊಳ್ಳುವರು. ಕಲಶದ ನೀರನ್ನು ಹಲಸಿನ ಮರಕ್ಕೆ ಹಾಕಿಸಿ ವೃಕ್ಷಪೂಜೆ ಮಾಡಿಸಿ ಗೃಹವನ್ನು ಹೊಗಿಸುವರು. ಅಂದು ಕುರಿ ಹಂದಿ ಮಾಂಸಗಳಿಂದ ತಯಾರಾದ ಭೂರಿ ಭೋಜನದಿಂದ ಬಂಧುಗಳನ್ನು ಸತ್ಕರಿಸುವರು. ಆಧುನಿಕತೆಯ ಪ್ರಭಾವದಿಂದ ಒಸಗೆ ಸಂಪ್ರದಾಯ ಗ್ರಾಮೀಣ ಪ್ರದೇಶದಲ್ಲಿಯೂ ಕಾಣೆಯಾಗಿದೆ. ಇದರಲ್ಲಿ ಭಾಗಿಯಾಗಲು ಇಂದಿನ ಹೆಣ್ಣು ಮಕ್ಕಳೂ ಒಪ್ಪುವುದಿಲ್ಲ. ಆದರೆ ಈ ಸಂಪ್ರದಾಯದ ಹಿಂದೆ ಈ ಸಮಾಜ ಫಲವಂತಿಕೆಗೆ ನೀಡಿದ ಮಹತ್ವವನ್ನು ಅರಿಯಬಹುದು.

ಮದುವೆ ಮಾನವನ ಬದುಕಿನಲ್ಲಿ ಮಹತ್ವದ ಘಟ್ಟ. ಮಾನವನ ಇಂದ್ರಿಯ ಸಹಜ ಬಯಕೆಗಳನ್ನು ಸಕ್ರಮಗೊಳಿಸಿ ಅದಕ್ಕೆ ನೈತಿಕ ಚೌಕಟ್ಟು ಒದಗಿಸುವಲ್ಲಿ ಮದುವೆಯ ಪಾತ್ರ ಬಹುಮುಖ್ಯ. ಹಿಂದೆ ಈ ಸಮುದಾಯದಲ್ಲಿ ಬಾಲ್ಯವಿವಾಹ ಪ್ರಚಲಿತವಿತ್ತು. ಹೆಂಡತಿ ಸತ್ತರೆ,

ಪುತ್ರ ಸಂತಾನವಿಲ್ಲದಿದ್ದರೆ ಮರುಮದುವೆಗೂ ಗಂಡಿಗೆ ಅವಕಾಶವಿತ್ತು. ವಿರಳವಾಗಿ ವಿಧವಾ ವಿವಾಹ ಕೂಡ ಜಾರಿಯಲ್ಲಿದೆ. ಇಂಥ ವಿವಾಹವನ್ನು 'ತಾಳಿ ಕಟ್ಟಿ ಕೊಡುವುದು' ಎಂದು ಕರೆಯುತ್ತಾರೆ. ವಿಧವೆಯ ಪುನರ್ವಿವಾಹದ ಸಂತಾನವನ್ನು 'ತಾಳಿ ಕಟ್ಟಿದ ಮನೆತನ' ಎಂದು ಗುರುತಿಸಿ ಸಂಪ್ರದಾಯಸ್ಥರು ಇಂಥ ಮನೆತನದಿಂದ ಹೆಣ್ಣು ಮಕ್ಕಳನ್ನು ತಂದುಕೊಳ್ಳುವುದಕ್ಕೆ ಇಚ್ಛಿಸುವುದಿಲ್ಲ. ಹಿಂದೆ 'ತೆರ' ಎಂದು ಕನ್ಯಾಶುಲ್ಕ ನೀಡಿ ವಿವಾಹವಾಗುತ್ತಿದ್ದರು. ಈಗ ವರದಕ್ಷಿಣೆ ಸ್ವೀಕರಿಸುವುದರಲ್ಲಿ ಈ ಸಮುದಾಯದವರೂ ಹೊರತಾಗಿಲ್ಲದಿದ್ದರೂ ಅದು ವ್ಯಾಪಕವಾಗಿಲ್ಲವೆನ್ನುವುದು ಸಮಾಧಾನದ ಸಂಗತಿ. ಹಿಂದೆ ವಿವಾಹವು ಅಕ್ಕಪಕ್ಕದ ಊರಿನ ಸ್ವಜಾತಿಯವರಲ್ಲಿಯೇ ನಡೆಯುತ್ತಿದ್ದರೂ ಸೋದರ ಮಾವನಿಗೆ ಹೆಣ್ಣು ಕೊಡುವುದು ಅಷ್ಟಾಗಿ ಇರಲಿಲ್ಲ. ತೀರ್ಥಹಳ್ಳಿ ಭಾಗದ ಮಲೆನಾಡು ವೈಷ್ಣವ ಸಂಪ್ರದಾಯದ ಒಕ್ಕಲಿಗರೊಂದಿಗೆ ವೈವಾಹಿಕ ಸಂಬಂಧಗಳು ಹಿಂದಿನಿಂದಲೂ ಕಂಡುಬರುತ್ತದೆ. ಈಗ ಯಾವುದೇ ಭಾಗದ ಒಕ್ಕಲಿಗರೊಂದಿಗೆ ವಿವಾಹ ಸಂಬಂಧ ಬೆಳೆಸುವುದಕ್ಕೆ ಅಡ್ಡಿಯಿಲ್ಲ.

ಮದುವೆಯ ಸಂಪ್ರದಾಯಗಳು ಇಂದು ಬದಲಾವಣೆಯಾಗುತ್ತಿದ್ದರೂ ಹಿಂದಿನಂತೆ ಒಳ್ಳೆಯ ಮನೆತನದವರೊಂದಿಗೆ ಹೆಣ್ಣು ಕೊಡುವ -ತರುವ ಆಶಯಕ್ಕೆ ಮಾನ್ಯತೆ ಕಡಿಮೆಯಾಗಿಲ್ಲ. ಹಿಂದೆ ಐದು ದಿನ ಮದುವೆ ನಡೆಯುತ್ತಿತ್ತು. ಮೊದಲ ದಿನ ಧೂಳು ನೀರು ತೆಗೆಯುವ ಶಾಸ್ತ್ರಕ್ಕೆ ಪ್ರಾಮುಖ್ಯತೆ. ಆದರೆ ಅದಕ್ಕಿಂತ ಮೊದಲು 'ವಾರಿಗೆ ಪೂಜೆ' ಎಂದು ಅಳಿದ ಹಿರಿಯರನ್ನು ಸ್ಮರಿಸಿ ಎಡೆಯಿಟ್ಟು, ಪೂಜಿಸಿ ಮಂಗಳಕಾರ್ಯಕ್ಕೆ ಸಾಂಕೇತಿಕವಾಗಿ ಆಶೀರ್ವಾದ ಪಡೆಯುವುದಿದೆ. ಇದನ್ನು ಕೆಲವರು 'ಕೊಲ್ಲೆ' ಎನ್ನುತ್ತಾರೆ. ವಧು ಹಸೆ ಏರುವ ಮೊದಲು ಊರಿನ ಮಾಸ್ತಿಕಲ್ಲಿಗೆ ವಧೂ ವರರ ಆಭರಣ ಹಾಗೂ ವಸ್ತ್ರಗಳನ್ನಿಟ್ಟು ಪೂಜಿಸುವ ಸಂಪ್ರದಾಯವೂ ಕೆಲವೆಡೆ ಕಂಡುಬರುತ್ತದೆ. ಈಗ ಮದುವೆ ಎರಡೇ ದಿನಕ್ಕೆ ಇಳಿದಿರುವುದರಿಂದ ಪೂರ್ವಭಾವಿಯಾಗಿ ವಧೂವರರ ಮನೆಗಳಲ್ಲಿ 'ಹಸೆ ಕೂರಿಸುವ ಶಾಸ್ತ್ರ', 'ದೇವರೂಟ ಚಪ್ಪರ' ಮೊದಲಾದ ಕಾರ್ಯಕ್ರಮಗಳು ಪ್ರತ್ಯೇಕವಾಗಿ ಜರುಗುತ್ತವೆ. ಹಸೆ ಬರೆಯುವಾಗ, ಎಣ್ಣೆ ಅರಿಶಿನ ತಿಕ್ಕುವಾಗ ನಿರಂತರ ಹಾಡಲಾಗುವುದು.

ಬಾಗಿಲಿಗೆ ಎದುರಾಗಿ ಬರೀರಮ್ಮ ಹಸೆಯ
ಸೋಬಾನ ಸೋಬಾನವೆ
ಬಾಗಿಲಲಿಲ್ಲವೆ ಗಿಣಿಗಳು ಸೋಬಾನ ಸೋಬಾನವೆ
ಬಾಗಿಲಲಿಲ್ಲವೆ ಗಿಣಿಗಳೀ ಮನೆಯಲ್ಲಿ
ಅವು ಭಾಗ್ಯದಾ ನುಡಿಯ ನುಡಿತಾವೆ ಸೋಬಾನ ಸೋಬಾನವೆ

ಎಂಬ ಹಾಡಿನಂತೆ ಇನ್ನೂ ಹಲವಾರು ಹಾಡುಗಳ ಹಿನ್ನೆಲೆಯಲ್ಲಿ ಶಾಸ್ತ್ರಗಳನ್ನು ಮುಂದು ವರೆಸುವರು. ಕೃಷಿಯನ್ನೇ ಕುಲವೃತ್ತಿಯಾಗಿ ಹೊಂದಿರುವ ಈ ಸಮುದಾಯದಲ್ಲಿ ಬದುಕಿನ ಜೀವನಾಡಿಗಳಾದ ಅಕ್ಕಿ ಮತ್ತು ನೀರಿಗೆ ಪ್ರಾಧಾನ್ಯತೆ ಇರುವುದರಿಂದ ಅಕ್ಕಿಯಿಲ್ಲದೆ ಯಾವ ಶಾಸ್ತ್ರವೂ ನಡೆಯಲಾರದು. ಹಸೆ ಮೇಲೆ ಕುಳಿತ ವಧುವಿಗೆ ಮುತ್ತೈದೆಯರೆಲ್ಲ ಸೇರಿ ಅಕ್ಕಿಯನ್ನು ಕೈಯಲ್ಲಿ

ಹಿಡಿದು ಆಕೆಯ ಮಂಡಿ, ಭುಜ, ಹಣೆಗೆ ತಗುಲಿಸಿ ಅಕ್ಕಿ ಹಾಕುವರು. ಶಾಸ್ತ್ರೋಕ್ತವಾಗಿ ಮುತ್ತೈದೆಯ ರಿಂದ ಗಂಗೆ ತರಿಸಿ ಆ ನೀರಿನಿಂದ ಮದುಮಗಳಿಗೆ ಎಣ್ಣೆ ಅಭ್ಯಂಜನದ ಪವಿತ್ರ ಸ್ನಾನ ಮಾಡಿಸುವರು. ಎಣ್ಣೆ, ಅರಿಶಿನದ ಬಳಿಕ ಗಂಗಳದಲ್ಲಿ ಬಾಳೆಹಣ್ಣು ತುಪ್ಪ ಇಟ್ಟು 'ಕಂಚಿಕ್ಕುವ ಶಾಸ್ತ್ರ' ಕೂಡ ಈ ಸಮುದಾಯದ ವೈಶಿಷ್ಟ್ಯ. ಚಪ್ಪರದ ದಿನ 'ಐರಣೆ' ಎಂದು ಐದು ಹೊಸ ಕುಂಭಗಳನ್ನು ಪೂಜಿಸ ಲಾಗುವುದು. ಈ ಸಂದರ್ಭದಲ್ಲಿ ಕುಂಬಾರ ಗುಂಡಯ್ಯನನ್ನು ನೆನೆದು ಹಾಡುವರು. ಮದುವೆಯ ದಿನ ವರನ ಕಡೆಯವರು ಬಂದಾಗ ಎದುರುಗೊಳ್ಳುವ ಶಾಸ್ತ್ರ, ಧಾರಾ ಮುಹೂರ್ತದಲ್ಲಿ ಮಾಂಗಲ್ಯಧಾರಣೆಯಾದ ಬಳಿಕ ನೆರೆದಿದ್ದ ಬಂಧುಗಳೆಲ್ಲ ವಧೂವರರು ಹಿಡಿದಿದ್ದ ತೆಂಗಿನಕಾಯಿಯ ಮೇಲೆ ಹಾಲು ಬಿಟ್ಟು ಆಶೀರ್ವದಿಸುವರು. ಇದಕ್ಕೆ ಕೈಗೆ ನೀರು ಬಿಡುವುದೆಂದು ಹೇಳುವರು.

ಕೃಷಿ ಪ್ರಧಾನವಾದ ಈ ಜಾತಿಯಲ್ಲಿ ವ್ಯವಸಾಯದ ವಿವಿಧ ಘಟ್ಟಗಳಿಗೆ ಸಂಬಂಧಿಸಿದ ಹಲವಾರು ಶಾಸ್ತ್ರಗಳು ವಿವಾಹದೊಡನೆ ತಳಕು ಹಾಕಿಕೊಂಡಿವೆ. ಚಪ್ಪರದಲ್ಲಿ ವಧು ಮದ್ದರ್ಸೆ ಮರದ ಸುತ್ತಲೂ 'ಅಕ್ಕಿ ಬೀಜ' (ಅಕ್ಕಿ, ಭತ್ತ, ಹುರುಳಿ ಇವುಗಳ ಮಿಶ್ರಣ) ಬಿತ್ತುವ ಶಾಸ್ತ್ರ ಸಂಪೂರ್ಣವಾಗಿ ಕೃಷಿಯ ಪ್ರತಿಬಿಂಬ. ಈ ಶಾಸ್ತ್ರಕ್ಕಾಗಿಯೇ ಆಟಿಕೆ ಮಾದರಿಯಲ್ಲಿ ಪುಟ್ಟ ಕೂರಿಗೆ, ನೇಗಿಲು, ನೊಗದಂಥ ವ್ಯವಸಾಯ ಉಪಕರಣ ಮಾಡಿಸಿರುತ್ತಾರೆ. ಹುಡುಗ ಅವುಗಳನ್ನು ಹಿಡಿದು ಚಪ್ಪರದಿಂದ ಮನೆಯ ಒಳಗೆ ಐರಣಿಗಳಿರುವಲ್ಲಿಗೆ ಹೋದರೆ ಹುಡುಗಿ ಆತನನ್ನು ಹಿಂಬಾಲಿಸುತ್ತ ಅಕ್ಕಿ ಬೀಜ ಬಿತ್ತುತ್ತ ಸಾಗುವಳು. ಇಲ್ಲಿ ಫಲವಂತಿಕೆಯ ಅಂಶ ಕೂಡ ಗೋಚರಿಸುತ್ತದೆ. ಮಲೆನಾಡಿನಲ್ಲಿ ಹಿಂದೆ ಧಾರಾ ಮುಹೂರ್ತಕ್ಕೆ ಮಾಂಸದ ಊಟವನ್ನೇ ಹಾಕುತ್ತಿದ್ದರು. ಈಚೆಗೆ ಕಲ್ಯಾಣ ಮಂಟಪಗಳಲ್ಲಿ ಮದುವೆ ಮಾಡುವುದರಿಂದ ಹಾಗೂ ಮಾಂಸದ ಊಟ ದುಬಾರಿಯಾಗಿರುವುದರಿಂದ ಸಸ್ಯಾಹಾರವೆ ವ್ಯಾಪಕ ವಾಗಿದೆ. ಆದರೆ ಈಗಲೂ ಮನೆಗಳಲ್ಲಿ ಮದುವೆ ಮಾಡುವವರು ಮಾಂಸದೂಟವನ್ನೇ ನೀಡಿ ಬಂಧುಗಳನ್ನು ತೃಪ್ತಿಪಡಿಸುವುದುಂಟು. ವರನ ಮನೆಯಲ್ಲಿ ಆದ್ದೂರಿಯ 'ನೆಂಟರೂಟ'ಗಳು ಈಗ ಸಾಮಾನ್ಯವಾಗಿದೆ. ಇದು ನಿಶ್ಚಿತವಾಗಿ ಮಾಂಸಾಹಾರವೇ ಆಗಿರುತ್ತದೆ. ಹೀಗೆ ಈ ಸಮುದಾಯದ ಮದುವೆ ಸಂಪ್ರದಾಯವು ವ್ಯವಸಾಯ ಮತ್ತು ಫಲವಂತಿಕೆಯನ್ನು ಸಂಕೇತಿಸುವಂತಿದೆ.

## ಮರಣ

ಮಲೆನಾಡು ಒಕ್ಕಲಿಗರಲ್ಲಿ ಮೃತ ವ್ಯಕ್ತಿಯ ಶವವನ್ನು ಹೂಳುವ ಮತ್ತು ಸುಡುವ ಎರಡೂ ಸಂಪ್ರದಾಯಗಳು ರೂಢಿಯಲ್ಲಿವೆ. ಹೂಳುವ ಪದ್ಧತಿಯೇ ಪ್ರಾಚೀನ. ಹಿಂದೆ ಬಾಣಂತಿ, ಗರ್ಭಿಣಿ ಮತ್ತು ತೊನ್ನು ಇರುವ ವ್ಯಕ್ತಿಯನ್ನು ಮಾತ್ರ ಸುಡುತ್ತಿದ್ದರು. ಏಕೆಂದರೆ ಬುಡಬುಡಿಕೆಯವರು ಬಾಣಂತಿ ಹಾಗೂ ಗರ್ಭಿಣಿ ಶವದ ಅಂಗಾಂಗಗಳನ್ನು ಶ್ಮಶಾನದಲ್ಲಿ ಕಳುವು ಮಾಡುವರೆಂಬ ನಂಬಿಕೆ ಇದ್ದಿತು. ತೊನ್ನು ಇರುವ ಶವವನ್ನು ಹೂಳಿದರೆ ಮಳೆ ಬರುವುದಿಲ್ಲವೆಂಬ ಪ್ರತೀತಿಯಿತ್ತು. ಈಗ ಹದಿನೈದು ವಯಸ್ಸಿನವರಿಗಿಂತ ಕೆಳಗಿರುವವರನ್ನು ಮಾತ್ರ ಹೂಳುವುದು, ಉಳಿದಂತೆ ಸುಡುವುದೇ ಅಧಿಕವಾಗಿದೆ. ಗರ್ಭಿಣಿ ಸತ್ತರೆ ಹರಿಜನರಿಂದ ಆಕೆಯ ಹೊಟ್ಟೆಯನ್ನು ಕತ್ತರಿಸಿ ಮಗುವನ್ನು ಹೊರ

ತೆಗೆಸಿ ತಾಯಿಯನ್ನು ಸುಟ್ಟು ಮಗುವನ್ನು ಹೂಳುವರು.

ಮನೆಯೊಳಗೆ ಪ್ರಾಣ ನೀಗುವುದನ್ನು ತಪ್ಪಿಸಲು ಪ್ರಾಣ ಹೋಗುತ್ತಿದೆಯೆಂದು ತಿಳಿದಾಗ ವ್ಯಕ್ತಿಯನ್ನು 'ಹೊರಗೆ ಹಿಡಿದು' ಜಗಲಿಯಲ್ಲಿ ಮಲಗಿಸುವರು. ಕೊನೆಯುಸಿರು ಎಳೆಯುವಾಗ ಗರಿಕೆಯಿಂದ ಬಾಯಿಗೆ ಹಾಲು ಬಿಡುವರು. ಸಾವು ಸಂಭವಿಸಿದ ಮೇಲೆ ದಡಾಕಿ ಹೊಡೆದು ಗುಡ್ಡ ಗೋವಿ ಹಾರಿಸುತ್ತಾರೆ. ಈ ರವವನ್ನು ಕೇಳಿದವರು ಮೃತ್ಯು ಸಂಭವಿಸಿದೆಯೆಂದು ಅರಿತು ಧಾವಿಸಿ ಬರುತ್ತಾರೆ. ಮೃತನ ಬಂಧುಗಳಿಗೆ ಈಗ ದೂರವಾಣಿ ಮೂಲಕ ಸುದ್ದಿ ತಿಳಿಸಿದರೂ ಹಿಂದಿನ ಸಂಪ್ರದಾಯದಂತೆ ಕುಳವಾಡಿಯ ಮೂಲಕ ಅಕ್ಕಪಕ್ಕದ ಊರುಗಳಿಗೆ 'ಕೌಡಿ ಹೇಳಿಸುವುದು' ಎಂದು ಶೋಕವಾರ್ತೆಯನ್ನು ತಿಳಿಸುತ್ತಾರೆ. ಶವದ ಹತ್ತಿರ 'ತಲೆ ಅಕ್ಕಿ', 'ತಲೆ ಭತ್ತ' ಹಣತೆ ಇಡುವ ಸಂಪ್ರದಾಯಯವಿರುವುದರ ಜೊತೆಗೆ ಹೆಣ ಎತ್ತುವ ವರೆಗೆ ಕಿನ್ನರಿ ಜೋಗಿ ಶೋಕ ವಾದ್ಯ ನುಡಿಸುವರು. ಈ ಜೋಗಿಗಳು ಮೃತರ ಹೆಸರು ಹೇಳಿ -

ತಾನನನೇ ತನನೂನನೇ ತಂದನಾನೂನೆ ತಾನನನೇ
ಅವ್ರು ಮುದ್ದು ಮುಖದ ಮೇಲೆ ಎದ್ದು ಬೆವರುತಾರೆ
ಅವ್ರು ಮದ್ದಿಗೆ ಹೋದವ್ರು ಬರವಿಲ್ಲ
ಅವ್ರು ಮದ್ದಿಗೆ ಹೋದವ್ರು ಬರವಿಲ್ಲ
ಅವ್ರು ಮುದ್ದು ಮುಖನೆಲ್ಲ ಜವನುಂಡು

ಎಂಬ ಮರಣದ ಹಾಡನ್ನು ದೀರ್ಘವಾಗಿ ಹಾಡುತ್ತಾರೆ. ಹೆಣವನ್ನು ಶೃಂಗರಿಸಿದ ಬಳಿಕ ವೀರಶೈವ ಜಾತಿಯ 'ಅಯ್ಯ' ಶವಪೂಜೆಯ ನೇತೃತ್ವ ವಹಿಸುವುದು ಕೂಡ ವಿಶೇಷ. ರಕ್ತ ಸಂಬಂಧಿಗಳು ಸಾವಿನ ಮನೆಗೆ ಬರುವಾಗ ಮೂರು ಗಜ ಬಿಳಿಯ ಬಟ್ಟೆ, ಎಲೆ ಅಡಿಕೆ, ತೆಂಗಿನಕಾಯಿ, ಬಾಳೆಹಣ್ಣು, ಊದಿನ ಕಡ್ಡಿ ತಂದು ಶವಪೂಜೆ ಮಾಡಿ ಮಡಿಲಕ್ಕಿ ಹೊಯ್ದು ತಮ್ಮ ಶಕ್ತ್ಯಾನುಸಾರ ಹಣ ಇಡುವರು. ಬಡ ಕುಟುಂಬಗಳಿಗೆ ಇಂಥ ಹಣದಿಂದ ಉಪಯೋಗವಿದೆ. ಮೃತನ ಹೆಂಡತಿ ಬದುಕಿದ್ದರೆ ಆಕೆಯನ್ನು ಸಿಂಗರಿಸಿ ಹೆಣದ ಜೊತೆ ಕುಳ್ಳಿರಿಸುವ ಪದ್ಧತಿ ಈ ಸಮುದಾಯದಲ್ಲಿಲ್ಲ. ಶವ ಸಂಸ್ಕಾರವಾಗುವ ಮುನ್ನ ಹಿರಿಯ ವಿಧವೆಯರು ಮೃತನ ಪತ್ನಿಯ ಕುಂಕುಮ ಅಳಿಸಿ ಬಳೆ ಒಡೆಯುವ ಪದ್ಧತಿಯನ್ನು ಮಾತ್ರ ಇವರೂ ಉಳಿಸಿಕೊಂಡಿದ್ದಾರೆ.

ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿ ದೊರೆಯಲೆಂದು ಹಾಗೂ ಆತನ ಸ್ಮರಣಾರ್ಥ ಮೂರು ದಿವಸಕ್ಕೆ ಹಾಗೂ ಹನ್ನೊಂದನೆಯ ದಿವಸಕ್ಕೆ ತಿಥಿ ಮಾಡುತ್ತಾರೆ. ಹನ್ನೊಂದನೆಯ ದಿನದ ಉತ್ತರಾದಿ ಕ್ರಿಯೆ ಬಹುಮುಖ್ಯವಾದುದು. ಸಮೀಪದ ಬಂಧುಗಳು ನಾಲ್ಕು ಸೇರು ಅಕ್ಕಿ, ಒಂದು ಕೋಳಿ, ಬಾಳೆ ಹಣ್ಣು, ತೆಂಗಿನಕಾಯಿ, ಊದಿನ ಕಡ್ಡಿ, ಕರ್ಪೂರ ಇವುಗಳನ್ನು ತಿಥಿಯ ದಿನಕ್ಕಾಗಿ ತರುವುದು; ತಿಂಡಿಗಳನ್ನು ಮಾಡಿಕೊಂಡು ಬರುವುದು ಇವೆಲ್ಲ ಈ ಜನಾಂಗವು ಸಹಕಾರ ತತ್ವದಲ್ಲಿ ಇಟ್ಟ ನಂಬಿಕೆಯಾಗಿದೆ. ಕಲಶ ಪೂಜೆಯಾದ ಬಳಿಕ ತಟ್ಟೆಗೆ 'ಕುರಿ ಹಣ' ಎಂದು ತಮ್ಮ ಇಚ್ಛಾನುಸಾರ

ಹಣ ಇಡುವುದು ಕೂಡ ಆರ್ಥಿಕ ಸಂಕಷ್ಟದಲ್ಲಿರುವವರಿಗೆ ಪರೋಕ್ಷವಾಗಿ ಬೆಂಬಲ ನೀಡುವಂಥದ್ದಾಗಿದೆ. ಹನ್ನೆರಡನೆಯ ದಿನ 'ಹಿಂಡುಗೂಡಿಸುವುದು' ಎಂದು ಅಗಲಿದ ಹಿರಿಯರ ಸಾಲಿಗೆ ಸೇರಿಸುವ ಕಾರ್ಯಕ್ರಮವಿರುತ್ತದೆ. ಅನಂತರ ತಿಂಗಳ ತಿಥಿ ಮಾಡಿದರೆ ಮತ್ತೆ ಅವರ ನೆನಪು ವರ್ಷದ ತಿಥಿಯಲ್ಲಿಯೆ. ಸಂಸ್ಕಾರ ಮಾಡಿದ ಸ್ಥಳದಲ್ಲಿ ಸಂಪಿಗೆ ಮರ ಅಥವಾ ತುಂಬೆ ಗಿಡ ಬೆಳೆಸುವುದುಂಟು. ಹಾಗಾಗಿ ಸತ್ತು ಸಂಪಿಗೆ ಮರವಾಗಿದ್ದಾರೆ ಎಂಬ ಮಾತು ರೂಢಿಯಲ್ಲಿದೆ.

## ಹಬ್ಬಗಳು

ಮಲೆನಾಡು ಶೈವ ಒಕ್ಕಲಿಗರ ಬದುಕಿನಲ್ಲಿಯೂ ಹಬ್ಬಗಳು ಹಾಸುಹೊಕ್ಕಾಗಿವೆ. ಇವರ ಹಬ್ಬಗಳನ್ನು ಸಾಮಾನ್ಯ ಹಬ್ಬಗಳು, ವಿಶಿಷ್ಟ ಹಬ್ಬಗಳು ಎಂದು ಎರಡು ಬಗೆಯಾಗಿ ವಿಂಗಡಿಸಬಹುದು. ಇತರ ಒಕ್ಕಲಿಗರಂತೆ ಇವರಿಗೂ ಯುಗಾದಿಯೇ ಹೊಸ ವರ್ಷ. ಆಗ ಬೇವು ಬೆಲ್ಲ ಭುಂಜನೆ, ಹೊಸ ಬಟ್ಟೆ ಧರಿಸುವುದು, ಅಭ್ಯಂಜನ ತಪ್ಪುವುದಿಲ್ಲ. ಇವರು ಯಾವುದೇ ಹಬ್ಬದಲ್ಲಿಯೂ ಮಾಂಸಾಹಾರ ಸೇವನೆಗೆ ಕಡಿವಾಣ ಹಾಕುವುದಿಲ್ಲ. ಪ್ರತಿ ಹಬ್ಬದಲ್ಲಿಯೂ ಅಳಿದ ಹಿರಿಯರನ್ನೇ ದೇವರೆಂದು ಭಾವಿಸಿ ಎಡೆಯಿಟ್ಟು ಪೂಜಿಸುವುದನ್ನು 'ಹರೆ ಮುಂದಕ್ಕೆ ಇಕ್ಕುವುದು' ಎನ್ನುತ್ತಾರೆ.

ಶೈವ ದೇವತೆಗಳನ್ನು ಆರಾಧಿಸುವ ಈ ಒಕ್ಕಲಿಗರಿಗೆ ಶ್ರಾವಣ ಸೋಮವಾರ ಕೂಡ ಪ್ರಶಸ್ತವಾದುದು. ಕೆಲವರು ಶನಿವಾರದ ಆಚರಣೆಯನ್ನೂ ಇಟ್ಟುಕೊಂಡಿದ್ದಾರೆ. ಶ್ರಾವಣ ಸೋಮವಾರದಂದು ಏನಾದರೂ ವಿಶೇಷ ಅಡುಗೆ ಮಾಡಿ ಶಿವನನ್ನು ಪೂಜಿಸುವರು. ಸಕಲೇಶಪುರ ಭಾಗದಲ್ಲಿ ದನಕರುಗಳಿಗೆ ಒಳಿತಾಗಲೆಂದು ಮಾರಿಹಬ್ಬ ಮಾಡುವರು. ಗೌರಿಹಬ್ಬಕ್ಕೆ ಮೊದಲು 'ಹಿಂದಲ ಹಬ್ಬ' ಎಂದು ಕುಟುಂಬದವರಿಗೆ ಮಕ್ಕಳಿಗೆ ಆರೋಗ್ಯ ಕೋರುವ ಹಬ್ಬದ ಆಚರಣೆಯಿದೆ. ಬ್ರಾಹ್ಮಣರ ಉಪಾಕರ್ಮಕ್ಕೆ ಪರ್ಯಾಯವಾಗಿ 'ನೂಲು ಹಬ್ಬ'ವನ್ನು ಮಾಡುವ ಪದ್ಧತಿಯು ಕೆಲವರಲ್ಲಿದೆ.

ಗೌರಿಹಬ್ಬದಲ್ಲಿ ತೆಂಗಿನಕಾಯಿ ವಿತರಿಸುವುದು ಮಲೆನಾಡು ಒಕ್ಕಲಿಗರ ವೈಶಿಷ್ಟ್ಯ. ತಮ್ಮ ಕುಟುಂಬಕ್ಕೆ ಸೇರಿದ ವಿವಾಹಿತ ಹೆಣ್ಣು ಮಕ್ಕಳಿಗೆ ಹಾಗೂ ಊರಿನ ಬಡಗಿ, ಕುಂಬಾರ, ಕ್ಷೌರಿಕ ಮೊದಲಾದ ವೃತ್ತಿಯವರಿಗೂ ವರ್ಷಕ್ಕೊಮ್ಮೆ ತೆಂಗಿನಕಾಯಿ ಕೊಟ್ಟು ಗೌರವಿಸುವುದಿದೆ. ಈ ಹಬ್ಬದಲ್ಲಿ ಅರಳು ಹಿಟ್ಟು (ಅರಳಿನ ಪುಡಿ, ಬೆಲ್ಲ, ತೆಂಗಿನಕಾಯಿ ಎಳ್ಳುಪುಡಿಯ ಮಿಶ್ರಣ) ಕೆಸುವಿನ ದಂಟು ತಂಬಿಟ್ಟು ಮೊದಲಾದವು ವಿಶೇಷ. ಎಲ್ಲ ಹಬ್ಬಕ್ಕೂ ಮಾಂಸದ ಅಡುಗೆಯನ್ನೇ ಇಷ್ಟಿಸುವ ಈ ಸಮುದಾಯ ಗೌರಿಹಬ್ಬ, ಸುಬ್ರಹ್ಮಣ್ಯ ಷಷ್ಠಿ ಮತ್ತು ಶಿವರಾತ್ರಿಯಂದು ಮಾತ್ರ ಸಸ್ಯಾಹಾರಕ್ಕೆ ಬದ್ಧವಾಗಿರುತ್ತದೆ. ಗಣೇಶ ಚತುರ್ಥಿಯಲ್ಲಿ ಮಣ್ಣಿನ ಗಣಪನನ್ನು ಇಡುವ ಸಂಪ್ರದಾಯವಿಲ್ಲ. ಅಂದು ವ್ಯವಸಾಯ ಸಂಬಂಧಿ ಉಪಕರಣಗಳನ್ನು ಪೂಜಿಸುವುದು ವಿಶೇಷ. ಅಳಿದ ಪಿತೃಗಳಿಗೆ, ಕೃತಜ್ಞತೆ ತೋರುವ, ಸ್ಮರಿಸುವ ಹಬ್ಬವಾದ ಮಹಾಲಯ ಅಮವಾಸ್ಯೆಯನ್ನು 'ಮಾಳ ಪಕ್ಷ' ಎಂದು ಕರೆಯುತ್ತಾರೆ. ದಸರಾ ಸಂದರ್ಭದಲ್ಲಿ ಇದನ್ನು ಆಚರಿಸುವರು. ಸಂಪೂರ್ಣ ವ್ಯವಸಾಯ ಪ್ರಧಾನ

ವಾದ 'ದೀವಳಿಗೆ' ಅಥವಾ 'ದೀಪಾವಳಿ' ಹಬ್ಬ ಮಲೆನಾಡಿಗರ ಶ್ರದ್ಧಾ ಭಕ್ತಿಯ ಪ್ರತೀಕವಾಗಿದೆ. ಮೂರು ದಿನಗಳ ಕಾಲ ಆಚರಿಸುವ ಈ ಹಬ್ಬದಲ್ಲಿ ಮೊದಲ ದಿನ ಅಂದರೆ ನರಕ ಚತುರ್ದಶಿಯಂದು ಅಭ್ಯಂಜನ ಮಾಡಿ ಲಕ್ಕೆ ಸೊಪ್ಪು, ಉತ್ತರಾಣಿ ಕಡ್ಡಿ, ಭತ್ತದ ತೆನೆಗಳನ್ನು ಮನೆಗೆ ತರುತ್ತಾರೆ. ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಬಿಂಡಿಗಮ್ಮನ ಹೆಸರು ಹೇಳಿ ತಾವು ಇದ್ದ ಸ್ಥಳದಿಂದಲೇ ಸಾಯಂಕಾಲ ತಂಬಿಟ್ಟಿನ ಆರತಿ ಎತ್ತುವುದುಂಟು. ಸಕಲೇಶಪುರ ಭಾಗದಲ್ಲಿ ಪಾಡ್ಯದ ದಿನ ಊರಿನವರೆಲ್ಲ ಒಟ್ಟಾಗಿ ಹೋಗಿ ಕಾಡಿನ ವಿವಿಧ ಸೊಪ್ಪುಗಳನ್ನು ತರುತ್ತಾರೆ. ಇದಕ್ಕೆ 'ಹೆಚ್ಚು ತರುವುದು' ಎನ್ನಲಾಗುವುದು. ಕಾಡಿನ ಸಿರಿಯನ್ನು ನಾಡಿಗೆ ತರುವ ರೀತಿ ಇದಾಗಿರಬಹುದು. ಮನೆಯ ಬಾಗಿಲಲ್ಲಿ ಸಗಣಿ ಉಂಡೆಗೆ ಚೆಂಡು ಹೂವು ಸಿಕ್ಕಿಸಿ 'ಕೆರಕ' ಎಂದು ಪೂಜಿಸುವರು. ಅಂದು ಹಬ್ಬದ ಅಡುಗೆಯನ್ನು ತೆಗೆದುಕೊಂಡು ಹೋಗಿ ತಮ್ಮ ಗದ್ದೆ ತೋಟಗಳಲ್ಲಿ ಚೆಲ್ಲುವ ಸಂಪ್ರದಾಯ ವಿದೆ. ಹಾಗೆಯೇ ಪ್ರತಿ ಗದ್ದೆಯಲ್ಲಿಯೂ ಕೋಲು ನೆಟ್ಟು, ಪಂಜು ಹಚ್ಚಿ ಬರುವ ಪದ್ಧತಿಯೂ ರೂಢಿಯಲ್ಲಿದೆ. ಮೂಡಿಗೆರೆ ಭಾಗದಲ್ಲಿ ದೀಪಾವಳಿ ಆದ ಬಳಿಕ 'ವರ್ಷ ತೊಡರು' ಎಂದು ವ್ಯವಸಾಯ ಉಪಕರಣಗಳನ್ನು ಈ ಸಂದರ್ಭದಲ್ಲಿ ಪೂಜಿಸುವರು. ಕಣದಲ್ಲಿ ಮೇಟಿ ಪೂಜೆ ಮಾಡಿ ಎಡೆಯಿಡುವ ಸಂಪ್ರದಾಯವು ಕಂಡುಬರುತ್ತದೆ. ದೀಪಾವಳಿ ವಿಶೇಷವಾದ ಹಬ್ಬವಾಗಿರುವುದರಿಂದ ಕೋಲಾಟ, ಕರಡಿ ಕುಣಿತದ ತಂಡಗಳು ಮನೆ ಮನೆಗೆ ಬಂದು ಮನರಂಜನೆ ನೀಡುವುದುಂಟು.

ಸಕಲೇಶಪುರ ಭಾಗದಲ್ಲಿ ದೀಪಾವಳಿಯಾದ ಬಳಿಕ ಪ್ರಥಮ ಹುಣ್ಣಿಮೆಯಂದು 'ಮಕ್ಕಳ ಹುಣ್ಣಿಮೆ'ಯೆಂದು ಆಚರಿಸುವರು. ಹೆಸರು ಮಕ್ಕಳ ಹುಣ್ಣಿಮೆ ಎಂದಿದ್ದರೂ ಆಯುಧ ಪೂಜೆ, ತಿಪ್ಪಮ್ಮನ ಪೂಜೆಗಳು ಈ ಹಬ್ಬದ ವೈಶಿಷ್ಟ್ಯ. ತಿಪ್ಪಮ್ಮನಿಗೆ ಹಾಲು ಪಾಯಸ ಅಥವಾ ಕಿಚಡಿ ಅರ್ಪಿಸುವುದನ್ನು ಗಮನಿಸಿದರೆ ಇದು ಜೈನ ಯಕ್ಷಿಯ ಪಳೆಯುಳಿಕೆ ಇರಬಹುದು. ಡಿಸೆಂಬರ್ ತಿಂಗಳಿನಲ್ಲಿ ನಡೆಯುವ ಸುಬ್ರಹ್ಮಣ್ಯ ಷಷ್ಠಿಯಲ್ಲಿಯೂ ಸಿಹಿ ಅಡುಗೆಯನ್ನೇ ಮಾಡುತ್ತಾರೆ. ಸುಬ್ಬಪ್ಪನ ಹೆಸರು ಹೇಳಿ ಕಲಶ ಸ್ಥಾಪನೆಗೊಳಿಸಿ ಎಡೆಯಿಡುವರು. ಸಂಕ್ರಾಂತಿಯಲ್ಲಿ ಶಿಷ್ಟ ಸಂಸ್ಕೃತಿಯಂತೆ 'ಎಳ್ಳು ಬೀರುವ' ಪದ್ಧತಿ ಇಲ್ಲ. ಆದರೆ ಮೆದೆ ಪೂಜೆ ಮಾಡಿ ಕೋಳಿ ಕಡುಬು ಮಾಡಿ ಮೆದೆ ಮೇಲೆ ಎಡೆ ಇಡುತ್ತಾರೆ. ಹೀಗೆ ಇದು ವ್ಯವಸಾಯ ಪ್ರಧಾನ ಹಬ್ಬವಾಗಿ ರೂಢಿಯಲ್ಲಿದೆ.

ಮಲೆನಾಡು ಶೈವ ಸಂಪ್ರದಾಯದವರು ತುಂಬ ವಿಶಿಷ್ಟವಾಗಿ ಆಚರಿಸುವ ಹಬ್ಬ ಸುಗ್ಗಿ ಹಬ್ಬ. ಇದು ಸಾಮೂಹಿಕವಾಗಿ ಆಚರಿಸುವಂಥದ್ದು. ಮೂಡಿಗೆರೆ ತಾಲೂಕು ದೇವವೃಂದದ ರಾಮೇಶ್ವರ ದೇವರ ತೇರು ನಡೆದ ಬಳಿಕ ಸುಗ್ಗಿ ಹಬ್ಬದ ಸಿದ್ಧತೆಗೆ ಇತರ ಊರುಗಳಲ್ಲಿಯೂ ಚಾಲನೆ ದೊರೆಯು ತ್ತದೆ. ಅಂಗಡಿ, ಫಲ್ಗುಣಿ, ಗುತ್ತಿ, ಚೀಕನಹಳ್ಳಿ, ಕೋಳೂರು, ತ್ರಿಪುರ, ಬಣಕಲ್, ಬಾಳೂರು, ಮೂಡಿಗೆರೆ ಮೊದಲಾದೆಡೆ ಸುಗ್ಗಿಹಬ್ಬಗಳು ಜರುಗುತ್ತವೆ. ಸಕಲೇಶಪುರ ತಾಲೂಕಿನ ಹೆತ್ತೂರು ಸುಗ್ಗಿಯನ್ನು ಹೊನ್ನಾರು ಸುಗ್ಗಿ ಎಂದು ಕರೆಯುತ್ತಾರೆ. ರೈತ ಸಮೃದ್ಧವಾದ ಮಳೆ ಬೆಳೆ ಗಳಾಗುವಂತೆ ದೇವೀರಮ್ಮನನ್ನು ಭಕ್ತಿಯಿಂದ ಪ್ರಾರ್ಥಿಸುವ ವಿಧಿಯೇ ಸುಗ್ಗಿ ಹಬ್ಬ ಎಂದು ಸ್ಥೂಲ ವಾಗಿ ಹೇಳಬಹುದು. ಇದು ವ್ಯವಸಾಯ ಸಂಬಂಧಿ ಹಬ್ಬವಾದರೂ ಒಕ್ಕಲಿಗರ ಕ್ಷಾತ್ರ ಗುಣವನ್ನು ಸಹ

ಬಿಂಬಿಸುತ್ತದೆ. ದೇವೀರಮ್ಮ, ಮಲ್ಲಿಕಾರ್ಜುನ ಸುಗ್ಗಿ ಹಬ್ಬದಲ್ಲಿ ಪೂಜೆಗೊಳ್ಳುವ ಪ್ರಮುಖ ದೇವತೆಗಳು. ಈ ಹಬ್ಬವು ಒಂದು ವಾರ, ಹತ್ತು ದಿವಸ, ಹನ್ನೆರಡು ದಿವಸ ಹೀಗೆ ಒಂದೊಂದು ಊರಿನಲ್ಲಿ ನಿರ್ದಿಷ್ಟ ಅವಧಿಯನ್ನು ಇಟ್ಟುಕೊಂಡಿದ್ದಾರೆ. ಎಪ್ರಿಲ್‌ನಿಂದ ಜೂನ್‌ವರೆಗೆ ಜರಗುವಂಥದ್ದು.

ಸುಗ್ಗಿ ಹಬ್ಬದ ವೈಶಿಷ್ಟ್ಯವೆಂದರೆ ಉಪವಾಸ, ಹೊಸ್ನಾರು ಕಟ್ಟುವುದು, ದೇವರನ್ನು ಉಯ್ಯಾಲೆಯಲ್ಲಿ ಕುಳ್ಳಿರಿಸುವುದು, ಕತ್ತಿ ಹಿಡಿದು ಕುಣಿಯುವುದು. ಸುಗ್ಗಿ ಸಾರು ಹಾಕಿದ ಬಳಿಕ ಊರಿನವರು ಹೊರಗೆ ಹೋಗುವಂತಿಲ್ಲ. ಹೊರಗಿನಿಂದ ಬಂದವರೂ ಸಹ ಇದರಲ್ಲಿ ಭಾಗವಹಿಸುವಂತಿಲ್ಲ. ಮಾಂಸಾಹಾರವಂತೂ ಸಂಪೂರ್ಣ ನಿಷಿದ್ಧ. ಬೀಜ ಬಿತ್ತುವುದು, ಮರ ಕಡಿಯುವುದು, ಮೆಣಸಿನಕಾಯಿ ಪುಡಿ ಮಾಡುವುದು. ರೊಟ್ಟಿ ಬೇಯಿಸುವುದು ಕೂಡ ಸಲ್ಲದು. ಮೊದಲ ದಿನ 'ಊರ ಹಬ್ಬ'. ಸುಗ್ಗಿ ಯಶಸ್ವಿಯಾಗಿ ನಡೆಸಿಕೊಡುವಂತೆ ದೇವರಲ್ಲಿ ಸಮಸ್ತ ಜನರೂ ಪ್ರಾರ್ಥಿಸಿಕೊಳ್ಳುವುದೇ ಇದರ ಆಶಯ. ಸುಗ್ಗಿ ಹಬ್ಬದಲ್ಲಿ ಕುಮಾರರ ವಿಗ್ರಹಗಳನ್ನೂ ಪೂಜಿಸುವರು. ಸಾಯಂಕಾಲ ಸುಗ್ಗಿ ಕಟ್ಟೆಗೆ ದೇವರನ್ನು ಒಯ್ದು ಉಯ್ಯಾಲೆ ಮೇಲೆ ಕೂರಿಸಿ ಹಣ್ಣು ಕಾಯಿಗಳನ್ನು ಅರ್ಪಿಸಿ ಖಡ್ಗ ಹಿಡಿದು ಕುಣಿಯುವುದಕ್ಕೆ 'ಸುಗ್ಗಿ ಕುಣಿತ' ಎನ್ನುತ್ತಾರೆ. ಒಂದು ದಿನ ವಿರಾಮ ಕೊಟ್ಟು 'ಮಲ್ಲು ಸುಗ್ಗಿ' ಎಂದು ಪಂಜು ಹಿಡಿದು ಇದೇ ಬಗೆಯಲ್ಲಿ ಕುಣಿಯುವುದುಂಟು. ಮಲ್ಲ ಸುಗ್ಗಿಯೇ ವಾಡಿಕೆಯಲ್ಲಿ ಮಲ್ಲುಸುಗ್ಗಿಯಾಗಿರಬಹುದೆ? ವೀರರಾಗಿ ತಮ್ಮ ತಾಣವನ್ನು ರಕ್ಷಿಸಿದವರ ಕುರುಹಾಗಿರಬಹುದು. ಹೊಸ್ನಾರು ಸುಗ್ಗಿಯ ದಿನ ದೇವರ ಮುಂದೆ ಸಾಂಕೇತಿಕವಾಗಿ ಉಳುಮೆ ಮಾಡಿ ಆ ವರ್ಷದ ಕೃಷಿ ಕಾರ್ಯಕ್ಕೆ ದೇವರಿಂದ ಆಶೀರ್ವಾದ ಪಡೆಯುವರು. ಸುಗ್ಗಿ ಆಚರಣೆಯಿಂದ ದೇವಿ ತೃಪ್ತಳಾಗಿ ಕಾಲ ಕಾಲಕ್ಕೆ ಸರಿಯಾಗಿ ಮಳೆ ಬಂದು, ಬೆಳೆ ಹುಲುಸಾಗಿ, ದವಸ ಧಾನ್ಯ ತುಂಬಿ ನಾಡು ಸುಭಿಕ್ಷವಾಗುತ್ತದೆ, ರೋಗರುಜಿನಗಳು ದೂರವಾಗುತ್ತದೆ ಎಂಬ ನಂಬಿಕೆ ಪ್ರಬಲವಾಗಿದೆ.

ಒಕ್ಕಲಾಟ ಮುಗಿದು ಮನೆಯ ಕಣಜಗಳು ಭತ್ತದಿಂದ ತುಂಬಿದ್ದು ಮೊದಲ ಸಲ ಹೊಸ ಭತ್ತ ಬಳಸುವಾಗ 'ಹೊಸಕ್ಕಿ ಹಬ್ಬ' ಮಾಡುತ್ತಾರೆ. ಕಡುಬು ಕೋಳಿಸಾರು ಮಾಡಿ ನೆರೆಹೊರೆಯವರನ್ನು ಆಮಂತ್ರಿಸಿ ಹಿರಿಯರಿಗೆ ಎಡೆಯಿಟ್ಟು ಊಟ ಮಾಡುತ್ತಾರೆ. ಪ್ರತಿ ವರ್ಷ ಆಶ್ಲೇಷ ಮಳೆ ಹುಯ್ಯುವಾಗ ದನಕರುಗಳಿಗೆ ರೋಗಗಳು ಸ್ಪರ್ಶಿಸದಿರಲೆಂದು ಮಾರಿ ಹಬ್ಬದ ಆಚರಣೆಯೂ ಕೆಲವು ಊರುಗಳಲ್ಲಿದೆ.

ಪ್ರಕೃತಿಯ ಮಡಿಲಲ್ಲಿ ಹುಟ್ಟಿ ಬೆಳೆದ ಮಲೆನಾಡ ಒಕ್ಕಲಿಗರಿಗೆ ಇಲ್ಲಿನ ಕಾಡುಮೇಡು ಬೆಟ್ಟ ಮರ ಗಿಡಗಳೆಲ್ಲ ವಿಶಿಷ್ಟ ಅನುಭವ ನೀಡುವ ಸಂಗತಿಗಳು. ಸೃಷ್ಟಿ ವೈಚಿತ್ರ್ಯದ ಹಿಂದೆ ಅಗೋಚರ ಶಕ್ತಿ ಅಸ್ತಿತ್ವವನ್ನು ಇವರು ಒಪ್ಪುತ್ತಾರೆ. ತಮಗೆ ಸೇರಿದ ತೋಟ ತುಡಿಕೆಗಳ ಹಿನ್ನೆಲೆಯಲ್ಲಿಯೂ ಅದೃಶ್ಯ ಶಕ್ತಿಯ ಕೈವಾಡವಿದೆಯೆಂದು ಭಾವಿಸುತ್ತಾರೆ. ಈ ಹಿನ್ನೆಲೆಯಲ್ಲಿ ವರ್ಷಕ್ಕೊಮ್ಮೆ ತೋಟದಲ್ಲಿ ಜರುಗುವ ವಿಶಿಷ್ಟ ಆಚರಣೆಗೆ 'ದಯ್ಯ ಕೊಡುವುದು' ಎಂದು ಕರೆಯುವರು. ಇದು ಕಾಣದ ಶಕ್ತಿಯನ್ನು ತೃಪ್ತಿಪಡಿಸುವ ವಿಧಾನ. ತೋಟಗಲ್ಲಿ ದಯ್ಯ ಅಥವಾ ಚೌಡಿ ವಾಸಿಸುತ್ತ ರಕ್ಷಣೆ ಮಾಡುತ್ತಿರುತ್ತವೆಂದು ನಂಬುತ್ತಾರೆ. ಬೇಸಿಗೆ ಕಾಲದಲ್ಲಿ ತಮಗೆ ಅನುಕೂಲವಾದ ದಿನದಲ್ಲಿ ಅಡುಗೆ

ಸಾಮಗ್ರಿ, ಕೋಳಿ, ಹಂದಿಗಳನ್ನು ತೆಗೆದುಕೊಂಡು ಹೋಗಿ ತೋಟದಲ್ಲಿಯೇ ಅಡುಗೆ ಮಾಡಿ ಚೌಡಮ್ಮನ ಕಲ್ಲಿಗೆ ಎಡೆಯಿಟ್ಟು ಅಲ್ಲಿಯೇ ಊಟ ಮಾಡಿ ಬರುತ್ತಾರೆ. ಈ ಆಚರಣೆಯಲ್ಲಿ ಮನೆಯಿಂದ ಅಡುಗೆ ಮಾಡಿಕೊಂಡು ಹೋಗುವಂತಿಲ್ಲ. ಹಾಗೆಯೇ ತೋಟದಲ್ಲಿ ಮಿಕ್ಕ ಅಡುಗೆಯನ್ನೂ ತರುವಂತಿಲ್ಲ. ಪುರುಷರು ಮಕ್ಕಳು ಭಾಗವಹಿಸುತ್ತಾರೆ.

ಈ ಸಮುದಾಯದವರ ಹಬ್ಬಗಳನ್ನು ಅವಲೋಕಿಸಿದಾಗ ಇವರು ಪ್ರಕೃತಿಯನ್ನೂ ಕುಟುಂಬದ ಹಿರಿಯರನ್ನೂ ಆರಾಧಿಸಿರುವುದು ವ್ಯಕ್ತವಾಗುತ್ತದೆ. ಹಬ್ಬಗಳಲ್ಲಿ ಮಾಂಸಾಹಾರ ಸೇವನೆ ಬುಡಕಟ್ಟು ಸಂಪ್ರದಾಯದ ಪಳೆಯುಳಿಕೆಯಾಗಿ ಕಂಡುಬರುತ್ತದೆ. ಆಧುನಿಕತೆಯ ಪ್ರಭಾವದಿಂದ ಅನೇಕ ಊರುಗಳಲ್ಲಿ ಈಗ ಸಿಹಿ ಅಡುಗೆ ಮಾಡುವುದು ರೂಢಿಯಾಗಿದೆ.

## ಬೇಟೆ

ಕಾಡಿನ ಪರಿಸರದಲ್ಲಿಯೇ ಬದುಕುವ ಮಲೆನಾಡು ಒಕ್ಕಲಿಗರಿಗೆ ಬೇಟೆ ಕೂಡ ಮುಖ್ಯವಾದ ಹವ್ಯಾಸ. ಸರಕಾರ ಬೇಟೆಗೆ ನಿಷೇಧ ಒಡ್ಡುವ ವರೆಗೆ ಇದು ಇವರ ಸಂಸ್ಕೃತಿಯ ಭಾಗವಾಗಿತ್ತು. ಕಾಡುಕೋಳಿ, ಕಾಡುಹಂದಿ, ಸಾರಗ, ಕಡವೆ, ಕಾಡುಕುರಿ, ಮೊಲ, ಬೆಳ್ಳಕ್ಕಿ ಮೊದಲಾದ ಪ್ರಾಣಿಗಳ ಮಾಂಸವೆಂದರೆ ಬಾಯಿ ನಿರೂರುವುದುಂಟು. ಪ್ರತಿ ಮನೆಯಲ್ಲಿಯೂ ವಂಶ ಪಾರಂಪರಿಕವಾಗಿ ಲಭ್ಯವಾದ ಬಂದೂಕುಗಳು ಇರುತ್ತವೆ. ಬೇಟೆ ಖಯಾಲಿ ಇರುವವರು ಇರುಳಿನಲ್ಲಿ ಬೇಟೆಯಾಡುವು ದಿಲ್ಲವೆನ್ನಲಾಗದು. ಇವರು ಒಂದು ಕಾಲದಲ್ಲಿ ಹುಲಿಗಳನ್ನು ಕೊಂದು ತಮ್ಮ ಶೌರ್ಯ ಸಾಹಸ ಗಳನ್ನು ಅಭಿವ್ಯಕ್ತಿಸಿದ್ದುಂಟು. ಇವರಲ್ಲಿ ಅನೇಕ ಬಗೆಯ ಬೇಟೆಗಳು ರೂಢಿಯಲ್ಲಿದ್ದವು. 'ಅಲು ಬೇಟೆ', 'ಪುಣುಗು ಬೇಟೆ' ಎಂದು ಸ್ಥೂಲವಾಗಿ ವಿಂಗಡಿಸಬಹುದು. ಆಲುಬೇಟೆ ಎಂದರೆ ದೊಡ್ಡ ಬೇಟೆ. ಗುಂಪಾಗಿ ಹೋಗಿ ಬೇಟೆಯಾಡುವುದು. ಪುಣುಗು ಬೇಟೆ ಎಂದರೆ ಚಿಕ್ಕ ಬೇಟೆ. ದೊಡ್ಡ ಬೇಟೆ ಅನೇಕ ದಿನಗಳ ವರೆಗೆ ನಡೆಯುವುದರಿಂದ ಸಿದ್ಧತೆಗಳೂ ಅದಕ್ಕೆ ತಕ್ಕನಾಗಿಯೇ ಇರುತ್ತವೆ. ಬೇಟೆ ಹೊರಡುವ ಮೊದಲು ಪಂಜರವಳ್ಳಿ ದೈವಗಳನ್ನು ನೆನೆಯುವುದು, ಮಂತ್ರವಾದಿಗಳಿಂದ ತಡೆ ಒಡೆಸುವುದು, ಬೇಟೆ ದೈವಗಳಿಗೆ 'ಈರಿ ಕೋಲು' ಅಥವಾ 'ಹಿಡಿಬಿಂಡ' ಕೊಡುವುದಾಗಿ ಹರಕೆ ಕಟ್ಟಿಕೊಳ್ಳುವುದು, ಪಾತ್ರೆ ಪಡಗ ಮೆಣಸಿನಕಾಯಿ ಪುಡಿ ಉಪ್ಪು ಮೊದಲಾದ ಅಡುಗೆ ಸಾಮಗ್ರಿಗಳನ್ನು ಒಯ್ಯುವುದರೊಂದಿಗೆ ದೇವರ ಆಶೀರ್ವಾದವನ್ನು ಪಡೆದು ಹೊರಡುತ್ತಾರೆ.

ದೊಡ್ಡ ಬೇಟೆಗೆ ಬಂದೂಕು ಬಳಸಿದರೆ ಚಿಕ್ಕ ಬೇಟೆಯ ವಿಧಾನಗಳು ಅನೇಕ. ಬಲೆ ಹಾಕುವುದು, ಕೋವಿ ಕಟ್ಟುವುದು, ಕತ್ತರಿ ಒಡ್ಡುವುದು, ಸಿಡಿಮದ್ದು ಸಿಡಿಸುವುದು, ಇಳಸಲು ಬೇಟೆ, ಹೊಂಚು ಬೇಟೆ, ಮೇಣ ಬೇಟೆ, ಉರುಳು ಬೇಟೆ, ಹೊಡ ಬೇಟೆ, ಬೆಂಕಿ ಹಾಕುವುದು ಇತ್ಯಾದಿ. ಈ ವಿಧಾನಗಳಲ್ಲಿ ಆದಿಮ ಕಾಲದ ಕೆಲವು ಬೇಟೆ ವಿಧಾನಗಳ ಚಹರೆಗಳನ್ನು ಕಾಣಬಹುದು.

## ಅಡುಗೆ

ಯಾವುದೇ ಒಂದು ಸಮುದಾಯದ ಅಡುಗೆ ಪದ್ಧತಿ ಅವರು ನೆಲಸಿರುವ ಪ್ರದೇಶದ ಭೌಗೋಳಿಕತೆಗೆ ಅನುಗುಣವಾಗಿ ರೂಪಿತವಾಗಿರುತ್ತದೆ. ಇಲ್ಲಿನ ಹೆಂಗಳೆಯರು ಸಾಂಪ್ರದಾಯಿಕ ರೊಟ್ಟಿಯಿಂದ ಹಿಡಿದು ಇಂದಿನ ಕಬಾಬ್ ವರೆಗೆ ಎಲ್ಲ ಬಗೆಯ ಅಡುಗೆಗಳಲ್ಲಿ ಪರಿಣತರು. ಇಲ್ಲಿ ಸಾಂಪ್ರದಾಯಿಕ ಅಡುಗೆ ಬಗ್ಗೆ ಕೆಲವು ವಿಚಾರಗಳನ್ನು ಪ್ರಸ್ತಾಪಿಸಬಹುದು. ಈ ಸಮುದಾಯದ ಬೆಳಗಿನ ಉಪಾಹಾರವೆಂದರೆ ರೊಟ್ಟಿ. ಈ ಬಗ್ಗೆ ''ರೊಟ್ಟಿಯಂಥ ಊಟವಿಲ್ಲ ಹೊಟ್ಟಿ (ಕಿವುಡಿ) ಯಂಥ ಹೆಂಡತಿಯಿಲ್ಲ'' ಎಂಬ ಗಾದೆ ಪ್ರಚಲಿತದಲ್ಲಿದೆ. ಅನ್ನ ಮತ್ತು ಅಕ್ಕಿಹಿಟ್ಟು ಕಲಸಿ ಮಾಡುವ ಈ ರೊಟ್ಟಿಯನ್ನು ಕೆಂಡದ ಮೇಲೆ ಹಾಕಿದಾಗ ಪೂರಿಯಂತೆ ಉಬ್ಬುತ್ತದೆ.

ರೊಟ್ಟಿಯ ಬಳಿಕದ ಸ್ಥಾನ ಕಡುಬಿಗೆ. ಕಾಯಿ ಕಡುಬು, ಸಿಹಿ ಕಡುಬು, ಸಣ್ಣ ಹಿಟ್ಟು, ಉದುರಿಗೆ ಹಿಟ್ಟು, ಬಟ್ಟಲ ಹಿಟ್ಟು ಮುಂತಾಗಿ ಅನೇಕ ರೀತಿಯ ಕಡುಬುಗಳನ್ನು ತಯಾರಿಸುತ್ತಾರೆ. ಮಲೆನಾಡಿ ನಲ್ಲಿ ಎಲ್ಲ ಕಾಲದಲ್ಲಿಯೂ ಒಂದಲ್ಲ ಒಂದು ಬಗೆಯ ಹಣ್ಣು ದೊರೆಯುವುದರಿಂದ ಈ ಹಣ್ಣು ಗಳನ್ನು ಬಳಸಿಕೊಂಡು ವಿವಿಧ ಅಡುಗೆಗಳನ್ನು ತಯಾರಿಸುವುದುಂಟು. ಬಾಳೆಹಣ್ಣು ಮಲೆನಾಡಿನಲ್ಲಿ ಯಾವಾಗಲೂ ದೊರೆಯುವಂಥದ್ದು. ಮಳೆಗಾಲದಲ್ಲಿ ಗಾಳಿ ಮಳೆಗೆ ಗೊನೆ ಬಿದ್ದು ಬಟ್ಟಿಗೇ ಪಣ್ಣಾದಾಗ ಬಾಳೆಹಣ್ಣಿನ ದೋಸೆ, ಬಾಳೆಹಣ್ಣಿನ ಗಂಗಳದ ಹಿಟ್ಟು, ಗಾರಿಗೆ, ಕಡುಬು ಈ ತಿನಿಸು ಗಳನ್ನು ಮಾಡುತ್ತಾರೆ. ಗಾರಿಗೆ ಒಂದನ್ನು ಹೊರತುಪಡಿಸಿ ಮಿಕ್ಕ ಅಡುಗೆಗಳು ಎಣ್ಣೆಯಲ್ಲಿ ಕರಿಯು ವಂಥದಲ್ಲ. ಹಲಸಿನ ಹಣ್ಣಿನಿಂದಲೂ ಪೂರ್ವೋಕ್ತ ಅಡುಗೆಗಳನ್ನು ಮಾಡುವರು. ಜೊತೆಗೆ ಹಲಸಿನ ಹಣ್ಣಿನ ದೊನ್ನೆ ಹಿಟ್ಟು, ಪಾಯಸ, ಹಲಸಿನ ಹಣ್ಣಿನ ಅನ್ನ ಕೂಡ ತಯಾರಿಸುವರು. ಜೊಟ್ಟೆ ಹಣ್ಣು, ಹಾಲೆ ಹಣ್ಣು ಮಲೆನಾಡಿಗೇ ವಿಶಿಷ್ಟ. ಜೊಟ್ಟೆಹಣ್ಣನ್ನು ತೀರ್ಥಹಳ್ಳಿ ಕಡೆ ಬಿಳುಮಾರಲ ಹಣ್ಣು ಎನ್ನುವರು. ಸ್ವಾದಿಷ್ಟವಾದ ಈ ಹಣ್ಣಿನಿಂದಲೂ ಪಾಯಸ, ಗಂಗಳದ ಹಿಟ್ಟು (ತಟ್ಟೆ ಇಡ್ಲಿ) ಸಿದ್ಧಪಡಿಸುವರು. ಹಾಲೇ ಹಣ್ಣಿನ ಪಾಯಸ, ಮಾವಿನ ಹಣ್ಣಿನ ಸಾರು ರಸಾಯನಗಳು ಕೂಡ ಮಲೆನಾಡಿಗರಿಗೆ ಪ್ರಿಯ.

ಸಿಹಿ ಕುಂಬಳಕಾಯಿಯನ್ನು ಚೇಣಿಕಾಯಿ, ಸಕ್ಕರೆಕಾಯಿ, ಚೀನಿಕಾಯಿ ಎಂದು ವಿವಿಧ ಹೆಸರುಗಳಿಂದ ಕರೆಯುವವರಲ್ಲದೆ ಇದರ ಕಡುಬು, ಪಾಯಸವನ್ನು ಸೇವಿಸುತ್ತಾರೆ. ಹೀಗೆಯೇ ಅರಶಿನದ ಎಲೆಯೊಳಗೆ ಉಕ್ಕರಿಸಿದ ಅಕ್ಕಿ ಹಿಟ್ಟು, ಸವರಿ, ಅರಳು ಬೆಲ್ಲದ ಹೂರಣ ತುಂಬಿ ಎಲೆಗೊರೆದ ಹಿಟ್ಟು, ಅಗಲಬಾಯಿಯ ಮಣ್ಣಿನ ಪಾತ್ರೆಯಲ್ಲಿ ಚಟ್‌ಹಿಟ್ಟು, ಎಲಗದ ಮರದ ಚಕ್ಕೆಯ ರಸದಿಂದ ಎಲಗದ ಹಿಟ್ಟು, ಗುರುಕಲು ಸೊಪ್ಪಿನಿಂದ ಮಧುಪಾನ, ಹುರುಳಿ ಕಾಳಿನಿಂದ ಸಿಹಿ ಕಚ್ಚಡಿ, ಮೊಸರುಪಾನ, ನೀರುದೋಸೆ, ಮೆಂತ್ಯದ ಹಿಟ್ಟು, ಮೆಂತ್ಯದ ಪುಡಿ ಮೊದಲಾದವು ಇವರ ವಿಶಿಷ್ಟ ಅಡುಗೆಗಳೆನ್ನಬಹುದು. ತರಕಾರಿಗಳಲ್ಲಿ ಸೌತೆಕಾಯಿ, ಹೀರೆಕಾಯಿ, ಕುಂಬಳಕಾಯಿ, ಸುಗ್ಗೆ, ಬಾಳೆ, ತೊಂಡೆ, ಬೆಂಡೆ, ಹಾಗಲ ಇವುಗಳನ್ನು ಬೆಳೆದು ಬಳಸುವರು. ಮಳೆಗಾಲಕ್ಕೆಂದು ಸೌತೆಕಾಯಿ ಕುಂಬಳಕಾಯಿಗಳನ್ನು ಅಟ್ಟದ ಮೇಲೆ ತೊಲೆಗೆ ಕಟ್ಟುವರು. ಹಾಗಲಕಾಯಿ ಬದನೆಕಾಯಿ

ಗಳನ್ನು ಉಪ್ಪು ಹಾಕಿ ಒಣಗಿಸಿಟ್ಟುಕೊಂಡು ಬೇಕಾದಾಗ ಉಪಯೋಗಿಸುವರು. ಈ ಸಮುದಾಯದ ಮೆಚ್ಚಿನ ಸಾರುಗಳಲ್ಲಿ ಕೆಸುವಿನ ಗಂಟಿನ ಸಾರೂ ಒಂದು.

ಒಕ್ಕಲಿಗರಿಗೆ ಮಾಂಸಾಹಾರ ಪ್ರಿಯವಾದುದು ವಿದಿತ. ಇದಕ್ಕೆ ಈ ಸಮುದಾಯವೂ ಹೊರತಲ್ಲ. ಶಿಕಾರಿಯಲ್ಲಿ ಯಥೇಚ್ಛವಾಗಿ ಮಾಂಸ ದೊರೆತರೆ ಅದಕ್ಕೆ ಉಪ್ಪು ಹಾಕಿ ಬಿಸಿಲಿನಲ್ಲಿ ಒಣಗಿಸಿ ಡಬ್ಬದಲ್ಲಿ ತುಂಬಿಟ್ಟುಕೊಂಡು ಬಳಸುವರು. ಇದೇ ರೀತಿ ಸಿಗಡಿ ಮೀನು, ಕರಿಮೀನು ಮೊದಲಾದವನ್ನು ಒಣಗಿಸಿ ಸಂಗ್ರಹಿಸಿಡುವರು. ಒಟ್ಟಾರೆ ಇವರ ಅಡುಗೆಗಳು ಇತರ ಭಾಗದ ಒಕ್ಕಲಿಗರಿಗಿಂತ ಭಿನ್ನ. ಇವರ ಆಹಾರದಲ್ಲಿ ಅಕ್ಕಿ ಪ್ರಧಾನ ಪಾತ್ರ ವಹಿಸುತ್ತದೆ. ಹಾಲು, ಮೊಸರು, ತುಪ್ಪವನ್ನು ಧಾರಾಳವಾಗಿ ಬಳಸಿದರೂ ಎಣ್ಣೆಯಲ್ಲಿ ಕರಿದ ತಿನಿಸುಗಳಿಗಿಂತ ಆವಿಯಲ್ಲಿ ಬೇಯಿಸುವ ಅಡುಗೆಗೆ ಹಿಂದಿನವರು ಪ್ರಾಮುಖ್ಯತೆ ನೀಡಿದ್ದನ್ನು ಗಮನಿಸಬಹುದು. ಹಾಗಾಗಿ ಪಾಕ ವಿಧಾನದಲ್ಲಿ ಕೊಬ್ಬಿನ ಅಂಶ ಮಿತಗೊಂಡಿದೆ. ಇವರ ಅಡುಗೆಗಳು ಸರಳವೂ ರುಚಿಕರವೂ ಆಗಿರುವುದಲ್ಲದೆ ಇಲ್ಲಿನ ಪರಿಸರಕ್ಕೆ ಅನುಗುಣವಾಗಿದೆ.

## ಉಡುಗೆ - ತೊಡುಗೆ

ಮಲೆನಾಡು ಒಕ್ಕಲಿಗರ ವೇಷಭೂಷಣಗಳು ಒಂದು ಕಾಲದಲ್ಲಿ ವಿಶಿಷ್ಟವಾಗಿದ್ದವು. ಇದನ್ನು ನೋಡಬೇಕಾದರೆ ವೃದ್ಧರಲ್ಲಿಗೆ ಹೋಗಬೇಕು. ಆಧುನಿಕ ಪೀಳಿಗೆಯವರ ಉಡುಗೆ ತೊಡುಗೆಗಳು ಇಂದಿನ ಫ್ಯಾಶನ್ ಜಗತ್ತಿಗೆ ಸಂಗತವಾಗಿವೆ. ಹಿಂದೆ ಮಹಿಳೆಯರು ಮುಂದಕ್ಕೆ ನೆರಿಗೆ ಹಿಡಿದು ಕೊಡವರಂತೆ ಸೆರಗು ಹಾಕುತ್ತಿದ್ದರು. ಇದಕ್ಕೆ 'ಗೌಟಿಕೆ ಕಟ್ಟುವುದು' ಎನ್ನುವರು. ಈ ಸೀರೆಗೆ ತುಂಬು ತೋಳಿನ ರವಿಕೆ, ಹಣೆಯಲ್ಲಿ ಕುಂಕುಮ, ಕೊರಳಿಗೆ ಸರ, ಕೈಗೆ ಕಡಗ, ಕೂದಲನ್ನು ಜೋಡಿಸಿ ಸುತ್ತಿದ ಸಡಿಲವಾದ ಗಂಟು, ತಲೆಗೆ ಬಟ್ಟೆ ಕಟ್ಟುತ್ತಿದ್ದರು. ಮದುವೆ ಮನೆಗೆ ಹೋಗುವಾಗ ಅಥವಾ ಬಂಧುಗಳ ಊರಿಗೆ ಭೇಟಿ ನೀಡುವಾಗ ತಲೆಗೆ ಕಟ್ಟುವ 'ತಲೆವರಿಬೆ' ರೇಶಿಮೆಯದಾಗಿರುತ್ತಿತ್ತು. ಹೆಂಗಸರು ಗದ್ದೆ ತೋಟಗಳಿಗೆ ಹೋಗುವಾಗ ಸೊಂಟಕ್ಕೆ ಒಂದು ಪೀಚುಕತ್ತಿಯನ್ನು ಸಿಕ್ಕಿಸಿಕೊಳ್ಳುತ್ತಿದ್ದರು. ಹೆಣ್ಣು ಸ್ವರಕ್ಷಣೆಗಾಗಿ ಇದನ್ನು ಇಟ್ಟುಕೊಳ್ಳುತ್ತಿರಬಹುದು.

ಪುರುಷರು ಹಿಂದೆ ಕಂಬಳಿ ಕಟ್ಟಿಕೊಂಡು ತುಂಡು ಪಂಚೆ ಉಡುತ್ತಿದ್ದರು. ಈಗ ಕೃಷಿ ಕೆಲಸ ಮಾಡುವಾಗ ಖಾಕಿ ಚಡ್ಡಿ ತೊಡುವುದು ಸಾಮಾನ್ಯ. ಇದು ಬ್ರಿಟಿಷರು ಬಿಟ್ಟು ಹೋದ ಕಾರ್ಮಿಕ ಉಡುಗೆಯ ಪ್ರಭಾವವಿರಬೇಕು. ಮದುವೆ, ಬಂಧುಗಳ ಊರಿಗೆ ಹೋಗುವಾಗ ಬಿಳಿಯ ಪಂಚೆ, ಅಂಗಿ ಮತ್ತು ಕೋಟು ಇವರ ವಸ್ತ್ರಾಲಂಕಾರ. ಮಧ್ಯಮ ವರ್ಗ ಮತ್ತು ಶ್ರೀಮಂತ ವರ್ಗದ ಪುರುಷರು ಸಾಮಾನ್ಯ ದಿನಗಳಲ್ಲಿ ಪಂಚೆ, ತುಂಬುತೋಳಿನ ಅಂಗಿ (ಷರ್ಟ್) ಹಾಕಿಕೊಳ್ಳುವರು. ಕಿವಿಗೆ ಒಂಟಿ, ಕೈಗೆ ಸಲಿಗೆ, ಕಿವಿಯ ಅಂಗಿ (ಷರ್ಟ್) ಹಾಕಿಕೊಳ್ಳುವರು. ಕಿವಿಯ ಮೇಲುಭಾಗಕ್ಕೆ ಬಾವುಲಿ ಮುರ ಧರಿಸುವರು. ಇದರೊಂದಿಗೆ ಮದುಮಗನ ಕೊರಳಿಗೆ ತಳುಕಿನ ಸರ, ಕಾಸಿನ ಸರ ಬಾಜಿ ಬಂದು ಇವೇ ಮುಂತಾದ ಆಭರಣಗಳಿಂದ ಸಿಂಗರಿಸುತ್ತಾರೆ.

ಸ್ತ್ರೀಯರು ಕಟ್ಟಾಣಿ ಅಡ್ಡಿಕೆ ಗುಂಡಿನ ಸರಗಳನ್ನು ವಿಶೇಷ ಸಂದರ್ಭದಲ್ಲಿ ಧರಿಸುತ್ತಾರೆ. ಹಿಂದಿನ ಕಾಲದಲ್ಲಿ ಕೈಗೆ ಹಿಂಬಳೆ, ಶಿವನ ಕಡಗ, ಕಾಲಿಗೆ ಕಾಲ್ಗಡಗ, ಗೆಜ್ಜೆ, ಪಾಗಡೆ, ಜಲ್ಲಿ ಸರ, ಉತ್ತರಾಜಿ ಓಲೆ, ಬುಗುಡಿ ಬಾವುಲಿ, ಲವಂಗ ಮೊಗ್ಗು, ಕೊಪ್ಪು, ಚಿಂತಾಕ, ಬಂದಿ, ಸಣ್ಣ ಗುಂಡು, ಉಂಗುರ, ಬಳೆ, ಕಾಲಿನ ಮಿಂಚು, ಸುತ್ತು ಉಂಗುರ, ಸೊಂಟದ ಡಾಬು, ಜಡೆ ಕುಪ್ಪಿಗೆ, ಜಡೆ ಹೂವು, ಚೌಲಿ ಕುಪ್ಪಿಗೆ, ಕೇದಿಗೆ, ಬೈತಲೆ ಬಟ್ಟು ಮೊದಲಾದವನ್ನು ಆಭರಣವಾಗಿ ಉಪಯೋಗಿಸುತ್ತಾರೆ. ಮಕ್ಕಳಿಗೆ ಕೈ ಕಪ್ಪ, ಉಂಗುರ, ಸರ, ಕಟ್ಟೆತಾಳಿ, ಹುಲಿಯುಗುರು, ಪದಕವಿರುವ ಸರ ಇವೇ ಮೊದಲಾದ ಆಭರಣಗಳನ್ನು ಹಾಕಿ ಸಂತೋಷಪಡುತ್ತಿದ್ದರು.

## ಭಾಷೆ ಮತ್ತು ಸಾಹಿತ್ಯ

ಮಲೆನಾಡು ಶೈವ ಒಕ್ಕಲಿಗರು ಆಡುವ ಭಾಷೆ ಕನ್ನಡ ಭಾಷೆಯಾದರೂ ದಕ್ಷಿಣ ಕನ್ನಡ ಜಿಲ್ಲೆಯ ಗೌಡರಂತೆ ತಮ್ಮದೇ ಆದ ಉಪಭಾಷೆಯನ್ನು ಹೊಂದಿಲ್ಲ. ಇವರ ಭಾಷೆ ಮತ್ತು ಉಚ್ಚಾರಣೆಯಲ್ಲಿ ಮಲೆನಾಡು ಭಾಗದ ಪ್ರಾದೇಶಿಕ ಕನ್ನಡದ ಸೊಗಡನ್ನೇ ಗುರುತಿಸಬಹುದು. ಸಕಲೇಶಪುರ ಭಾಗದಲ್ಲಿ ವ್ಯಂಜನ ಧ್ವನಿಮಾಗಳಲ್ಲಿ ಕಕಾರ ಚಕಾರವಾಗಿ ತಾಲವ್ಯೀಕರಣಗೊಂಡಿರುವುದನ್ನು ಗುರುತಿಸಬಹುದು. ಉದಾ : ಕೆರೆ = ಚೆರೆ, ಕೆಂಪು = ಚೆಂಪು ಇತ್ಯಾದಿ. 'ಸ'ಕಾರ 'ಚ'ಕಾರವಾಗಿ ಮಾರ್ಪಾಟಾಗಿರುವ ವಿರಳ ಶಬ್ದಗಳಿವೆ. ಉದಾ : ಸೌತೇಕಾಯಿ = ಚೌತೇಕಾಯಿ. ದ್ವಿತ್ವಕ್ಕೆ ಪ್ರತಿಯಾಗಿ ಬಿಂದು ಸೇರಿಸಿ ಉಚ್ಚಾರಣೆ ಸುಲಭಗೊಳಿಸಿಕೊಳ್ಳುವುದುಂಟು. ಉದಾ : ಗೆಡ್ಡೆ = ಗೆಂಡೆ, ಮತ್ತೆ = ಮಂತೆ, ಹಿತ್ತಿಲು = ಹಿಂತಲು ಇತ್ಯಾದಿ. ಇತರ ಭಾಗದ ಒಕ್ಕಲಿಗರಲ್ಲಿ ಬಳಕೆಯಲ್ಲಿಲ್ಲದ ಕೆಲವು ಶಬ್ದಗಳು ಇವರ ಆಡು ನುಡಿಯಲ್ಲಿ ಕಂಡುಬರುತ್ತವೆ. ಉದಾಹರಣೆಗೆ : ಪೆಟಗೂಲು (ಪದೇ ಪದೇ), ಇಮ್ಮಡಿಸು (ಮಡಿಸು), ಅಡ್ತಿ (ಕೆಳಗೆ) ಪಾಯ (ಚೆನ್ನಾಗಿ), ಪಾಟ (ರೂಢಿ), ಮುಟ (ವರೆಗೆ), ಕೌರು (ವಾಸನೆ), ಜಂಬ್ರ (ಗುಟ್ಟು), ಜೊಳ (ಹಗ್ಗ) - ಹೀಗೆ ಅನೇಕ ಶಬ್ದಗಳನ್ನು ನಿದರ್ಶನವಾಗಿ ನೀಡಬಹುದು.

ಜನಪದ ಸಾಹಿತ್ಯಿಕ ಬಗೆಗಳಾದ ಕಥೆ, ಗೀತೆ ಭಾಷಿಕ ಬಗೆಗಳಾದ ಒಗಟು ಗಾದೆಗಳು ಪ್ರಕೃತ ಒಕ್ಕಲಿಗ ಸಮುದಾಯಕ್ಕೂ ಹೊರತೇನಲ್ಲ. ಸಂಕ್ರಮಣ ಸ್ಥಿತಿಯಲ್ಲಿರುವ ಈ ಸಮಾಜದಲ್ಲಿ ಸಂಪ್ರದಾಯಗಳು ಮುಕ್ಕಾಗದಂತೆ ಉಳಿದಿದ್ದರೂ ಪರಂಪರಾನುಗತವಾಗಿ ಬಂದಂತಹ ಜನಪದ ಸಾಹಿತ್ಯ ಕಣ್ಮರೆಯಾಗುತ್ತಿದೆ. ಆಧುನಿಕ ಪೀಳಿಗೆಯವರಿಗೆ ಇವರಲ್ಲಿ ಆಸಕ್ತಿ ಕಡಿಮೆ. ಹಿರಿಯ ವರ್ಗದ ಪುರುಷರು ಕೋಲಾಟದ ಪದಗಳು, ಕಾಕು ಪದಗಳು, ಬಂಡಿ ಪದಗಳು, ಸುಗ್ಗಿ ಹಬ್ಬದ ಹಾಡುಗಳು ಮೊದಲಾದವುಗಳನ್ನು ಹಾಡುತ್ತಾರೆ. ಮಹಿಳೆಯರಲ್ಲಿ ಸೋಬಾನೆ ಹಾಡುಗಳು ಜೀವಂತವಾಗಿವೆ. ವಿಶೇಷ ಸಂದರ್ಭಗಳಲ್ಲಿ ಹರಿಜನರನ್ನು ಕರೆಸಿ ಹಾಡುತ್ತಾರೆ. ಈ ಸಮುದಾಯದಲ್ಲಿ ತಕ್ಕಮಟ್ಟಿಗೆ ಚಲಾವಣೆಯಲ್ಲಿರುವ ಪ್ರಕಾರಗಳೆಂದರೆ ಗಾದೆ ಮತ್ತು ಒಗಟು. ಅನುಭವದ ಗಣಿಗಳಾದ ಗಾದೆಗಳನ್ನು ದೈನಂದಿನ ಮಾತುಕತೆಯಲ್ಲಿ ಸಂದರ್ಭಾನುಸಾರವಾಗಿ ಬಳಸುವರು. ಇವರಲ್ಲಿ ಪ್ರಚಲಿತವಿರುವ ಕೆಲವು ಗಾದೆಗಳು ಇಂತಿವೆ - 'ಕೆಸ ಕುಯ್ದಿರಬೇಕು ಸೊನೆ ಬಿಯ್ದಿರಬೇಕು', 'ಬಸವಿ ಮನೆ ಊಟ

ಬಾಡಿಗೆ ಮನೆ ಕೊಟ್ಟ', 'ಹಂದಿ ಹಾಳು ಗೆರೆ ಉತ್ತ್ಯಂಗೆ', 'ಸೊಸೆ ಬಂದು ಜೆಸ್ಗೆ ಮೇಲೆ ಕೂತ್ಳು' 'ಬಾಳೋರ್ ಹೊಟ್ಟೇಲಿ ಬೊಗಳೊ ನಾಯಿ ಹುಟ್ಟಿದ', 'ದೀಪ್ರ ಮಕ್ಳು ಗೌಡಿಕೆ ಹಳತರ ಕುಳವಾಡಿಕೆ' ಇತ್ಯಾದಿ ಗಾದೆಗಳು ಇವರ ಸಂಸ್ಕೃತಿಗೆ ಕನ್ನಡಿ ಹಿಡಿಯುತ್ತವೆ.

ಬುದ್ಧಿಗೆ ಕಸರತ್ತು ನೀಡುವ ಒಗಟುಗಳನ್ನು ಬಿಡಿಸುವಲ್ಲಿ ಆಬಾಲ ವೃದ್ಧರಾದಿಯಾಗಿ ಪಾಲ್ಗೊಳ್ಳುವರು. ಜಗಲಿಯಲ್ಲಿ ಗುಂಪಾಗಿ ಕುಳಿತು ಹರಟೆ ಹೊಡೆಯುವಾಗ, ಹತ್ತಾರು ಜನರು ಸೇರಿ ಕೃಷಿ ಕಾರ್ಯಗಳನ್ನು ನಿರ್ವಹಿಸುವಾಗ ಒಗಟುಗಳನ್ನು ಬಿಚ್ಚಿಕೊಳ್ಳುತ್ತವೆ. 'ಬಾವಿಲಿ ಬಟ್ಲು ಆಡುತ್ತೆ' ಎಂಬುದು ತಿಂಗಳ ಮಾವವನ್ನು ಕುರಿತ ಒಗಟು. 'ಒಂದು ಮುದುಕಿಗೆ ಒಕ್ಕು ಕೊರೆಮೀನು' (ಹಲಸಿನ ಹಣ್ಣು) 'ಚಿಕ್ ಮನೇಲಿ ಚಕ್ಕೆ ತುಂಬ್ಯಾರೆ' (ಹಲ್ಲು), 'ಮನೆ ಮೇಲೆ ಮನೆ ಕಟ್ಟಿ, ಮಂಡೆರಾಯನ ಗುಡಿ ಕಟ್ಟಿ, ಕೊಮ್ಮೆ ಮೆಲೆ ಕೂತಾನೆ ಕೊಮಾರ್ ಶೆಟ್ಟಿ, (ಜೇನು ಪೆಟ್ಟಿಗೆ), 'ಕೆಳ ಗದ್ದೇಲಿ ನೀರು ಮೇಲ ಗದ್ದೇಲಿ ಹೆಂಟೆ (ಕಡುಬಿನ ಕಳಸಿಗೆ), 'ಒಬ್ಬಣ್ಣ ಹತ್ತ್ತಾನೆ ಒಬ್ಬಣ್ಣ ಇಳೀತಾನೆ (ರೊಟ್ಟಿ) ಮೊದಲಾದ ಒಗಟುಗಳನ್ನು ನಿದರ್ಶನವಾಗಿ ಕೊಡಬಹುದು.

## ಉಪಸಂಹಾರ

ಮಲೆನಾಡು ಕರ್ನಾಟಕದ ಈ ಸಮುದಾಯದ ಜನನದಿಂದ ಮರಣದ ವರೆಗಿನ ವಿವಿಧ ಘಟ್ಟಗಳನ್ನು ಪ್ರಚಲಿತವಿರುವ ಸಂಪ್ರದಾಯಗಳು ವೈಶಿಷ್ಟ್ಯಪೂರ್ಣವಾಗಿದ್ದು ಕೃಷಿ ಸಂಸ್ಕೃತಿಯನ್ನು ಪ್ರತಿಬಿಂಬಿಸುವುದನ್ನು ಮೇಲಿನ ಅಧ್ಯಯನದಿಂದ ತಿಳಿಯಬಹುದು. ಇವರ ಸಂಪ್ರದಾಯಗಳ ಪ್ರಭಾವ ಅವರು ನೆಲೆಸಿರುವ ಪರಿಸರದ ಇತರ ಸಮುದಾಯದ ಮೇಲೂ ಆಗಿದೆ. ಕರ್ನಾಟಕದ ಬೇರಾವ ಒಕ್ಕಲಿಗರಲ್ಲಿ ಕಾಣಸಿಗದ ಸುಗ್ಗಿಹಬ್ಬವು ಈ ಸಮಾಜದ ಅನನ್ಯತೆಯಾಗಿದೆ.

# ಗಂಗಡಿಕಾರ ಒಕ್ಕಲಿಗರು - ಒಂದು ಸಮೀಕ್ಷೆ

ಡಾ. ನಲ್ಲೂರು ಪ್ರಸಾದ್

ಕರ್ನಾಟಕದ ಒಕ್ಕಲಿಗರಲ್ಲಿ 'ಗಂಗಡಿಕಾರ'ರದು ಪ್ರಧಾನ ಪಂಗಡ. ಒಕ್ಕಲುತನವನ್ನೇ ಪ್ರಧಾನ ಕಸುಬಾಗಿ ಮಾಡಿಕೊಂಡು ಬಂದಿರುವ ಈ ಒಳಪಂಗಡದ ಹೆಸರಿನ ಉಲ್ಲೇಖವನ್ನು ಹಲವಾರು ವಿದ್ವಾಂಸರು ಮಾಡುತ್ತಾ ಬಂದಿರುವರಾದರೂ, ಉಳಿದ ಒಳಪಂಗಡಗಳಿಗೂ 'ಗಂಗಡಿಕಾರ' ಪಂಗಡಕ್ಕೂ ಜೀವನ ವಿಧಾನದಲ್ಲಿ ಇರುವ ವ್ಯತ್ಯಾಸವನ್ನು ಸ್ಪಷ್ಟವಾಗಿ ಗುರುತಿಸುವ ಸಾಹಸಕ್ಕೆ ಯಾರೂ ಕೈ ಹಚ್ಚಿಲ್ಲ. ಗಂಗಡಿಕಾರರನ್ನು ಕರ್ನಾಟಕದ ಕೆಲವು ಭಾಗಗಳಲ್ಲಿ ಗಂಗಟಿಕಾರ, ಗಂಗಟಕಾರ, ಗೊಂಗ್ಡಿಕಾರ, ಮುಳ್ಳಜನ, ಆನೆಯವರು ಎಂದು ಕರೆಯುವ ರೂಢಿಯಿದೆಯಾದರೂ ಅದಕ್ಕೆ ಕಾರಣವಾಗುವ ಅಂಶಗಳನ್ನು ಕುರಿತ ಹೆಚ್ಚಿನ ಚರ್ಚೆ ನಡೆದಿಲ್ಲ. ವಿದ್ವಾಂಸರು ಗುರುತಿಸುವಂತೆ ಗಂಗಡಿಕಾರರು, ಕರ್ನಾಟಕದಲ್ಲಿ ಬಹುಸಂಖ್ಯಾತರೆನ್ನುವುದು ನಿಜ ಮತ್ತು 'ಪ್ರಬಲರು' ಎನ್ನುವುದು ಬಹುಮಟ್ಟಿಗೆ ನಿಜ. ಕರ್ನಾಟಕದ ಜಾತಿಗಳ ಅಧ್ಯಯನದಲ್ಲಿ ಒಂದು ಹೊಸ ಶಾಖೆಯನ್ನು ಆರಂಭಿಸಲು ಕಾರಣವಾದ ಅನಂತ ಕೃಷ್ಣ ಅಯ್ಯರ್ ಅವರ THE MYSORE TRIBES AND CASTES ಗ್ರಂಥದಲ್ಲಿ ಒಕ್ಕಲಿಗ ಜನಾಂಗವನ್ನು ಕುರಿತು ಸುದೀರ್ಘವಾದ ಚರ್ಚೆಯನ್ನು ನಡೆಸಿದ್ದಾರೆ. ಇದು ಬಹುಮಟ್ಟಿಗೆ ಗಂಗಡಿಕಾರ ಪಂಗಡಕ್ಕೆ ಅನ್ವಯವಾಗಿರುವಂತಿರುವುದರಿಂದ, ಗಂಗಡಿಕಾರರು ಯಾರು? ಎನ್ನುವುದನ್ನು ಖಚಿತ ಪಡಿಸಿಕೊಳ್ಳಲು ಆ ಶಬ್ದದ ಮೂಲಾರ್ಥವನ್ನು ಶೋಧಿಸಿಕೊಳ್ಳುವುದು ಮೊದಲ ಅಗತ್ಯವಾಗಿ ಕಂಡುಬರುತ್ತದೆ.

## ಪದ ನಿಷ್ಪತ್ತಿ

'ಗಂಗಡಿಕಾರ' ಶಬ್ದದ ನಿಷ್ಪತ್ತಿಯನ್ನು ಕುರಿತಂತೆ ಇದುವರೆಗೆ ಹಲವಾರು ವಿದ್ವಾಂಸರು ಚರ್ಚೆ ನಡೆಸಿದ್ದಾರೆ. ಆದರೆ ಅವರ ಚರ್ಚೆಯಲ್ಲಿ ಒಮ್ಮತವಿಲ್ಲ. ಅವರ ಚರ್ಚೆಯ ಸ್ವರೂಪವನ್ನು ಮೊದಲು ಗ್ರಹಿಸಿ ಅವುಗಳಲ್ಲಿ ಸ್ವೀಕಾರಯೋಗ್ಯವಾದದ್ದು ಯಾವುದು? ಎನ್ನುವುದನ್ನು ತೀರ್ಮಾನಿಸಿ ಒಂದು ಅಭಿಪ್ರಾಯವನ್ನು ರೂಪಿಸಿಕೊಳ್ಳುವುದು ಅಗತ್ಯವಾಗಿದೆ.

'ಗಂಗಡಿಕಾರ' ಶಬ್ದಕ್ಕೆ ಕಿಟ್ಟೆಲ್ ತಮ್ಮ ನಿಘಂಟಿನಲ್ಲಿ A Man of the lowest Caste (of the four), A respectable Sudra ಎನ್ನುವ ವಿವರಣೆಯನ್ನು ನೀಡಿ 'ಗಂಗಡಿಕಾರ ವೊಕ್ಕಲಿಗ'ದ

ಪದ ಪ್ರಯೋಗವನ್ನು ಉಲ್ಲೇಖಿಸಿದ್ದಾರೆ. ಈ ಅರ್ಥ ವಿವರಣೆಯಂತೆ 'ಗಂಗಡಿಕಾರ' ವರ್ಣಾಶ್ರಮ ಧರ್ಮದನ್ವಯ ರೂಪುಗೊಂಡ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಲ್ಲಿ ಕಡೆಯವನು ಮತ್ತು ಗಂಗಡಿಕಾರರು ಶೂದ್ರರಲ್ಲಿ ಗೌರವಾನ್ವಿತರಾದವರು. ಕಿಟ್ಟೆಲ್‌ರ ಅರ್ಥ ವಿವರಣೆಯನ್ನು ಸಮರ್ಥಿಸಬಹುದಾದ ಒಂದು ಉಲ್ಲೇಖ ಮಂಗರಾಜನ 'ಅಭಿನವಾಭಿದಾನಂ' ಕೃತಿಯಲ್ಲಿ ಬರುತ್ತದೆ. ಅವನು ಹೇಳುವಂತೆ:

> ನೆರೆ ಪಂಚಮಂ ವದ್ಯನಕ್ಕು ಸಾದಂ, ವೃಷಲ
> ನರೆ ಕುಂಚಡಿಗನವದ್ಯಂ ಗಾವಣಿಗನಂತ್ಯ
> ನರೆಯೆ 'ಗಂಗಡಿಕಾರನ ಕ್ರಮನಭೀರನೆಂದೆನೆ ಮಹಾ ಶೂದ್ರನಕ್ಕುಂ'

ಅಂದರೆ ಗಂಗಡಿಕಾರ ಶೂದ್ರನಾದರೂ ಆ ವರ್ಗದಲ್ಲಿ ಮಹಾಶೂದ್ರನೆಂದು ಕರೆಸಿಕೊಳ್ಳುವಷ್ಟರ ಮಟ್ಟಿಗೆ ಸಾಮಾಜಿಕ ಪ್ರತಿಷ್ಠೆಯನ್ನು ಹೊಂದಿದ್ದವನೆನ್ನುವ ಅರ್ಥ ಈ ಮಾತಿನಲ್ಲಿ ಪ್ರತಿಪಾದಿತ ವಾಗುತ್ತದೆ. ಇದೇ ಮಂಗರಾಜ ವೃತ್ತಿ ವಿಚಾರಗಳನ್ನು ತನ್ನ ಕೃತಿಯಲ್ಲಿ ನಿರೂಪಿಸುವಾಗ 'ಒಕ್ಕಲಿಗ' ಶಬ್ದಕ್ಕೆ ಪ್ರತ್ಯೇಕವಾಗಿ ಕೃಷಿಕ, ಕುಟುಂಬಿ, ಕ್ಷೇತ್ರಾಜೀವಿ, ಕರ್ಷಕಂ, ಕೃಷಿಯ ಮಾಳ್ಪೊಕ್ಕಲಿಗಂ ಎಂದು ಹೇಳಿದ್ದಾನಾದರೂ ಅಲ್ಲೆಲ್ಲೂ ಗಂಗಡಿಕಾರ ವೊಕ್ಕಲಿಗ ಎನ್ನುವ ಉಲ್ಲೇಖವಿಲ್ಲದಿರುವುದು ಮತ್ತು ಈ ಮೇಲೆ ಉಲ್ಲೇಖಿಸಲಾಗಿರುವ ಪದ್ಯದಲ್ಲಿಯೂ ಗಂಗಡಿಕಾರ ಪದದ ಪ್ರಯೋಗದೊಂದಿಗೆ ಒಕ್ಕಲಿಗ ಶಬ್ದ ಇಲ್ಲದಿರುವುದು ಗಮನಾರ್ಹ. ಈಗ ನಾವು ಗಂಗಡಿಕಾರರನ್ನು ಒಕ್ಕಲಿಗರ ಒಂದು ಒಳ ಪಂಗಡ ವಾಗಿಯೇ ಪರಿಗಣಿಸುತ್ತಿರುವೆವಾದರೂ ಮೂಲತಃ ಅವರು ವ್ಯವಸಾಯಗಾರರಾದ ಒಕ್ಕಲಿಗರಿಗಿಂತ ಬೇರೆ ಇನ್ನೇನಾದರೂ ಆಗಿದ್ದಿರಬಹುದೆಂಬ ಅನುಮಾನ ಹಾಗೆಯೇ ಉಳಿಯುತ್ತದೆ. ಈ ಅನುಮಾನಕ್ಕೆ ಪೂರಕವಾದ ಚರ್ಚೆ ಮುಂದೆ ಬರುತ್ತದೆ. ಎಫಿಗ್ರಾಫಿಯಾ ಕರ್ನಾಟಕದ ೧೪ನೇ ಸಂಪುಟದಲ್ಲಿ 'ಗಂಗಡಿಕಾರ' ಎನ್ನುವುದಕ್ಕೆ ಶಾಸನೋಲ್ಲೇಖಿತವಾದ 'ಗಂಗಡಿ ಕಾರರಲ್ಲಿ ಜನಿಸಿದ ಭೋಗ ಗವುಡ' ಎಂಬ ಸಾಲುಗಳನ್ನು ಕೊಡಲಾಗಿದೆ. ಇಲ್ಲಿ ಕೂಡ 'ಗಂಗಡಿಕಾರ' ಶಬ್ದದ ಜೊತೆಗೆ ಒಕ್ಕಲಿಗ ಎನ್ನುವ ಶಬ್ದ ಬಂದಿಲ್ಲ. ಸದ್ಯಕ್ಕೆ 'ಗಂಗಡಿಕಾರ' ಮತ್ತು 'ಒಕ್ಕಲಿಗ' ಶಬ್ದಗಳ ಸಮಸ್ಯೆಯನ್ನು ಹಾಗೇ ಉಳಿಸಿಕೊಂಡು 'ಗಂಗಡಿಕಾರ' ಶಬ್ದದ ಸೃಷ್ಟಿಯ ಹಿನ್ನೆಲೆಯನ್ನು ಕುರಿತು ಚರ್ಚೆಯೆತ್ತಿಕೊಳ್ಳಬಹುದು.

ಕ್ಷೇತ್ರಕಾರ್ಯ ಸಂದರ್ಭದಲ್ಲಿ ದೊರೆತ ಮಾಹಿತಿಯಂತೆ ಶಿವಪಾರ್ವತಿಯರು ತಾವು ಸೃಷ್ಟಿಸಿದ ಮಕ್ಕಳನ್ನು ಭೂಲೋಕದಲ್ಲಿದ್ದುಕೊಂಡು ವ್ಯವಸಾಯ ವೃತ್ತಿಯಿಂದ ಬದುಕು ನಡೆಸುವಂತೆ ಆದೇಶಿಸಿ ಕಳುಹಿಸಿಕೊಟ್ಟರು. ಅವರು ಅಲ್ಲಿಂದ ಹೊರಡುವ ಮುನ್ನ ವ್ಯವಸಾಯಕ್ಕೆ ಅಗತ್ಯವಾದ ನೀರನ್ನು ಕರುಣಿಸುವಂತೆ ಶಿವಪಾರ್ವತಿಯರಲ್ಲಿ ಮೊರೆಯಿಟ್ಟರು. ಅದಕ್ಕೆ ಶಿವ ಪಾರ್ವತಿಯರು ಮಾತೃ ಸಮಾನಳಾದ ಗಂಗೆಯನ್ನು, ಹುಟ್ಟು, ಸಾವು ವಿವಾಹದಂಥ ಆಚರಣೆಗಳ ಸಂದರ್ಭದಲ್ಲಿ ಭಯ-ಭಕ್ತಿ ಶ್ರದ್ಧೆಗಳಿಂದ ಪೂಜಿಸುವಂತೆಯೂ ಅದರಿಂದ ಒಳಿತಾಗುವುದೆಂದೂ ತಿಳಿಸಿದರು. ಭೂಲೋಕಕ್ಕೆ

ಬಂದ ಆ ಮಕ್ಕಳು ಶಿವಪಾರ್ವತಿಯರ ಮಾತಿನಂತೆ ನಡೆದುಕೊಂಡರು. ಗಂಗೆಯನ್ನು ಪೂಜಿಸಿ ಗಂಗೆಯ ಮಕ್ಕಳೆನಿಸಿಕೊಂಡರು. ಆದ್ದರಿಂದಲೇ ಗಂಗಡಿಕಾರರೆಂದು ಕರೆಯಲ್ಪಟ್ಟರು ಎನ್ನುವ ಸಮರ್ಥನೆಯನ್ನು ಈ ಕಥೆಯಲ್ಲಿ ಕೊಡಲಾಗಿದೆ.

ಇದರಂತೆಯೇ ಗಂಗರಿಗೆ ಸಂಬಂಧಿಸಿದ ಪೌರಾಣಿಕ ಕಥೆಯೊಂದು ಪ್ರಚಲಿತವಿದೆ. ಅದರಂತೆ ಇಕ್ಷ್ವಾಕು ವಂಶದ ಹರಿಶ್ಚಂದ್ರನಿಗೆ ಭರತ ಎನ್ನುವ ಮಗನಿದ್ದ. ಈತನ ಪತ್ನಿ ವಿಜಯ ಮಹಾದೇವಿ. ಪುತ್ರಸಂತಾನಾಪೇಕ್ಷೆಯಿಂದ ಪವಿತ್ರ ಗಂಗೆಯಲ್ಲಿ ಮಿಂದು ಪ್ರಾರ್ಥನೆ ಸಲ್ಲಿಸಿದಳು. ಗಂಗದತ್ತನೆಂಬ ಮಗನನ್ನು ಪಡೆದಳು. ಆತನ ಸಂತತಿಯವರೇ ಗಂಗರು.  ಈ ವಂಶದ ಭಗದತ್ತನೆಂಬುವವನಿಗೆ ಕಳಿಂಗ ದೇಶದ ಪ್ರಭುತ್ವ ದೊರೆಯಿತು. ಈ ರಾಜಮನೆತನದ ಧ್ವಜಲಾಂಛನ ಆನೆ. ಗಂಗರಸರದೂ ಆನೆಯ ಧ್ವಜವೇ. ಈ ಪೌರಾಣಿಕ ಕಥೆ ಗಂಗೆಗೂ ಗಂಗರಸರಿಗೂ ಅವರ ಆನೆಯ ಧ್ವಜಕ್ಕೂ ಇರುವ ಸಂಬಧವನ್ನು ಹತ್ತಿರ ತರುವ ಒಂದು ಸುಂದರ ಕಲ್ಪನೆಯಾಗಿದೆ. ಹೀಗೆಯೇ ದಕ್ಷಿಣದ ಗಂಗೆಯೆಂದೇ ಪರಿಗಣಿತವಾಗಿರುವ ಕಾವೇರಿ ನದಿಯ ನೀರನ್ನು ತಮ್ಮ ಜೀವನೋಪಾಯವಾಗಿರುವ ವ್ಯವಸಾಯಕ್ಕೆ ಬಳಸಿಕೊಳ್ಳುತ್ತಿದ್ದವರನ್ನು ಗಂಗಡಿಕಾರರೆಂದು ಕರೆಯಲಾಗುತ್ತಿತ್ತೆಂಬ ಮತ್ತೊಂದು ಕಥೆ ಇದೆ. ಕಾವೇರಿ ಎಂದರೆ ಗಂಗೆ; ಗಂಗೆಯಿಂದ ಬದುಕುತ್ತಿದ್ದವರು ಗಂಗಡಿಕಾರರು ಎನ್ನುವುದು ಇದರ ಅರ್ಥ. ಈ ತೆರನಾದ ಪುರಾಣಮೂಲವಾದ ಉಲ್ಲೇಖಗಳನ್ನು ಶಬ್ದನಿಷ್ಪತ್ತಿಯ ನಿಖರ ದಾಖಲೆಗಳಾಗಿ ಪರಿಗಣಿಸುವುದು ಸಾಧ್ಯವಿಲ್ಲ.

ಕನ್ನಡನಾಡಿನವರಾದ ಗೌಡ ಜನಾಂಗವನ್ನು ತಮಿಳರು ಕನ್ನಡಿಕಾರ್, ಕನ್ನಡಿಗರ್ ಎಂದು ಕರೆದರು. ಈ ಶಬ್ದಗಳು ಕಾಲಾನಂತರದಲ್ಲಿ ಅಪಭ್ರಂಶಗೊಂಡು ಗಂಗಡಿಕಾರ್ ಎಂದಾಯಿತು (ಎಂ. ಲಕ್ಷ್ಮಣ ರಾವ್ ಬೆಂಗಳೂರು, ಜೂನ್, ೧೯೯೩ ಕನ್ನಡ ಪ್ರಭ). ಇದೊಂದು ದುರ್ಬಲವಾಗಿರುವ ವಾದ ಎನ್ನುವುದರಲ್ಲಿ ಅನುಮಾನವಿಲ್ಲ. ಕನ್ನಡಿಗರನ್ನು ಬೇರೆ ಬೇರೆ ಭಾಷೆಯವರು ಅವರವರ ಸುಲಭ ಉಚ್ಚಾರಣೆಗೆ ನಿಲುಕುವಂತೆ ಕರೆಯುವುದು ಸಾಮಾನ್ಯವೆಂದೇ ಒಪ್ಪಿಕೊಂಡರೂ ಅವರ ಪೈಕಿ ತಮಿಳರೊಬ್ಬರ ಉಚ್ಚಾರಣೆ ಮಾತ್ರ ಗಟ್ಟಿಯಾಗಿ ನಿಂತಿತೆಂದು ಸಾಧಿಸುವ ಬಲವಾದ ಆಧಾರಗಳಿಲ್ಲ. ಒಂದು ಪಕ್ಷ ಈ ಮಾತನ್ನು ಒಪ್ಪಿಕೊಂಡರೂ ಕನ್ನಡನಾಡಿನಲ್ಲಿರುವ ಎಲ್ಲಾ ಜಾತಿಯವರೂ ಕನ್ನಡಿಗಾರ್ -ಗಂಗಡಿಕಾರ್ ಆಗಬೇಕಿತ್ತು. ಇದು ಒಂದೇ ಜಾತಿಗೆ ಸೀಮಿತವಾಗ ಬೇಕಿರಲಿಲ್ಲ ಅಥವಾ ತಮಿಳರು ಇವರನ್ನು ಕನ್ನಡಿಗಾರ್ ಎಂದು ಗುರುತಿಸುವವರೆಗೆ ಇವರಿಗೆ ಸ್ವತಂತ್ರ ಅಸ್ತಿತ್ವವೇ ಇರಲಿಲ್ಲ ಎನ್ನುವುದನ್ನು ಒಪ್ಪಿಕೊಂಡಂತಾಗುತ್ತದೆ.

ಗಂಗಡಿಕಾರ ಎನ್ನುವುದರ ಮೂಲ 'ಗಂಗಳಕಾರ'ದಲ್ಲಿದೆಯೆಂದು ಗುರುತಿಸುವುದಕ್ಕೆ ಹಿನ್ನೆಲೆಯಾದ ಜನಪದ ಕಥೆಯೊಂದಿದೆ. ಇದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಲವಾರು ವ್ಯಕ್ತಿಗಳಿಂದ ಅಲ್ಪ ಸ್ವಲ್ಪ ಬದಲಾವಣೆಯೊಂದಿಗೆ ನಿರೂಪಿತವಾದ ಕಥೆ. ಕಥೆಯ ಸಾರಾಂಶ ಹೀಗಿದೆ: ''ಒಬ್ಬ ಒಕ್ಕಲಿಗನಿಗೆ ಇಬ್ಬರು ಗಂಡುಮಕ್ಕಳು. ಎಂದಿನಂತೆ ಅವರಿಬ್ಬರೂ ಹೊಲ ಉಳುವುದಕ್ಕೆ ಹೋಗಿದ್ದರು. ಊಟದ ಹೊತ್ತಿಗೆ ತಾಯಿ ಬುತ್ತಿ ಹೊತ್ತುಕೊಂಡು ಹೊಲದ ಹತ್ತಿರ ಬಂದಳು.

ಅಮ್ಮ ಊಟದ ತಟ್ಟೆಯಾದ ಗಂಗಳವನ್ನು ತೊಳೆದು ಇಬ್ಬರೆದುರೂ ಒಂದೊಂದನ್ನಿಟ್ಟು ಮುದ್ದೆ-ಸಾರು ಬಡಿಸಿದಳು. ಇನ್ನೇನು ಊಟಕ್ಕೆ ಕೈ ಹಚ್ಚಬೇಕು ಅನ್ನುವಷ್ಟರಲ್ಲಿ ಅದೆಲ್ಲಿಂದಲೋ ಹಾರಿ ಬಂದ ನೊಣಗಳು ಜುಂಯ್ ಎಂದು ಸದ್ದು ಮಾಡುತ್ತಾ ಮುದ್ದೆಯ ಮೇಲೆ ಕುಳಿತವು. ಅಣ್ಣ ತಮ್ಮನನ್ನು ಕುರಿತು ''ಈ ನೊಣಗಳನ್ನು ಓಡಿಸಿ ಬಾ'' ಅಂದ. ತಮ್ಮ ಮೇಲೆದ್ದು ನೊಣ ಓಡಿಸಿಕೊಂಡು ಹೋದ. ಹೋದವನು ಎಷ್ಟು ಹೊತ್ತಾದರೂ ಬರಲಿಲ್ಲ. ಅಣ್ಣ ಗಂಗಳ ಕಾಯುತ್ತ ತಮ್ಮ ಈಗ ಬರಬಹುದು, ಆಗ ಬರಬಹುದು ಎಂದು ಊಟ ಮಾಡದೆ ಹಾಗೇ ಕುಳಿತ. ನೊಣ ಓಡಿಸಲು ಹೋಗಿದ್ದ ತಮ್ಮ ರಾತ್ರಿ ಕಳೆದು ಮಾರನೇ ದಿನ ಬೆಳಗ್ಗೆ ಬಂದ. ರಾತ್ರಿಯೆಲ್ಲ ಮನೆಗೆ ಬರದಿದ್ದ ಕಿರಿ ಮಗ ಎಲ್ಲಿದ್ದನೋ ಏನು ಕಥೆಯೋ ಎಂದು ಭಾವಿಸಿ ಪಂಚಾಯ್ತಿದಾರರನ್ನು ಸೇರಿಸಿ ನ್ಯಾಯ ಮಾಡಿಸಿ ಅವನನ್ನು ಕುಲದಿಂದ ಹೊರಗೆ ಹಾಕಿದರು. ಆಗ ಅಣ್ಣ ತಮ್ಮಂದಿರಲ್ಲೇ ಎರಡು ಪಂಗಡಗಳಾಗಿ, ಗಂಗಳ ಕಾಮುಕೊಂಡು ಕುಳಿತಿದ್ದ ಅಣ್ಣ 'ಗಂಗಳಕಾರ'ನಾದ. ನೊಣ ಓಡಿಸಿಕೊಂಡು ಹೋದ ತಮ್ಮ 'ನೊಣಬ'ನಾದ. ಹೀಗೆ ಒಕ್ಕಲಿಗರಲ್ಲಿ ಎರಡು ಒಳಪಂಗಡಗಳಾದುವು''.

ಮೇಲ್ನೋಟಕ್ಕೆ ಈ ಕಥೆಯಲ್ಲಿ ಶಬ್ದ ಚಮತ್ಕಾರ ತರ್ಕಬದ್ಧವಾದ ಕೆಲಸ ಮಾಡಿದೆಯೆನಿಸಿದರೂ ಒಕ್ಕಲಿಗರ ಎರಡು ಗುಂಪುಗಳಿಗೆ ಸಂಬಂಧಿಸಿದ ಕೆಲವು ಸೂಕ್ಷ್ಮ ವಿಷಯಗಳನ್ನು ಪ್ರಸ್ತಾಪಿಸುವುದರಿಂದ ಇದು ಗಮನಾರ್ಹವೆನಿಸುತ್ತದೆ.

೧. ಗಂಗಡಿಕಾರರು ಮತ್ತು ನೊಣಬರು ಒಂದೇ ಮೂಲದವರು.
೨. ಎರಡು ಗುಂಪುಗಳ ವೃತ್ತಿಯೂ ಬೇಸಾಯವೇ.
೩. ಸಾಮಾಜಿಕ - ಧಾರ್ಮಿಕ ಸ್ಥಿತ್ಯಂತರದಿಂದಾಗಿ ಗಂಗಡಿಕಾರರು ಮತ್ತು ನೊಣಬರು ಬೇರೆ ಬೇರೆಯಾಗಬೇಕಾಯಿತು.

ಗಂಗಡಿಕಾರ ಒಕ್ಕಲಿಗರಲ್ಲಿ ಊಟದ ತಟ್ಟೆಯಾದ, ಕಂಚಿನಿಂದ ಮಾಡಲ್ಪಟ್ಟ ಗಂಗಳಕ್ಕೆ ವಿಶೇಷ ಸ್ಥಾನಮಾನವಿರುವುದೂ ಇಂಥ ಕಥೆಯ ಹುಟ್ಟಿಗೆ ಕಾರಣವಾಗಿರಬಹುದು. ಅವರ ಹಲವಾರು ಆಚರಣೆಗಳಲ್ಲಿ ಗಂಗಳ ಪ್ರಮುಖ ಸ್ಥಾನ ಪಡೆದುಕೊಂಡಿದೆ. ಮಗು ಹುಟ್ಟಿದಾಗ ಗಂಗಳವನ್ನು ಜಾಗಟೆಯಂತೆ ಬಡಿಯುವುದು, ಮಗಳು ಮದುವೆಯಾಗಿ ಗಂಡನ ಮನೆಗೆ ಹೊರಟಾಗ ಹೊಸ್ತಿಲಾಚೆ ನಿಂತು ಮನೆಯ ಒಳ ಭಾಗದಲ್ಲಿರುವ ಗಂಗಳಕ್ಕೆ ಅಕ್ಕಿ ಎರಚಿ ''ನಮ್ಮಪ್ಪನ ಮನೆಗೆ ಒಳ್ಳೆಯದಾಗಲಿ'' ಎಂದು ಹಾರೈಸುವುದು, ವ್ಯಕ್ತಿ ಸತ್ತಾಗ ಎದೆಯ ಮೇಲೆ ಗಂಗಳವನ್ನು ಇಡುವುದು, ಊಟ ಮಾಡುವುದಕ್ಕೆ ಗಂಗಳವನ್ನೇ ಬಳಸುವುದು ಇಂಥ ಆಚರಣೆಗಳಲ್ಲಿ ಗಂಗಳದ ಬಳಕೆ ಎದ್ದು ಕಾಣುವುದಾದರೂ ಇವು ಗಂಗಡಿಕಾರರಿಗಷ್ಟೇ ಸೀಮಿತವಾದವುಗಳೇನೂ ಅಲ್ಲ. ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ, ಆಧುನಿಕ ನಾಗರಿಕತೆಯ ಪ್ರಭಾವದಿಂದ ದೂರ ಉಳಿದಿರುವ ಬೇರೆ ಜಾತಿಯವರಲ್ಲೂ ಈ ಆಚರಣೆಗಳು ಚಾಲ್ತಿಯಲ್ಲಿರುವುದರಿಂದ 'ಗಂಗಳಕಾರ'ನೇ 'ಗಂಗಡಿಕಾರ'ನೆಂದು ಸಾಧಿಸಲಾಗುವುದಿಲ್ಲ. ಆದ್ದರಿಂದ 'ಗಂಗಡಿಕಾರ' ಶಬ್ದವನ್ನು ವಸ್ತುವಾಚಕವಾಗಿ ವಿಶ್ಲೇಷಿಸುವ ಪ್ರಯತ್ನ ದುರ್ಬಲವಾಗಿ ಅದು ಶಬ್ದ ಸಾದೃಶ್ಯ ನಿಷ್ಪತ್ತಿಯಾಗಿಯೇ ಉಳಿದುಬಿಡುತ್ತದೆ.

ಪ್ರದೇಶವಾಚಕವಾಗಿ 'ಗಂಗಡಿಕಾರ' ಶಬ್ದವನ್ನು ವಿಶ್ಲೇಷಿಸಲು ಪ್ರಯತ್ನಿಸಿರುವ ಬಹುಮಂದಿ ವಿದ್ವಾಂಸರು 'ಗಂಗವಾಡಿ'ಯಿಂದ ಗಂಗಡಿಕಾರ ಬಂದಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಅನಂತ ಕೃಷ್ಣ ಅಯ್ಯರ್ ಈ ವಿಚಾರವಾಗಿ '' Gangadikara is the Contraction of Gangavadikara that is a man of the Country ruled by Gangs Kings, a dynasty which flourished in the 10th century A.D. and held sway over Central and the Southern parts of the present Mysore State'' ಎಂದಿದ್ದಾರೆ. ಅಂದರೆ ಅವರ ಅಭಿಪ್ರಾಯದಂತೆ 'ಗಂಗವಾಡಿಕಾರ' ಶಬ್ದದಿಂದ 'ಗಂಗಡಿಕಾರ' ನಿಷ್ಪನ್ನವಾಗಿದೆ ಎಂದಂತಾಯಿತು. E. Thurston ಕೂಡ 'ಗಂಗಡಕಾರ' ಜಾತಿಯ ಬಗ್ಗೆ ಪ್ರಸ್ತಾಪಿಸುತ್ತ ''The name probably refers to Gangavadi. The Country of the Gangas Rayal line which ruled over the greatest part of the modern mysore State'' ಎಂದಿದ್ದಾರೆ.

ಮೇಲಿನ ಎರಡೂ ಹೇಳಿಕೆಗಳಲ್ಲಿ ಸಾಮ್ಯವಿದೆ. ಗಂಗರಸರು ಆಳ್ವಿಕೆ ನಡೆಸುತ್ತಿದ್ದ ಪ್ರದೇಶವನ್ನು 'ಗಂಗವಾಡಿ ತೊಂಬತ್ತಾರು ಸಾವಿರ ಸೀಮೆ' ಎಂದು ಕರೆಯಲಾಗುತ್ತಿತ್ತು. ಇಲ್ಲಿ ವಾಸಿಸುತ್ತಿದ್ದ ಬೇಸಾಯಗಾರರು 'ಗಂಗಡಿಕಾರರು' ಎಂದು ಹೆಸರು ಪಡೆದುಕೊಂಡರೆನ್ನುವುದು ಥರ್ಸ್ಟನ್ ಮತ್ತು ಅನಂತಕೃಷ್ಣ ಅಯ್ಯರ್ ಅವರ ಅಭಿಪ್ರಾಯವಾಗಿದೆ. ದಡಿಗ ಮತ್ತು ಮಾಧವ ಎಂಬ ಇಬ್ಬರು ಸಹೋದರರು ಜೈನಮುನಿ ಸಿಂಹನಂದಿಯ ಆಶೀರ್ವಾದದಿಂದ ಸಾಮ್ರಾಜ್ಯ ಸ್ಥಾಪನೆ ಮಾಡಿದರು. ಅವರ ವಂಶವವರು ಅತಿ ದೀರ್ಘ ಕಾಲದವರೆಗೆ ಕರ್ನಾಟಕದ ಬಹುಭಾಗವನ್ನು ತಮ್ಮ ಆಳ್ವಿಕೆಗೊಳಪಡಿಸಿಕೊಂಡಿದ್ದರು. ಅವರ ಆಳ್ವಿಕೆಯ ಪ್ರದೇಶವನ್ನು ಗಂಗವಾಡಿ ತೊಂಬತ್ತಾರು ಸಾವಿರ ಸೀಮೆ ಎಂದು ಇತಿಹಾಸಕಾರರು ಗುರುತಿಸಿದ್ದಾರೆ. ಈ ಪ್ರದೇಶದಲ್ಲಿ ವಾಸಿಸುತ್ತಿದ್ದವರನ್ನು ಗಂಗವಾಡಿಕಾರ, ಗಂಗಡಿಕಾರ ಎಂದು ಕರೆದಿರಬಹುದೆಂಬ ವಾದವನ್ನು ಸ್ವಲ್ಪಮಟ್ಟಿಗೆ ಒಪ್ಪಿಕೊಳ್ಳಬಹುದಾದರೂ ಇದರ ಜೊತೆಗೆ ಬೇಸಾಯ ವೃತ್ತಿಯನ್ನವಲಂಬಿಸಿದ್ದವರನ್ನು ಅಂದರೆ ಒಕ್ಕಲಿಗರನ್ನು ಮಾತ್ರವೇ ಸೇರಿಸಿಕೊಂಡು 'ಗಂಗಡಿಕಾರ ಒಕ್ಕಲಿಗ' ಎಂದು ಕರೆದುದರ ಔಚಿತ್ಯವೇನು ಎಂಬ ಪ್ರಶ್ನೆಗೆ ಸಮರ್ಪಕ ಉತ್ತರ ದೊರೆಯುವುದಿಲ್ಲ. ಒಂದು ಪಕ್ಷ ಒಕ್ಕಲಿಗರು ತಮ್ಮ ಹೆಸರಿನ ಹಿಂದೆ ತಾವು ಗಂಗವಾಡಿ ಪ್ರದೇಶದವರೆಂದು ಸೂಚಿಸುವ ಸಲುವಾಗಿ ಗಂಗಡಿಕಾರರೆಂದು ಸೇರಿಸಿಕೊಂಡರೆಂಬುದನ್ನು ಒಪ್ಪಿದರೂ ಇವರಂತೆ ಉಳಿದ ಕಸುಬುಗಳನ್ನು ಮಾಡುತ್ತಿದ್ದ ಬೇರೆ ಬೇರೆ ಜಾತಿಯವರೂ ಹಾಗೆಯೇ ತಮ್ಮ ಕಸುಬು ಅಥವಾ ಜಾತಿಯ ಹಿಂದೆ ಗಂಗಡಿಕಾರ ಎಂದು ಸೇರಿಸಿಕೊಂಡು ಗಂಗಡಿಕಾರ ಬೆಸ್ತ ಎಂತಲೋ, ಗಂಗಡಿಕಾರ ಗಾಣಿಗ ಎಂತಲೋ ಗಂಗಡಿಕಾರ ಕುರುಬ ಎಂತಲೋ ಯಾಕೆ ಮಾಡಿಕೊಳ್ಳಲಿಲ್ಲ ಎನ್ನುವ ಅನುಮಾನ ಹಾಗೇ ಉಳಿಯುತ್ತದೆ. ಅಲ್ಲದೆ ಗಂಗವಾಡಿ ಪ್ರದೇಶದವರು ತಾವೆಂದು ಗುರುತಿಸಿಕೊಳ್ಳಲು ಅಲ್ಲಿ ವಾಸಿಸುತ್ತಿದ್ದವರು ಗಂಗಡಿಕಾರ ಎಂದಷ್ಟೇ ಹೇಳಿಕೊಂಡಿದ್ದರೆ ಸಾಕಾಗುತ್ತಿತ್ತಲ್ಲ. ಬೇರಾರಿಗೂ ಇಲ್ಲದ ಇಂಥ ಅಗತ್ಯ ಒಕ್ಕಲಿಗರಿಗಷ್ಟೇ ಬಂದುದಕ್ಕೆ ಕಾರಣವೇನು? ಅಲ್ಲದೆ ತಾವಿಂಥ ಪ್ರದೇಶದವರು ಎಂದು ಹೇಳಿಕೊಳ್ಳುವ ಅಗತ್ಯ

ಬರುವುದು ನಮ್ಮದಲ್ಲದ ಪ್ರದೇಶಕ್ಕೆ ಹೋದಾಗ ಮಾತ್ರ. ಗಂಗಡಿಕಾರರನ್ನು Sons of the Soil ಎಂದೇ ಪರಿಗಣಿಸಲು ಪೂರಕವಾದ ಆಧಾರ ವಿದ್ವಾಂಸರಲ್ಲಿರುವಾಗ ತಮ್ಮ ನೆಲದ ಮೇಲೇ ನಿಂತು ತಾವಿಂಥ ನೆಲದವರು ಎಂದು ಪರಿಚಯಿಸಿಕೊಳ್ಳುವ ಅಗತ್ಯವಾದರೂ ಗಂಗಡಿಕಾರರಿಗೇನಿತ್ತು? ಒಕ್ಕಲಿಗರ ಇನ್ನಿತರ ಒಳಪಂಗಡಗಳಲ್ಲಿ ಒಂದಾದ ಮೊರಸೊಕ್ಕಲಿಗರ ಹೆಸರಿನೊಂದಿಗೆ ಮೊರಸು ನಾಡಿನಿಂದ ಬಂದವರಾದ್ದರಿಂದ ಮೊರಸೊಕ್ಕಲಿಗರು ಎನ್ನುವುದು ಸರಿ. ಅದರಂತೆ ಗಂಗವಾಡಿಯ ಒಕ್ಕಲಿಗರು ಗಂಗವಾಡೊಕ್ಕಲಿಗರು ಎಂದಾಗಬೇಕಿತ್ತು. ಹಾಗಾಗದೆ ಗಂಗವಾಡಿ+ಕಾರ+ಒಕ್ಕಲಿಗ ಇದೆಲ್ಲವೂ ಸೇರಿ ಗಂಗಡಿಕಾರ ಒಕ್ಕಲಿಗ ಎಂದು ರೂಪ ಧರಿಸುವುದು ಅನುಮಾನಕ್ಕೆ ಆಸ್ಪದ ವೀಯುವಂತಿದೆ.

'ಗಂಗಡಿಕಾರ' ಎಂಬುದು ''ಗಂಗವಾಡಿಕಾರ'' ಅಥವಾ ''ಗಂಗವಾಡಿಯವ'' ಎಂಬ ಅರ್ಥ ಕೊಡುತ್ತದೆ. ಈ 'ವಾಡಿ' ಶಬ್ದ ಗಂಗರ ವಾಸ ಸ್ಥಳ. ವಸತಿ ಹಾಗೂ ಅವರ ನಾಡನ್ನು ಸೂಚಿಸುತ್ತದೆ. ರಾಜನುಡಿ ಅರಮನೆ ಎನ್ನುವ ಹಾಗೆ ಇದರಲ್ಲಿ ಗಂಗರು ಎನ್ನುವುದು ನಾಮಪದವೆಂದು ಸ್ಪಷ್ಟವಾಗುತ್ತದೆ. ಈ ವಿಚಾರಕ್ಕೆ ಇಂಬು ಕೊಡಬಹುದಾದ ಪ್ರೊ. ಬಿ. ಷೇಕ್ ಅಲಿ ಅವರ ಮಾತುಗಳು ಉಲ್ಲೇಖನಾರ್ಹ. ''The Founders must have been the sons of the soil. They must have watched local conditions and prepared themselves carefully for striking at the root of the weak political authority existing at the time. They must have prepared the military force and of financial resources. Dadiga and Madava must have belonged to the agricultural population of the state for the territory the ruled was known as Gangavadi a Province of ninety six thousand. The 'Gangadikara's' even know from the largest section of the agricultural population in old Mysore State which their base in Bangalore, Mandya, Mysore and Hassan''.

ಕನ್ನಡ ನಾಡನ್ನು ಆಳಿದ ರಾಜಮನೆತನಗಳಲ್ಲಿ ಗಂಗರೇ ಅತ್ಯಂತ ಪ್ರಾಚೀನರಾದವರು. ರಾಜ ಮನೆತನದವರು ಯಾವುದೇ ವಂಶಕ್ಕೆ ಸೇರಿದವರಾದರೂ ಅವರ ಆಳ್ವಿಕೆಯಲ್ಲಿ ನಾನಾ ಜಾತಿಯ ಮತ್ತು ಸಂಪ್ರದಾಯಗಳ ಜನರಂತೂ ವಾಸಿಸುತ್ತಲೇ ಇರುತ್ತಾರೆ. ಆದರೆ ಅಲ್ಲಿಂದ ಇಲ್ಲಿಯವರೆಗೆ ಉಳಿದ ಯಾವ ಜಾತಿಯವರ ಹೆಸರೂ 'ಗಂಗರು' ಎಂಬುದಾಗಿ ಉಳಿದು ಬರದೆ ಅದು ಒಕ್ಕಲಿಗರ ಒಂದು ಪ್ರಭೇದದೊಡನೆ ಮಾತ್ರ ನಂಟು ಸ್ಥಾಪಿಸಿಕೊಂಡಿದೆ. ಈ ಸಂಬಂಧವಾಗಿ ಮಾಕೋನಹಳ್ಳಿ ದೊಡ್ಡಪ್ಪ ಗೌಡ ಅವರು ವ್ಯಕ್ತಪಡಿಸಿರುವ ಅಭಿಪ್ರಾಯ ಒಕ್ಕಲಿಗರಿಗೂ ಗಂಗಡಿಕಾರ ಶಬ್ದಕ್ಕೂ ಇರುವ ಸಂಬಂಧವನ್ನು ಖಚಿತಪಡಿಸುವಂತಿದೆ. ''ಹಿರಿದಾಗಿ ಬಾಳಿದ ಗಂಗರಸರ ಪೀಳಿಗೆಯವರೇ ಇಂದಿಗೂ ಅದೇ ಹೆಸರಿನಲ್ಲಿ ಉಳಿದು ಬಂದಿರಬಹುದೆಂದು ತೋರುತ್ತದೆ.'' ಈ ವಿಚಾರಕ್ಕೆ ಪೂರಕವಾಗಿರುವ ಎಂ. ವಿ. ಕೃಷ್ಣರಾವ್ ಅವರ ಅಭಿಪ್ರಾಯ ಉಲ್ಲೇಖನೀಯ. ''The Gangas

were one of the most illustration who ruled over the greater part of the Mysore Country then know by the wellnigh forgotten name Gangavadi whcih survives only designation of a Community of Mysore people known to this day as the Gangadikara Vokkaligas''.

ಈ ವಿಚಾರಗಳಿಗೆ ಪೋಷಕವಾಗಬಹುದಾದ ಅಭಿಪ್ರಾಯಗಳನ್ನು ಲೂಯಿರೈಸ್ ಅವರು ವ್ಯಕ್ತ ಪಡಿಸಿದ್ದಾರೆ. ''The Gangadikars and Nonamba Wakkaligas doubtless the repre sentatives of the indiginous tribes who formed the subjects of Gangawadi and Nonambawadi Provinces''

ಗಂಗಡಿಕಾರ ಒಕ್ಕಲಿಗರನ್ನು ಹಾಸನ ಜಿಲ್ಲೆಯ ಕೆಲವು ಪ್ರದೇಶದಲ್ಲಿ 'ಮುಳ್ಳುಜನ' ಮುಳ್ಳೊಕ್ಕಲಿಗರು ಎಂದು ಕರೆಯುತ್ತಾರೆ. ಬಹುಶಃ ಇದಕ್ಕೆ ಕಾರಣ ಮೂಲತಃ ಶೈವ ಪಂಥೀಯರಾಗಿದ್ದ ಗಂಗಡಿಕಾರರ ಮೇಲೆ ರಾಮಾನುಜಾಚಾರ್ಯರಿಂದಾಗಿ ವೈಷ್ಣವ ಪಂಥದ ಪ್ರಭಾವವೂ ವ್ಯಾಪಕವಾಗಿ ಆಯಿತು. ಕೆಲವರು ಗಂಗಡಿಕಾರರಲ್ಲೇ ಹೊಸ ಪಂಥದತ್ತ ಆಕರ್ಷಿತರಾದದ್ದೂ ಉಂಟು. ಆದರೆ ಮೂಲತಃ ಜಿಗುಟು ಸ್ವಭಾವದವರಾಗಿದ್ದ ಕೆಲವರು ಹೊಸ ಪ್ರಭಾವಕ್ಕೆ ಮಣಿಯದೆ ಮೊದಲಿನಂತೆಯೇ ತಮ್ಮನ್ನು ಉಳಿಸಿಕೊಂಡರು. ಹಾಗಾಗಿ ಬೇರೆಯವರ ದೃಷ್ಟಿಯಲ್ಲಿ ಅವರು ಬದಲಾಗದೆ ಉಳಿದ 'ಮೂಲಜನ' ಆದರು. 'ಮೂಲಜನ ಎನ್ನುವುದೇ ಬಳಕೆ ಮಾತಿನಲ್ಲಿ ''ಮುಳ್ಳುಜನ'' ಆಯಿತು. ಹಾಗೆಯೇ ವೈಷ್ಣವ ಪಂಥದ ಆಚರಣೆಗೆ ಮನಸ್ಸು ತೆತ್ತ ದಾಸೊಕ್ಕಲಿಗರ ಬಗೆಗೆ ಮೂಲಜನರಿಂದ ಗಂಗಡಿಕಾರರು ಸ್ವಲ್ಪ ಮಟ್ಟಿಗೆ ಕಹಿಯನ್ನುಳಿಸಿಕೊಂಡಿದ್ದರೆ ಆಶ್ಚರ್ಯವಿಲ್ಲ. ತಮ್ಮೊಡನೆಯೇ ಇದ್ದವರು ಈಗ ತಮಗಿಂತ ಭಿನ್ನವಾದ ಆಚರಣೆಗಳಲ್ಲಿ ನಿರತರಾಗಿರುವುದನ್ನು ಕಂಡು ಅವರನ್ನು ಛೇಡಿಸಿರುವ, ಅಪಹಾಸ್ಯ ಮಾಡಿರುವ, ಹಗುರವಾಗಿ ಕಿರುಕುಳ ನೀಡಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಮತಾಂತರಗೊಂಡವರ ವಿಚಾರದಲ್ಲಿ ಇಂದಿಗೂ ಸಮಾಜ ಹೇಗೆ ನಡೆದು ಕೊಳ್ಳುತ್ತದೆನ್ನುವ ವಿಚಾರದ ಹಿನ್ನೆಲೆಯಲ್ಲಿ ಇಂಥ ನಡವಳಿಕೆ ಅರ್ಥಪೂರ್ಣವಾಗಿ ಕೇಳಿಬರುತ್ತದೆ. ಇಬ್ಬರೂ ಒಂದೇ ಮೂಲದವರೆನ್ನುವುದನ್ನು ಪರಿಗಣಿಸದೆ ನಮಗಿಂಥ ಕಿರುಕುಳ ನೀಡುತ್ತಾರಲ್ಲ ಎಂಬ ಕಿಸಿಸಿನಿಂದ ಅವರ ಚುಚ್ಚುವ ತಿವಿಯುವ ಮಾತಿನ ನಡವಳಿಕೆಯು ಸ್ವಭಾವಕ್ಕನುಗುಣವಾಗಿ, ಬದಲಾವಣೆಗೊಳಗಾದ ಗಂಗಡಿಕಾರರನ್ನು ದಾಸೊಕ್ಕಲಿಗರು 'ಮುಳ್ಳುಜನ' ಎಂದು ಕರೆದಿರಬಹುದು. ಈ ಶಬ್ದಕ್ಕಿರುವ ಮತ್ತೊಂದು ಅರ್ಥವೂ ಇಲ್ಲಿ ಪರಿಶೀಲನಾರ್ಹ. ಈ ಶಬ್ದದಲ್ಲಿರುವ 'ಮುಳ್ಳು' ಶಿವನ ಕೈಯೊಳಗಿರುವ ತ್ರಿಶೂಲವನ್ನು, ಅದಕ್ಕೆ ಸಂವಾದಿಯಾಗಿ ಜನಪದದಲ್ಲಿ ತ್ರಿಶೂಲದ ಆಕಾರ ಅವರಿಗೆ ಪರಿಚಿತವಾಗಿರುವ ಮುಳ್ಳನ್ನು ಹೋಲುವುದರಿಂದಲೂ, ಶೈವ ಪಂಥೀಯರಾದ ಗಂಗಡಿಕಾರರು ಶಿವನನ್ನು ಪೂಜಿಸುತ್ತಿದ್ದುದರಿಂದಾಗಿ ಶಿವನ ಲಾಂಛನವಾದ ತ್ರಿಶೂಲ ಅಂದರೆ ಮುಳ್ಳಿನ ಮೂಲಕ ಅವರನ್ನು ಮುಳ್ಳುಜನ ಎಂತಲೂ ಕರೆದಿರುವ ಸಾಧ್ಯತೆಯನ್ನು ತಳ್ಳಿ ಹಾಕಲಾಗದು. ಐತಿಹಾಸಿಕ ವಿವರಗಳ ಹಿನ್ನೆಲೆಯಲ್ಲಿ ಮುಳ್ಳನ್ನು ಪರಿಶೀಲಿಸುವುದಾದರೆ ತ್ರಿಶೂಲದಂತೆ ಅಂಕುಶವನ್ನೂ

ಅದು ಹೋಲುತ್ತದೆ. ಈ ಹಿನ್ನೆಲೆಯಲ್ಲಿ ಮುಳ್ಳುಜನ ಎನ್ನುವುದು ಅಂಕುಶ ಹಿಡಿದವರು ಎಂಬರ್ಥ ಮೂಡುತ್ತದೆ. ಮುಳ್ಳು ತ್ರಿಶೂಲ, ಮುಳ್ಳು ಅಂಕುಶ, ಹೀಗಾಗಿ ಈ ಎರಡೂ ಅರ್ಥಗಳಲ್ಲೂ ಈ ಪ್ರಯೋಗ ಸರಿಯಾಗಿದೆ ಎನಿಸುತ್ತದೆ.

ಇನ್ನು 'ಗಂಗಡಿಕಾರ'ದಲ್ಲಿನ 'ಗಂಗಡಿ' ಎನ್ನುವ ಶಬ್ದವನ್ನು ಭಾಷಾಶಾಸ್ತ್ರೀಯ ನೆಲೆಯಲ್ಲಿ ವಿವೇಚಿಸುವುದಾದರೆ ಈ ಶಬ್ದಕ್ಕೆ ಮೂಲವಾಗಿರಬಹುದಾದ ಕಂಕಟ ಶಬ್ದಕ್ಕೆ ಕೂಡ ಅಂಕುಶ ಎನ್ನುವ ಅರ್ಥವೇ ಇದೆ. ಕಿಟ್ಟೆಲ್ ಶಬ್ದ ಕೋಶದಲ್ಲಿ ಈ ಶಬ್ದಕ್ಕೆ AN IRON HOOK TO GOAD AN ELEPHANT ಎಂದೂ, ಕಂಕಟಕ ಶಬ್ದಕ್ಕೆ ARMOOR MOIL ಎಂದೂ ಅರ್ಥ ಕೊಡಲಾಗಿದೆ. ವರ್ಗ ಪ್ರಥಮಾಕ್ಷರಗಳಿಗೆ ಗ, ಜ, ಡ, ದ, ಬ, ಗಳು ಆದೇಶವಾಗಿ ಬರುವ ನಿಯಮದಂತೆ 'ಕಂಟಕ' ಎನ್ನುವುದು 'ಗಂಗಡ' ಎಂದೇ ಆಗುತ್ತದೆ. ಹಾಗಾಗಿ ಇದೂ ಕೂಡ ಗಂಗದೊರೆಗಳ ಲಾಂಛನವಾದ ಮದಗಜವನ್ನು ನಿಯಂತ್ರಿಸುವ ಅಂಕುಶವನ್ನೇ ಸೂಚಿಸುವುದಾಗಿದೆ. ಆದ್ದರಿಂದ ಗಂಗಡಿಕಾರ ರಲ್ಲಿರುವ 'ಗಂಡಗ' ಶಬ್ದ ಮೂಲ ಕಂಟಕವಾಗಿದ್ದು ಅದು ಗಂಗ ದೊರೆಗಳಿಗೂ ಗಂಗಡಿಕಾರರಿಗೂ ಇರುವ ಸಂಬಂಧವನ್ನೇ ಸ್ಪಷ್ಟಪಡಿಸುವಂಥದ್ದಾಗಿದೆ. ಗಂಡಿಕಾರರನ್ನು 'ಆನೆಯವರು' ಎಂಬ ಹೆಸರಿನಿಂದಲೂ ಕರೆಯಲಾಗುತ್ತದೆಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಒಂದು ಅಭಿಪ್ರಾಯ ವ್ಯಕ್ತವಾಯಿತು. ಗಂಗರಸರು ಮದಗಜಲಾಂಛನವನ್ನು ಹೊಂದಿದ್ದವರಾದ್ದರಿಂದ ಅವರನ್ನು ಆನೆಯ ಗುರುತಿನವರು ಎಂದು ಸ್ಪಷ್ಟಪಡಿಸುವ ಸಲುವಾಗಿ ಈ ಹೆಸರನ್ನು ಬಳಸಿರುವಂತೆ ಕಾಣುತ್ತದೆ. ಆನೆಯವರು ಶಬ್ದದ ಬಳಕೆ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರದಿದ್ದರೂ ಗಂಗಡಿಕಾರರ ಮೂಲಕ್ಕೂ ಗಂಗವಾಡಿ ಆಳಿದವರಿಗೂ ಸಂಬಂಧವಿರುವುದು ನಿರ್ವಿವಾದದಾಗಿ ಸಾಧಿತವಾಗಿ ಬಿಡುತ್ತದೆ.

ಇಷ್ಟಾದರೂ ಗಂಗರಸರಿಗೆ 'ಗಂಗರು' ಎಂಬ ಹೆಸರು ಹೇಗೆ ಪ್ರಾಪ್ತವಾಯಿತು? ಅವರ ರಾಜ್ಯಕ್ಕೆ ಗಂಗವಾಡಿ ಎಂದೂ, ಗಂಗವಾಡಿಯ ಪ್ರಜೆಗಳಿಗೆ 'ಗಂಗಡಿಕಾರ ಒಕ್ಕಲಿಗರು' ಎಂದೂ ಹೆಸರು ಬಂದದ್ದು ಹೇಗೆ? ಈ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರ ದೊರೆಯುವುದು ಕಷ್ಟ. ಇದಕ್ಕೆ ಉತ್ತರ ದೊರಕಿಸಿಕೊಳ್ಳುವಲ್ಲಿ ಸಹಾಯಕವಾಗಬಹುದಾದ ಒಂದೆರಡು ಆಧಾರಗಳನ್ನು ಚರ್ಚಿಸಬಹುದು. ಕರ್ನಾಟಕ ಪರಂಪರೆ ಭಾಗ-೧ ರಲ್ಲಿ (ಪುಟ, ೩೮)ರುವ ಉಲ್ಲೇಖದಲ್ಲಿ ಇಕ್ಷ್ವಾಕುವಂಶದವರೆಂದು ಹೇಳಿಕೊಂಡ ದಡಿಗ, ಮಾಧವರು. ಜೈನಾಚಾರ್ಯ ಸಿಂಹನಂದಿಯನ್ನು ಭೇಟಿಯಾದಾಗ ಅವನು ಅವರಿಗೆ ಕತ್ತಿಯೊಂದನ್ನು ಕೊಟ್ಟು, ರಾಜ್ಯವನ್ನು ದೊರಕಿಸಿಕೊಡುವ ಭರವಸೆ ನೀಡಿದನು. ಮಾಧವನು ಆ ಕತ್ತಿಯಿಂದ ಕಲ್ಲಿನ ಕಂಭವೊಂದನ್ನು ಒಡೆಯಲು ಅದು ಎರಡು ಭಾಗವಾಗಿ ಸೀಳಿ ಹೋಯಿತು'' ಎಂದು ಹೇಳಲಾಗಿದೆ. ಇದನ್ನು ಶುಭಶಕುನವೆಂದು ಪರಿಗಣಿಸಿದ ಸಿಂಹನಂದಿ ಕರ್ಣಿಕಾರ ಪುಷ್ಪದಿಂದ ಒಂದು ಕಿರೀಟವನ್ನು ಮಾಡಿ, ಅದನ್ನು ತನ್ನ ಮಯೂರ ಲಾಂಛನವನ್ನಾಗಿ ಕೊಟ್ಟನು. 'ನೀವು ಕೊಟ್ಟ ಮಾತಿಗೆ ತಪ್ಪಿ ನಡೆದರೆ, ಜಿನಶಾಸನದಂತೆ ನಡೆಯದಿದ್ದರೆ, ಪರಸ್ತ್ರೀಯನ್ನು ಮೋಹಿಸಿದರೆ, ಮದ್ಯಮಾಂಸಾದಿಗಳನ್ನು ಸೇವಿಸಿದರೆ, ದುಷ್ಟರ ಸಹವಾಸ ಮಾಡಿದರೆ, ಬಡಬಗ್ಗರಿಗೆ ದಾನ ಮಾಡದಿದ್ದರೆ, ಯುದ್ಧ ರಂಗದಿಂದ ಹಿಮ್ಮೆಟ್ಟಿದರೆ ನಿಮ್ಮ ವಂಶ ನಿರ್ನಾಮವಾಗುತ್ತದೆ'' ಎಂದು

ಸಿಂಹನಂದಿಯು ಎಚ್ಚರಿಕೆ ಮಾತುಗಳನ್ನು ಹೇಳಿ ದಡಿಗ ಮಾಧವರನ್ನು ಬೀಳ್ಕೊಟ್ಟನು. ಈ ಮಾತುಗಳು ಶಿಕಾರಿಪುರ ೪೨೧ನೇ ಶಾಸನದಲ್ಲಿ ಉಲ್ಲೇಖಿತವಾಗಿವೆ. (ನುಡಿದುದನಾರೊಳಂ ನುಡಿದು ತಪ್ಪಿದೊಡಂ ಜಿನಶಾಸನಕ್ಕೊಡಂಬಡದೊಡಂ.....) ಇದರ ಉಲ್ಲೇಖವನ್ನು ನಾವು ಕ್ರಿ.ಶ. ೩೫೦ ರಷ್ಟು ಹಿಂದಕ್ಕೆ ತೆಗೆದುಕೊಂಡು ಹೋಗಬಹುದು. ಯಾಕೆಂದರೆ ತಲಕಾಡು ಗಂಗರ ಆಳ್ವಿಕೆಯ ಕಾಲ ೩೫೦ ರಿಂದ ೧೦೫೦ ರವರೆಗೆ ವ್ಯಾಪಿಸಿಕೊಂಡಿರುವುದರಿಂದ ಮತ್ತು ಇವರ ಮೂಲಪುರುಷರಾಗಿ ದಡಿಗ ಮಾಧವರು ಕಾಣಿಸಿಕೊಳ್ಳುವುದರಿಂದ.

ಪ್ರಾಣಿತನದಿಂದ ಬೇರ್ಪಟ್ಟ ಮನುಷ್ಯ ಸ್ವತಂತ್ರನಾಗಿ ಬದುಕಲಾರಂಭಿಸಿದ ದಿನದಿಂದ ಅವನು ಅವಲಂಬಿಸಿದ ಎರಡು ಪ್ರಮುಖ ವೃತ್ತಿಗಳು ಕೃಷಿ ಮತ್ತು ಪಶುಪಾಲನೆ. ಇದಕ್ಕೆ ದಡಿಗ, ಮಾಧವರಾಗಲೀ ಅವರಿಗೆ ಹಿಂದಿನ ತಲೆಮಾರಿನವರಾಗಲಿ ಹೊರತಲ್ಲ. ಎಲ್ಲರೂ ಬಹುಕಾಲ ಅವಲಂಬಿಸಿದ ವೃತ್ತಿಯ ಬಗೆಗೆ ಬೇಸರ ಬಂದೋ, ಹೊಸ ಸಾಹಸಕ್ಕಿಳಿಯುವ ತವಕದಿಂದಲೋ, ತನ್ನ ಬುದ್ಧಿವಂತಿಕೆಯ ಬೇರೆ ಮಗ್ಗಲುಗಳನ್ನು ತೋರಿಸಬೇಕೆಂದೋ ಬದುಕಿನ ಯಾವುದೋ ಘಟ್ಟದಲ್ಲಿ ಸ್ವೀಕರಿಸಿದ ಸವಾಲಿನಿಂದಲೋ ತಮ್ಮ ಮೂಲವೃತ್ತಿಯಿಂದ ಹೊರಸರಿಯುವುದು ಅಪರೂಪವೇನಲ್ಲ. ಗಂಗಡಿಕಾರರ ವಿಚಾರದಲ್ಲೂ ಇಂಥದೊಂದು ಊಹೆಯನ್ನು ಮಾಡಿಕೊಳ್ಳುವ ಅವಕಾಶವಿದೆ. ಕೃಷಿಯನ್ನೇ ಪ್ರಧಾನ ಕಸುಬಾಗಿ ಹೊಂದಿರಬಹುದಾದ ಗಂಗಡಿಕಾರರು ವಾಸಿಸುತ್ತಿದ್ದ ಪ್ರದೇಶವಾದ ತಲಕಾಡು ಬಹು ಹಿಂದೆ ದಟ್ಟವಾದ ಅರಣ್ಯದಿಂದ ಕೂಡಿದ್ದು ಗಜಗಳಿಂದ ಸಮೃದ್ಧಿಯಾಗಿದ್ದುದಾಗಿ ತಿಳಿದುಬರುತ್ತದೆ. ಆದ್ದರಿಂದಲೇ ಇದಕ್ಕೆ 'ಗಜಾರಣ್ಯ'ವೆಂಬ ಹೆಸರೂ ಇತ್ತು. ತಮ್ಮ ಬೇಸಾಯದ ಬದುಕಿನ ನಡುನಡುವೆಯೇ ಹೊಲಗದ್ದೆ ತೋಟಗಳಿಗೆ ಈಗಿನಂತೆ ಆಗಲೂ ತೊಂದರೆ ಕೊಡುತ್ತಿದ್ದಿರಬಹುದಾದ ಆನೆಗಳನ್ನು ಹಿಡಿಯುವ, ಹಾಗೆ ಹಿಡಿದ ಆನೆಯನ್ನು ಪಳಗಿಸಿಕೊಂಡರೆ ಏನಾದರೂ ಉಪಯೋಗಕ್ಕೆ ಬರಬಹುದೆಂದು ಆಲೋಚಿಸುವ, ಹೀಗೆ ಹಿಡಿದು ಪಳಗಿಸಿದ ಆನೆಗಳ ಸಂಖ್ಯೆ ಹೆಚ್ಚಾಗುತ್ತ ಹೋದಂತೆ ಒಂದು ಗಜ ಸೈನ್ಯವನ್ನೇ ಯಾಕೆ ಸಿದ್ಧಪಡಿಸಬಾರದೆನ್ನುವ ಆಸೆ ಅಂಕುರಿಸಿರುವ, ಈ ಹಂತಗಳು ಒಂದೊಂದೇ ದಾಟುತ್ತಾ ಬಂದಹಾಗೆ ಸಾಮ್ರಾಜ್ಯ ಕಟ್ಟುವ ಸಾಹಸಕ್ಕೆ ಈ ಜನ ಕೈ ಹಾಕಿರಬಹುದೆನ್ನುವ ಊಹೆಗಳು ಈ ಸಂದರ್ಭದಲ್ಲಿ ಸಹಜವಾಗಿ ಮೂಡುತ್ತಿವೆ. ಈ ಊಹೆ ಕಂಟಕ - ಗಂಗಡಿಯಾಗಿರುವುದಕ್ಕೆ, ಕಂಟಕ ಎನ್ನುವುದಕ್ಕೆ ಅಂಕುಶ ಎನ್ನುವ ಅರ್ಥವಿರುವುದಕ್ಕೆ, ಅಂಕುಶ ಆನೆಯನ್ನು ನಿಯಂತ್ರಿಸುವುದಕ್ಕೆ ಪರಸ್ಪರ ಇರಬಹುದಾದ ಸಂದರ್ಭವನ್ನು ಸೂಚಿಸುತ್ತವೆ. ಆನೆಗೂ ಗಂಗರಿಗೂ ಇರಬಹುದಾದ ಸಂಬಂಧ ಇಷ್ಟಕ್ಕೆ ನಿಲ್ಲದೆ ಗಂಗದೊರೆಗಳು ಅವನೀತ, ಶ್ರೀಪುರುಷರು ಗಜಶಾಸ್ತ್ರವನ್ನೂ ಶಿವಮಾರನು ಗಜಾಷ್ಟಕವನ್ನೂ, ಬರೆದಿರುವುದರಲ್ಲಿ ಮತ್ತು ಮಾರಸಿಂಹನು 'ಹಸ್ತಿಮಲ್ಲ' ಎಂಬ ಬಿರುದು ಪಡೆದಿರುವುದರಲ್ಲಿ ಮುಂದುವರಿಯುತ್ತದೆ. ಶ್ರೀ ಪುರುಷನ 'ಗಜಶಾಸ್ತ್ರ'ವನ್ನು ಕುರಿತಂತೆ ಡಾ. ಬಿ. ಷೇಕ್ ಅಲಿ ಅವರು HISTORY OF WESTERN GANGAS ಕೃತಿಯಲ್ಲಿ ಹೀಗೆ ಹೇಳಿದ್ದಾರೆ. His work discribes the technique of capturing and taming elephants. This indicates the interest of

the ruler of militaty Scinece. Science elephant, figure prominently in the war field in those days'' ಇದೇ ರೀತಿ ಶ್ರೀಪುರುಷನ ಮಗ ೨ನೇ ಶಿವಮಾರನನ್ನು ಕುರಿತು ಹೇಳಲಾಗಿರುವ ಮಾತುಗಳು ಗಮನಾರ್ಹ '' He was an authority on the treatment of elephants and horses. His interest in elephant regulated in the production of the work Gajashtaka in Kannada''

ಕನ್ನಡದ ವಿಷಯ ವಿಶ್ವಕೋಶದಲ್ಲಿ (ಪುಟ - ೮೯೪) ಗಂಗರನ್ನು ಕುರಿತ ಕೆಲವು ಗಮನಾರ್ಹ ವಿಚಾರಗಳಿವೆ. ಅಲ್ಲಿರುವಂತೆ ''ಗಂಗರ ರಾಜಧಾನಿ ಕುವಳಾಲಯವಾಗಿದ್ದು ಅನಂತರ ತಲಕಾಡಾಯಿತು. ಇವರ ರಾಜ್ಯ ಕರ್ನಾಟಕ ದಕ್ಷಿಣ ಭಾಗಕ್ಕೆ ಸೀಮಿತವಾಗಿತ್ತು ಎಂಬ ಅಂಶಗಳು ಎಲ್ಲ ಶಾಸನಗಳಲ್ಲೂ ಉಕ್ತವಾಗಿವೆ. ಗಂಗರು ಮೂಲತಃ ಹಳೆಯ ಮೈಸೂರು ಭಾಗಕ್ಕೆ ಸೇರಿದವರೆಂಬುದರಲ್ಲಿ ಸಂದೇಹವಿಲ್ಲ... ಇವರು ಆಳಿದ ರಾಜ್ಯ ದಕ್ಷಿಣ ಕರ್ನಾಟಕಕ್ಕೆ ಸೀಮಿತವಾಗಿತ್ತು. ಈಗ ಭಾಗದಲ್ಲಿರುವ ಗಂಗಡಿಕಾರ ಒಕ್ಕಲಿಗರು ಈ ಮನೆತನದವರು ಎಂದು ಹಲವರ ಊಹೆ. ಇದು ಸರಿಯೆಂದು ಹೇಳಲು ಖಚಿತ ಆಧಾರಗಳಿಲ್ಲದಿದ್ದರೂ ಈ ಊಹೆಯನ್ನು ಅಲ್ಲಗಳೆಯಲಾಗದು. ಗಂಗ ಶಿವಮಾರನ ಕವಿತಾಗುಣವನ್ನು ಪ್ರಶಂಸಿಸಿರುವ ಹುಮ್ಮಚ ಶಾಸನ ಈ ರೀತಿ ಇದೆ.

ಏವೇಳ್ವುದೋ ಶಿವಮಾರಮ
ಹೀವಳಯಾಧಿಪನ ಸುಭಗ ಕವಿತಾ ಗುಣಮಂ
ಭೂವಳಯದೊಳ್ ಗಜಾಷ್ಟಕ
ಮೋವನಿಗೆಯುಮೊನಕೆವಾಡುಮಾದುದೆ ಪೇಳ್ಗಂ

(ಎಫಿಗ್ರಾಫಿಯಾ ಕರ್ನಾಟಕ VII ನಗರ ೩೫ ಹುಮ್ಮಚ, ಡಾ. ಎಂ.ಎಂ. ಕಲಬುರ್ಗಿ 'ಶಾಸನ ಸೂಕ್ತಿ ಸುಧಾರ್ಣವ).

ಈವರೆಗೆ ಉಲ್ಲೇಖಿಸಿದ ವಿವರಗಳ ಹಿನ್ನೆಲೆಯಲ್ಲಿ ಬಲವಾದ ಮತ್ತು ಒಪ್ಪಬಹುದಾದ ಕೆಲವು ಅಭಿಪ್ರಾಯಗಳಿಗೆ ತಲಪಬಹುದು. ಗಂಗಡಿಕಾರರ ವೃತ್ತಿ ಮೂಲತಃ ಬೇಸಾಯ. ಇದಕ್ಕೆ ಅಂಟಿಕೊಂಡಿದ್ದ ಇವರಿಗೆ ಆಕಸ್ಮಿಕವಾಗಿ ರಾಜ್ಯಕಟ್ಟುವ ಅವಕಾಶ ದೊರೆಯಿತು. ಅದನ್ನು ಸಮರ್ಥವಾಗಿಯೇ ಮಾಡಿ ತೋರಿದರು. ಜಗತ್ತಿನ ಯಾವುದೇ ಭಾಗದಲ್ಲಿ ಉದಯವಾಗಿ ಮೆರೆದ ಸಾಮ್ರಾಜ್ಯವಾದರೂ ಶಾಶ್ವತವಾಗಿ ಉಳಿದಿಲ್ಲ. ಕೆಲವು ಅಲ್ಪಾಯುಷಿಗಳು, ಕೆಲವು ದೀರ್ಘಾಯುಷಿಗಳು, ಅವು ಎಲ್ಲೋ ಒಂದು ಕಡೆ ಮುಕ್ತಾಯ ಕಾಣುತ್ತವೆ ಅಥವಾ ನಾಶವಾಗುತ್ತವೆ. ಗಂಗಡಿಕಾರರು ನಿರ್ಮಿಸಿದ ಸಾಮ್ರಾಜ್ಯವಾದರೂ ಸುಮಾರು ೭೦೦ ವರ್ಷಗಳ ಕಾಲ ದಕ್ಷಿಣ ಕರ್ನಾಟಕದ ಭಾಗದಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿ ಕೊನೆಗೆ ಅವಸಾನ ಹೊಂದಿತು. ಗಂಗಡಿಕಾರ ಕುಲದವರ ಆಳ್ವಿಕೆಯಿಂದಲೇ ಅವರ ಪ್ರಭುತ್ವದ ವ್ಯಾಪ್ತಿಗೊಳಪಟ್ಟಿದ್ದ ಪ್ರದೇಶ 'ಗಂಗವಾಡಿ ೯೬ ಸಾವಿರ ಸೀಮೆ' ಎಂದು ಕರೆಸಿಕೊಂಡಿತು. ಗಂಗ

ದೊರೆಗಳ ಆಳ್ವಿಕೆಯನ್ನು ಕರ್ನಾಟಕದ ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ, ಇತಿಹಾಸದಲ್ಲಿ ಚಿರಸ್ಥಾಯಿಯಾಗಿಸಿತು. ಗಂಗರ ಇತಿಹಾಸದಲ್ಲಿ ದೊರೆಯುವ ಖಚಿತ ಆಧಾರಗಳೇ ಸ್ಪಷ್ಟಪಡಿಸುವಂತೆ ಇವರು ಸಾಹಸ ಪ್ರಿಯರು, ಸಮರ್ಥರು, ಯುದ್ಧ ಕಲೆಯಲ್ಲಿ ಪರಿಗಣಿತರು. 'ಕವಿರಾಜಮಾರ್ಗ'ದಲ್ಲಿ ಶ್ರೀ ವಿಜಯ ಅತ್ಯಂತ ಹೆಮ್ಮೆಯಿಂದ ವರ್ಣಿಸುವ ಕನ್ನಡಿಗರ ಗುಣಗಳೆಲ್ಲವನ್ನೂ ಅಕ್ಷರಶಃ ಹೊಂದಿದ್ದವರು. ನೆಲದ ಮೂಲದ ಜನ ಮಣ್ಣನ್ನೇ ನಂಬಿ ಬದುಕುತ್ತಿದ್ದ ಜನ. ಸಾಧಾರಣ ಹೊಡೆತಗಳಿಗೆ ಜಗ್ಗದ ಕೆಚ್ಚು ಮತ್ತು ಮಹತ್ವಾಕಾಂಕ್ಷೆಗಳು ಸಮ ಪ್ರಮಾಣದಲ್ಲಿ ಬೆರೆತಿದ್ದುದರಿಂದಲೇ ಅವರಿಂದ ಮಹಾ ಸಾಮ್ರಾಜ್ಯವೊಂದರ ನಿರ್ಮಾಣ ಮತ್ತು ಅದನ್ನು ಬಹು ಕಾಲದವರೆಗೆ ಸಮರ್ಥವಾಗಿ ಆಳುವುದು ಸಾಧ್ಯವಾಯಿತು. ಕನ್ನಡ ನಾಡಿನ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಕನ್ನಡಪರವಾದ ಸಾಮ್ರಾಜ್ಯವೊಂದನ್ನು ಕಟ್ಟಿದ ಹೆಗ್ಗಳಿಕೆ ಅವರದಾಗಿತ್ತೆಂಬುದಕ್ಕೆ ಕನ್ನಡದಲ್ಲಿರುವ ಅವರ ಶಾಸನಗಳು ಮತ್ತು ಸಾಹಿತ್ಯಕೃತಿಗಳು ಸಾಕ್ಷಿ ಹೇಳುತ್ತದೆ. ಅವರ ವಾಸ ಸ್ಥಾನವಾಗಿದ್ದ 'ತಲಕಾಡು' ಶಬ್ದದಲ್ಲೇ ಕಾಡಿನ ಪ್ರಸ್ತಾಪವಿದೆ. ಇದು ಗಜಾರಣ್ಯವೆಂದು ಕರೆಯಲ್ಪಟ್ಟಿದೆ. ಈ ಹೆಸರೇ ಅಲ್ಲಿ ಆನೆಗಳು ಗಣನೀಯ ಪ್ರಮಾಣದಲ್ಲಿದ್ದುವೆಂಬುದನ್ನು ಸೂಚಿಸುತ್ತದೆ. ಈ ಹಿಂದೆಯೇ ಪ್ರಸ್ತಾಪಿಸಿರುವಂತೆ ಸಮೃದ್ಧವಾಗಿದ್ದ ಆನೆಗಳನ್ನು ನಾನಾ ಉದ್ದೇಶಗಳ ಹಿನ್ನೆಲೆಯಲ್ಲಿ ಹಿಡಿಯುವುದು, ಪಳಗಿಸುವುದು, ಯುದ್ಧಗಳಲ್ಲಿ ಇವುಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳುವುದು ಇತ್ಯಾದಿಗಳನ್ನು ಮಾಡುವ ಮೂಲಕ ದಕ್ಷಿಣ ಭಾರತದಲ್ಲಿ ಇಂಥದೊಂದು ಗಜಸೇನೆಯ ನಿರ್ಮಾಣಕ್ಕೆ ಕೈ ಹಚ್ಚಿ ಯಶಸ್ವಿಯಾದವರಲ್ಲಿ ಗಂಗಡಿಕಾರರೇ ಮೊದಲಿಗರು. ಆನೆಗಳನ್ನು ಹಿಡಿದು ಪಳಗಿಸುವ ಧೀರ ವೃತ್ತಿಸಾಹಸ ಪ್ರವೃತ್ತಿಯಿಂದಾಗಿ ಅವರು ಗಂಗಡಿಕಾರರು. ಮುಂದೆ ಈ ವೃತ್ತಿಯವರು ಸ್ವಸಾಮರ್ಥ್ಯದಿಂದ ನಾಡನ್ನು ಆಳುವ ಶಕ್ತಿ ತೋರ್ಪಡಿಸಿದಾಗ ಗಂಗರಸರು ಆದರು. ಅಂದರೆ ಗಂಗರಸರ ಹೆಸರಿನ ಮೂಲ ಮತ್ತು ಗಂಗವಾಡಿ ಹೆಸರಿನ ಮೂಲ ಇರುವುದು ಗಂಗಡಿಕಾರ ಎನ್ನುವುದರಲ್ಲೇ ಎಂಬುದು ಇದರಿಂದ ಸ್ಪಷ್ಟ. ಆನೆಗಳನ್ನು ಪಳಗಿಸಿ ಗಜಸೈನ್ಯವನ್ನು ಕಟ್ಟಿ, ಯುದ್ಧ ತಂತ್ರದಲ್ಲಿ ಪರಿಣತಿ ಪಡೆದು, ರಾಜ್ಯವಾಳುವುದು ಗಂಗಡಿಕಾರರ ಒಂದು ಗುಂಪಿಗೆ ಸಾಧ್ಯವಾಯಿತು. ಅವರು ಅದರಲ್ಲಿ ಏಕಮುಖಿಯಾಗಿ ಮುನ್ನಡೆದರು. ಇನ್ನುಳಿದವರು ತಮ್ಮ ವೃತ್ತಿಗೆ ಅಂಟಿಕೊಂಡೇ ಸಾಗಿದರು. ಮುಂದೆ ತರಬೇತಿ ಸೈನ್ಯ ಸೃಷ್ಟಿಯ ಅಗತ್ಯ ಹೆಚ್ಚಾದಂತೆ ಆನೆಗಳ ಬಳಕೆಗೆ ಬದಲು ಅದಕ್ಕಿಂತ ಸಾಂಪ್ರದಾಯಿಕ ಯುದ್ಧಕಲೆಗಳು ನಶಿಸತೊಡಗಿದಂತೆ ನಾಗರಿಕ ರಾಕ್ಷಸನ ಹೊಲಕಾರಕ್ಕೆ ಕಾಡು ನಾಶವಾಗತೊಡಗಿ ಕಾಡಿನಲ್ಲಿ ಆನೆಗಳ ಸಂಖ್ಯೆಯು ಕ್ಷೀಣಿಸಿ, ಆನೆಗಳಿಂದಲೇ ವೃತ್ತಿ ನಡೆಸಬೇಕಾಗಿದ್ದ ಗಂಗಡಿಕಾರರು ಹಳೆಯ ಗಂಡನ ಪಾದವೇ ಗತಿಯೆನ್ನುವಂತೆ ಜೀವನೋಪಾಯಕ್ಕೆ ಮತ್ತೆ ಒಕ್ಕಲಿಗ ವೃತ್ತಿಗೆ ಮರಳಬೇಕಾಯಿತು. ಏನೇನೋ ಕನಸುಗಳನ್ನು ಕಟ್ಟಿಕೊಂಡು ಹಳ್ಳಿ ಬಿಟ್ಟು ಪಟ್ಟಣ ಸೇರಿದವರು, ಅಲ್ಲಿ ಸಲ್ಲಲಾಗದಿದ್ದಾಗ ಮತ್ತೆ ಹಳ್ಳಿಯ ಬದುಕಿಗೆ ಶರಣಾಗುವಂತೆ ಗಂಗಡಿಕಾರರ ಸ್ಥಿತಿಯು ಆಗಿರಬೇಕು. ಹೀಗಾಗಿ ವ್ಯವಸಾಯ ಮೂಲದಿಂದ ಹೊರಟ ಬದುಕು 'ಗಂಗಡಿ' ವೃತ್ತಿಯಲ್ಲಿ ಕೆಲಕಾಲ ತಂಗಿದ್ದು, ಅದನ್ನು ಮುಂದುವರಿಸಲಾಗದ ಸ್ಥಿತಿಯಲ್ಲಿ ವ್ಯವಸಾಯಕ್ಕೆ ಮರಳಿತು. ದೀರ್ಘ ಕಾಲ

ಮುಂದುವರಿಸಲಾರದೆ ಮತ್ತೆ ತಮ್ಮ ಮೂಲ ಕಸುಬಾದ ವ್ಯವಸಾಯಕ್ಕೆ ಮರಳಿರಬೇಕು ಎನಿಸುತ್ತದೆ.

ಕಂಕಟ > ಕಂಕಟಿ > ಗಂಗಡಿ - ಗಂಗಡಿ+ಕಾರ+ಒಕ್ಕಲಿಗ =ಗಂಗಡಿಕಾರ ಒಕ್ಕಲಿಗ. ಈ ಎಲ್ಲಾ ಕಾರಣಗಳಿಂದಾಗಿ ಗಂಗಡಿಕಾರ ಪದ ನಿಷ್ಪತ್ತಿ ಇಂತಿದೆ.

ಕಂಕಟ-ಕಂಕಟಿ-ಗಂಗಡಿ (ಕರ) ಗಂಗಡಿ+ಕಾರ (ರ) ಗಂಗಡಿಕಾರ. ಗಂಗಡಿಕಾರ + ಒಕ್ಕಲಿಗ = ಗಂಗಡಕಾರೊಕ್ಕಲಿಗ.

ಹೀಗಾಗಿ ಆನೆಗಳನ್ನು ಪಳಗಿಸಿ ಗಜಸೈನ್ಯ ನಿರ್ಮಾಣದಲ್ಲಿ ಮೆರೆದ ಸಾಹಸ ಹಲವರಲ್ಲಿ ಆಶ್ಚರ್ಯವನ್ನುಂಟುಮಾಡಿದ್ದರ ಪರಿಣಾಮವಾಗಿ ಇವರು ಗಂಗಡಿಕಾರರು, ಒಕ್ಕಲಿಗ ವೃತ್ತಿಯಿಂದ ಹೊರಟು ಮತ್ತಲ್ಲಿಗೇ ತಲುಪಿದ ಕಾರಣದಿಂದಾಗಿ ಒಕ್ಕಲಿಗರೂ ಆಗಿದ್ದಾರೆ. ಬೇರೆ ಯಾರಿಗೂ ಈ ಪ್ರಮಾಣದಲ್ಲಿ ಪ್ರಾಪ್ತವಾಗಿರದ ವೈಶಿಷ್ಟ್ಯದಿಂದಾಗಿ, ಪರಸ್ಪರ ಬೇರೆಬೇರೆಯಾದ ಎರಡು ವೃತ್ತಿಗಳಲ್ಲಿ ಇವರು ತೋರಿದ ಸಾಮರ್ಥ್ಯ ಪರಿಣತೆಗಳಿದಾಗಿ ಗಂಗಡಿಕಾರ ಒಕ್ಕಲಿಗರಾಗಿದ್ದಾರೆಂದು ತೀರ್ಮಾನಿಸಬಹುದಾಗಿದೆ.

## ಉಪ ಪಂಗಡಗಳು:

ಗಂಗಡಿಕಾರ ಒಕ್ಕಲಿಗರಲ್ಲಿ ಎರಡು ಪ್ರಧಾನ ಗುಂಪುಗಳು ಕಂಡುಬರುತ್ತವೆ. ಮದುವೆ ಆಚರಣೆಗಳ ಹಿನ್ನೆಲೆಯಲ್ಲಿ ಈ ಎರಡು ಗುಂಪುಗಳನ್ನು ೧. ಪೆಟ್ಟಿಗೆಯವರು ೨. ಬುಜ್ಜುಣಿಗೆಯವರು ಎಂದು ಕರೆಯುತ್ತಾರೆ. ಧಾರೆಯ ದಿನ ಗಂಡಿನವರ ನೆರೆ ಬರುವಾಗ (ದಿಬ್ಬಣ) ಮದುವೆಯ ವಸ್ತುಗಳನ್ನು ಪೆಟ್ಟಿಗೆಯಲ್ಲಿ ತುಂಬಿಕೊಂಡು ಬರುವವರನ್ನು ಪೆಟ್ಟಿಗೆಯವರೆಂದೂ ಬುಜ್ಜುಣಿಗೆಯಲ್ಲಿ ತುಂಬಿಕೊಂಡು ಬರುವವರನ್ನು ಬುಜ್ಜುಣಿಗೆಯವರೆಂದೂ ಗುರುತಿಸುತ್ತಾರೆ. ಬುಜ್ಜುಣಿಗೆ ಮತ್ತು ಪೆಟ್ಟಿಗೆ ಇವೆರಡೂ ಬಿದಿರಿನಿಂದ ಮಾಡಿದ ಆಕಾರ ವ್ಯತ್ಯಯ ಕುಕ್ಕೆಗಳು. ಅಷ್ಟೇ ಅಲ್ಲದೆ ಧಾರ್ಮಿಕ ಹಿನ್ನೆಲೆಯಲ್ಲಿಯೂ ಗಂಗಡಿಕಾರರನ್ನು ೧. ಮುಳ್ಳುಜನ ೨. ದಾಸಜನ ಎಂದು ಹೆಸರಿಸುತ್ತಾರೆ. ಶೈವಧರ್ಮಕ್ಕೆ ನಡೆದುಕೊಳ್ಳುವವರನ್ನು ಮುಳ್ಳುಜನರೆಂದು, ವೈಷ್ಣವ ಧರ್ಮಕ್ಕೆ ನಡೆದು ಕೊಳ್ಳುವವರನ್ನು ದಾಸ ಜನರೆಂದೂ ಪರಿಗಣಿಸಿದ್ದಾರೆ. ದಾಸ ಜನರನ್ನು ಹಾಸ್ಯಕ್ಕಾಗಿ ತೀರ್ಥ ಪ್ರಸಾದಿಗಳೆನ್ನುತ್ತಾರೆ. ಹಾಗೆಯೇ ಗಂಗಡಿಕಾರರ (ಮೂಲ)ನ್ನೂ ಮುಳ್ಳುಜನ, ಚುಚ್ಚುವಂಥಹವರು ಎಂಬರ್ಥದಲ್ಲಿ, ದಾಸೊಕ್ಕಲಿಗರು (ನಾಮಧಾರಿಗಳು ದಾರ್ಶನಿಕರು) ಮುಂತಾಗಿ ಕರೆಸಿಕೊಳ್ಳುವ ಅವರು ಮೂಲತಃ ಶೈವ ಗಂಗಡಿಕಾರರೇ ಆಗಿದ್ದವರು, ರಾಮಾನುಜಾಚಾರ್ಯರ ಕಾಲದಲ್ಲಿ ವೈಷ್ಣವ ಧರ್ಮವನ್ನು ಸ್ವೀಕರಿಸಿ ತಮ್ಮನ್ನು ಗುರುತಿಸಿಕೊಂಡರು. ಹೀಗಾಗಿ ಮುಳ್ಳುಜನ ಮತ್ತು ದಾಸೊಕ್ಕಲಿಗರು ಮೂಲತಃ ಒಂದೇ ಮೂಲದಿಂದ ಬಂದವರು. ಹಾಗಿದ್ದರೂ ಈಗ ಅವರಲ್ಲಿ ಅಷ್ಟು ಹೊಂದಾಣಿಕೆ ಕಂಡು ಬರುತ್ತಿಲ್ಲ. ಹೆಣ್ಣು ಕೊಟ್ಟು ತರುವ ಸಂಬಂಧ ಬೆಳೆಸಿ ಒಂದಾಗುವ ಅಭಿಲಾಷೆ ಯಾಕೋ ಏನೋ ಹೆಚ್ಚಾಗಿ ಮಾಡುತ್ತಿಲ್ಲ. ಆಚಾರ ವಿಚಾರಗಳಲ್ಲಿ ಅಂಥ ವ್ಯತ್ಯಾಸಗಳು ಕಾಣದಿದ್ದರೂ ಪರಸ್ಪರರು ದೂರಾಗುತ್ತಿರುವುದು ಆಶ್ಚರ್ಯವೆನಿಸುತ್ತದೆ.




'ಆಚರಣೆಗಳ' ಹಿನ್ನೆಲೆಯಲ್ಲಿ ಕಂಡುಬರುವ ಎರಡು ಗುಂಪುಗಳ ನಡುವೆ ಸಂಬಂಧ ಬೆಳೆಸಲು ಯಾವುದೇ ಸಂಪ್ರದಾಯಿಕ ನಿರ್ಬಂಧವಿಲ್ಲ. ಆದರೆ ಧಾರ್ಮಿಕ ಹಿನ್ನೆಲೆಯಲ್ಲಿ ಎರಡಾದ ಗುಂಪುಗಳ ನಡುವೆ ಸಂಬಂಧ ಬೆಳೆಸುವುದು ಸಾಂಪ್ರದಾಯಿಕವಾಗಿ ಸಾಧ್ಯವಿಲ್ಲ. ಅಲ್ಲದೆ ವೈಷ್ಣವ ಧರ್ಮದ ಅನುಯಾಯಿಗಳಾದವರು ತಾವು ಮೂಲದಲ್ಲಿ ಗಂಗಡಿಕಾರರಾಗಿದ್ದವರೆಂದು ಒಪ್ಪುವುದೂ ಇಲ್ಲ. ಹಾಗೆಯೇ ಗಂಗಡಿಕಾರರೂ ದಾಸೊಕ್ಕಲಿಗರನ್ನು ಒಂದೇ ತೆಂಡೆಯಿಂದ ಮೂಡಿಬಂದ ಈ ಗುಂಪುಗಳು ಎಲ್ಲ ವಿಚಾರಗಳಲ್ಲೂ ಪ್ರತ್ಯೇಕ ಅಸ್ತಿತ್ವವನ್ನೇ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿವೆಯೇ ಹೊರತು, ಒಂದುಗೂಡುವ (ಸಾಂಪ್ರದಾಯಿಕ ಹಿನ್ನೆಲೆಯಲ್ಲಿ) ಮನೋಭಾವವನ್ನು ತೋರಿಸುತ್ತಿಲ್ಲ. ಹಾಗಾಗಿ ಗಂಗಡಿಕಾರರು ಮತ್ತು ದಾಸೊಕ್ಕಲಿಗರು ಒಕ್ಕಲಿಗರ ಜಾತಿಯ ಬೇರೆ ಬೇರೆ ಪಂಗಡಗಳಾಗಿಯೇ ತಮ್ಮನ್ನು ಗುರುತಿಸಿಕೊಳ್ಳುತ್ತಿವೆ.

## ಕುಲಗೋತ್ರ:

ಗಂಗಡಿಕಾರ ಒಕ್ಕಲಿಗರಲ್ಲಿ ಗೋತ್ರಗಳೂ ಇವೆ. ಇವನ್ನೇ ಬಳಿ, ಬೆಡಗು ಎಂದು ಕರೆಯುತ್ತಾರೆ. ಇವುಗಳ ಸಂಖ್ಯೆ ೪೨ ಎಂದು The Mysore Tribes and Castes ಕೃತಿಯಲ್ಲಿ ಹೇಳಲಾಗಿದೆ.

| | | | | | |
|---|---|---|---|---|---|
| ಆಳವಿ | - | Alavi - Franamy | ಆನೆ | - | Ane - Elephant |
| ಆವಿ | - | ave...... | ಬಚ್ಚೆಹಳ | - | Bachchala |
| ಬೆಳ್ಳಿ | - | Belli - Silver | ಚಿನ್ನದ | - | Chinnada - Gold |
| ಎಮ್ಮೆ | - | Emme - Buffalo | ಗುಡಿ | - | Gudi - Temple |
| ಅಯ್ಯಲು | - | Ayyalu? | ಬಳಮೆ | - | Balame? |
| ಬೆರಳು | - | Beralu - Finger | ಛತ್ರಿ | - | Chatri - Umbrella |
| ದಾಲಬಂದ್ರ | - | Dalabandra? | ಏಣಿ | - | Enai- Ladder |
| ಹಸುಬೆ | - | Hasube - Double bag | ಹೊಂಗೆ | - | Honge-Pongamia Globra |
| ಹೊಲೂರು | - | Holuru..... | ಹೂವ್ವು | - | Howa - Flower |

| | | | | | |
|---|---|---|---|---|---|
| ಕಳ್ಳಿ | - | Kalli - Plant | ಕಸ್ತೂರಿ | - | Kasturi - musk |
| ಕೊಮ್ಮೆ | - | Komme - Herb | ಕೋವೆ | - | Kove |
| ಮಾಲೆ | - | Male - Garland | ಮಣಿ | - | Mani - Glass beads |
| ಮುಚ್ಚಳ | - | Muchala - lid | ಸಾಮೆ | - | Same - Panieum |
| ಕಜ್ಜಾಯ | - | Kajjaya - Cake | ಕಂಬ | - | Kamba - Pillar |
| ಕೋಲು | - | Kolu - Stick | ಕೊತ್ತಿ | - | Kotti - Cat |
| ಮದನ | - | Madana | ಮಲ್ಲಿಗೆ | - | Mallige - Jasmine |
| ಮೋಟು | - | Motu | ಮುತ್ತು | - | Muthu - Pearl |
| ಸಾವಂತಿ | - | Savanthi - a flower | ಚಂದ್ರ | - | Chandra - Moon |
| ಕಮ್ಮಾರ | - | Ummra | ವಲ್ಲಿ | - | Valli - a cloth |
| ಅತ್ತಿ | - | Atti - Fig tree | ವಾಲೆ | - | Vale - Ear Ornament |
| ಅಂಚೆ | - | Anche - Bird | | | |

ಮೇಲಿನ ಪಟ್ಟಿಯನ್ನು ಗಮನಿಸಿದಾಗ ಗಂಗಡಿಕಾರರು, ಲೋಹ, ಮರ, ಗಿಡ, ಪಶುಪಕ್ಷಿ, ವಸ್ತು ಒಡವೆಗಳ ಹೆಸರಿನ ಮೂಲಕ ತಮ್ಮನ್ನು ಗುರುತಿಸಿಕೊಳ್ಳುತ್ತಿದ್ದರೆನ್ನಿಸುತ್ತದೆ. ಮೇಲೆ ಉಲ್ಲೇಖಿಸಲ್ಪಟ್ಟ ಕುಲ ಮತ್ತು ಬಳಿಗಳು ಕ್ಷೇತ್ರ ಕಾರ್ಯ ಮಾಡುವ ಸಂದರ್ಭದಲ್ಲಿ ಕೆಲವು ಜಿಲ್ಲೆಗಳಲ್ಲಿ ಕಂಡುಬರಲಿಲ್ಲ. ಅಷ್ಟೇ ಅಲ್ಲ ವಲ್ಲಿ, ವಂಗೆ, ಬೆಳ್ಳಿ ಮುಂತಾದ ಬೆರಳೆಣಿಕೆಯ ಐದಾರು ಬಳಿಗಳ ಹೆಸರಷ್ಟೇ ದೊರೆಯಿತೇ ವಿನಹ ಮತ್ತಾವ ಸಂಗತಿಗಳೂ ದೊರಕಲಿಲ್ಲ. ಬಹುಶಃ ನಾಗರಿಕತೆಯ ಪ್ರಭಾವ ಹೆಚ್ಚಿದಂತೆಲ್ಲಾ ಇಂಥ ಸಣ್ಣ ಪುಟ್ಟ ಅಂಶಗಳು ಕಾಣೆಯಾಗುವುದು ತೀರಾ ಸಹಜವೆನಿಸುತ್ತದೆ.

ಬಳಿಗಳ ಹೆಸರುಗಳನ್ನು ಗಮನಿಸಿದರೆ ಒಕ್ಕಲಿಗರು ತಮ್ಮ ಸುತ್ತಲ ಬದುಕಿನಲ್ಲಿ ಕಂಡುಬರುವ ವಸ್ತು, ವಿಚಾರ, ವಿಷಯಗಳನ್ನೇ ಹೆಸರನ್ನಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಒಂದು ಬಳಿಯ ಹೆಸರನ್ನು ಪಡೆದು ಕೊಂಡ ಕುಲದವರು ಅದಕ್ಕೆ ಸಂಬಂಧಿಸಿದಂತೆ ಕೆಲವು ವಿಧಿ ನಿಷೇದಗಳನ್ನು ಅನುಸರಿಸಬೇಕಾಗುತ್ತದೆ. ಉದಾಹರಣೆಗೆ ಹೊಂಗೆ ಬಳಿಯವರು ಆ ಮರವನ್ನು ಕಡಿಯ ಬಾರದು. ಅದನ್ನು ಪೂಜಿಸಬೇಕು. ಕೆಲವೊಮ್ಮೆ ಮದುವೆ ಸಂದರ್ಭದಲ್ಲಿ ಚಪ್ಪರದ ಹಟ್ಟಿಯಲ್ಲಿ ಅಂಥ ಬಳಿಯವರು ಸಂಕೇತದ ಮರ ಗಿಡಗಳನ್ನು ಇಟ್ಟು ಪೂಜಿಸಬೇಕಾಗಿತ್ತು. ಈಗ ಈ ರೀತಿಯ ಸಂಪ್ರದಾಯಗಳು ಕಡಿಮೆಯಾಗುತ್ತಿದೆ. ಬಹುಪಾಲು ನಿಂತೇ ಹೋಗಿವೆ.

ಗಂಗಡಿಕಾರ ಒಕ್ಕಲಿಗರಲ್ಲಿ ಧರ್ಮದ ಪರಿಕಲ್ಪನೆ ವಿಶಿಷ್ಟವಾದುದು. ಇವರು ಧರ್ಮ, ಕರ್ಮ ಎಂಬುದನ್ನು ಒಳ್ಳೆಯದ್ದು, ಕೆಟ್ಟದ್ದು, ದೇವರು ದಿಂಡರು, ಆಚಾರ, ವಿಚಾರ, ಪೂಜೆ ಪುರಸ್ಕಾರ ಎಂಬರ್ಥದಲ್ಲಿಯೇ ಬಳಸುತ್ತಾರೆ. ಇವರನ್ನು ಯಾರಾದರೂ ಧರ್ಮವೆಂದರೇನು? ನಿಮ್ಮದು ಯಾವ ಧರ್ಮ? ಎಂದು ಕೇಳಿದರೆ ನಿಖರವಾಗಿ ಉತ್ತರಿಸಲು ತಡಕಾಡುತ್ತಾರೆ. ಹಿಂದು ಮುಂದು

ನೋಡುತ್ತಾರೆ. ಯಾವುದಾದರೊಂದು ದೇವರ ಹೆಸರನ್ನು ಹೇಳಿ ಇಂಥ ದೇವರ ಒಕ್ಕಲು ಎಂದುತ್ತರಿಸುತ್ತಾರೆಯೇ ವಿನಹ ಹಿಂದೂ ಧರ್ಮ, ಶೈವಧರ್ಮ, ಬೌದ್ಧಧರ್ಮ, ಜೈನಧರ್ಮವೆಂದು ಧರ್ಮಸ್ಥಾಪಕರ ಹೆಸರನ್ನು ಹೇಳುವ, ಅದಕ್ಕೆ ಸಂಬಂಧಿಸಿದ ಸಿದ್ಧಾಂತ ವ್ಯಾಖ್ಯಾನಗಳನ್ನು ಕೊಡುವ ಗೋಜಿಗೆ ಹೋಗುವುದಿಲ್ಲ. ಇವರಿಗೆ ಧರ್ಮ ಎನ್ನುವುದು ತರ್ಕ, ವಾದ ಸಿದ್ಧಾಂತಗಳಾಚೆಗಿನ ನಂಬಿಕೆ ಮತ್ತು ಶ್ರದ್ಧೆಯ ವಿಚಾರವಾಗಿದೆ. ತಮ್ಮನ್ನು ಕಾಪಾಡುವ, ಕಾಡುವ ಅಲೌಕಿಕ ಶಕ್ತಿಗಳು ಅಸ್ತಿತ್ವದಲ್ಲಿವೆಯೆಂಬ ನಂಬಿಕೆ ಇವರಿಗಿದೆ. ಈ ಹಿನ್ನೆಲೆಯಲ್ಲಿಯೇ ಇವರ ದೇವರು ಸೃಷ್ಟಿಗೊಳ್ಳುತ್ತಾನೆ. ಅದೇ ನೆಲೆಯಲ್ಲಿನ ಆಚರಣೆಗಳು ಧರ್ಮದ ಸ್ವರೂಪವನ್ನು ಪಡೆದುಕೊಳ್ಳುತ್ತವೆ. ದೈವಭಕ್ತಿ ಮತ್ತು ಧಾರ್ಮಿಕ ನಿಷ್ಠೆಗಳು ಇವರಲ್ಲಿ ಶಿಷ್ಟ ಸಮುದಾಯಕ್ಕಿಂತ ಭಿನ್ನವಾಗಿರುತ್ತವೆ.

ಬೇಸಾಯ ಬದುಕನ್ನು ನಡೆಸುವ ಇವರು ತಮ್ಮ ಬಾಳಿಗೆ ನೆರವಾದ ಎಲ್ಲವನ್ನೂ ದೇವರೆಂದು ಅಂಗೀಕರಿಸುತ್ತಾರೆ. ''ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಲಿ| ಎಳ್ಳು ಜೀರಿಗೆ ಬೆಳೆಯೋಳಾ| ಭೂತಾಯಿ| ಎದ್ದೊಂದು ಗಳಿಗೆ ನೆನೆದೇನು|'' ಎಂದು ಹೇಳುವ ಜನಪದ ಗೀತೆಯೊಂದು ಇವರು ಹೇಗೆ ಫಸಲು ಕೊಡುವ ನೆಲವನ್ನು ''ಭೂದೇವಿ''ಯೆಂದು ಕರೆದು ದೇವತೆಯನ್ನಾಗಿಸಿದ್ದಾರೆಂಬುದಕ್ಕೆ ಸಾಕ್ಷಿಯಾಗುತ್ತದೆ. ಇದೇ ರೀತಿ ಹೆಣ್ಣು ಮಗಳೊಬ್ಬಳು ರಾಗಿಕಲ್ಲು ಗೂಟವನ್ನು ಹಿಡಿದು ''ಕಲ್ಲಮ್ಮ ತಾಯಿ ಮೆಲ್ಲಮ್ಮ ರಾಜನವ| ಜಲ್ಲ ಜಲ್ಲನೆ ಉದುರಮ್ಮ ನಾನಿನಗೇ| ನೆಲ್ಲಕ್ಕಿ ಪಡಿಯ ನಡೆಸೇನು|'' ಎಂದು ಹಾಡುವ ಹಾಡು ರಾಗಿಕಲ್ಲಲ್ಲಿ 'ಕಲ್ಲಮ್ಮ ದೇವಿ'ಯನ್ನೂ ಸೃಷ್ಟಿಸಿ ಬಿಡುತ್ತದೆ. ಹೀಗೆಯೇ ನೆಲ ಉಳುವ ಎತ್ತು - ಎತ್ತಪ್ಪ, ಹರಿವ ನೀರು ಗಂಗಮ್ಮ, ಬೀಳುವ ಮಳೆ ಮಳೆರಾಯ, ಸಗಣಿ ಉಂಡೆ ಬೆನಕರಾಗಿ ಬಿಡುತ್ತಾರೆ. ವ್ಯವಸಾಯ ಮೂಲದ ಇವರು ನಂಬಿದ ದೇವರುಗಳ ಪಟ್ಟಿಯನ್ನು ಪುಟಗಟ್ಟಲೆ ಬೆಳೆಸಬಹುದು. ಕಿರುಕುಳ ಕೊಡುವ ಅಮ್ಮಗಳಾಗಿ ಕಾಲರದಮ್ಮ, ಪ್ಲೇಗಮ್ಮ, ಸಿಡುಬಿನಮ್ಮ, ದಡಾರಮ್ಮ, ಸೀತಾಳಮ್ಮಗಳ ಜೊತೆಗೆ ಗಿಡಮರ, ಪಶುಪಕ್ಷಿ, ಪ್ರಾಣಿಗಳೆಲ್ಲವೂ ದೇವರ ಹೆಸರಿನ ಪಟ್ಟಿಗೆ ಬಂದು ಹೋಗುತ್ತವೆ. ಮಳೆ ಮಳೆಯಮ್ಮ, ಗರುಡ, ಗರುಡಾಳಸ್ವಾಮಿ, ಕೋತಿ- ಆಂಜನೇಯ, ಹಾವು - ನಾಗಪ್ಪ ಇತ್ಯಾದಿ. ಮಕ್ಕಳು ರಚ್ಚೆ ಹಿಡಿದರೆ ಕ್ರೈಸ್ತರ ಮೇರಿಯಮ್ಮನಿಗೂ, ನರುಳ್ಳಿ ಮೈಮೇಲೆ ಎದ್ದರೆ ಮುಸ್ಲಿಮರ ಬಾಬಯ್ಯನಿಗೂ ನಡೆದುಕೊಳ್ಳುತ್ತಾರೆ. ವಿದ್ವಾಂಸರ ಅಭಿಪ್ರಾಯದಂತೆ ಪ್ರಕೃತಿಯು ಪ್ರತಿಯೊಂದನ್ನೂ ಪರಮಾತ್ಮ ಎಂದು ಭಾವಿಸುವ ಇವರು ಆ ದೇವರು, ಈ ದೇವರು ಎಂಬ ಭೇದ ತೋರದೆ ಒಳ್ಳೆಯದೆನ್ನುವುದೆಲ್ಲವನ್ನು ದೇವರೆಂದು ನಂಬಿದವರು.

ಹಾಗಿದ್ದರೆ ಗಂಗಡಿಕಾರ ಒಕ್ಕಲಿಗರಿಗೆ ನಿರ್ದಿಷ್ಟ ಧರ್ಮವಿಲ್ಲವೆ? ಎಂಬ ಪ್ರಶ್ನೆ ಎದುರಾಗುತ್ತದೆ. ಮೇಲ್ನೋಟಕ್ಕೆ ಎಲ್ಲ ಧರ್ಮಗಳ ಆಚಾರ- ವಿಚಾರ ಇವರ ವ್ಯವಹಾರಗಳಲ್ಲಿ ಬೆರೆತುಕೊಂಡಿರುವಂತೆ ಕಂಡುಬಂದರೂ ಇವರು ಮೂಲತಃ ಶೈವರಾಧಕರು. ಶೈವಧರ್ಮದ ಆಚರಣೆಗಳು ಕೃಷಿ ಸಂಸ್ಕೃತಿ ಪ್ರಧಾನವಾದ ಈ ಜನ ಸಮುದಾಯಕ್ಕೆ ಪ್ರಿಯವಾದುವುಗಳಾಗಿವೆ. ಶಿವ-ಪಾರ್ವತಿಯರ ಮಕ್ಕಳು ನಾವು ಎಂದು ಹೇಳಿಕೊಳ್ಳುವ ಹಲವಾರು ಜನಪದ ಕಥೆಗಳು ಇವರಲ್ಲಿ ಪ್ರಚಲಿತವಲ್ಲಿವೆ. ಶಿವ

ಎಂದರೆ 'ಶುಭಕರ' ಎಂದು ಭಾವಿಸಿ ತಾವು ಮಾಡುವ ಎಲ್ಲಾ ಕಾರ್ಯಗಳು ಸುಸೂತ್ರವಾಗಿ ನೆರವೇರಲಿ ಎಂದು ಶಿವನನ್ನು ಪೂಜಿಸುತ್ತಿದ್ದರು.

ಗಂಗಡಿಕಾರ ಒಕ್ಕಲಿಗರು ಪ್ರಾಚೀನ ಕಾಲದಿಂದಲೂ ಹಲವಾರು ಧರ್ಮಗಳಿಗೆ ನಡೆದುಕೊಂಡಿರುವುದಕ್ಕೆ ಆಧಾರಗಳು ಸಿಗುತ್ತವಾದರೂ ಅವರ ಧಾರ್ಮಿಕ ಆಚರಣೆಗಳನ್ನು ಸೂಕ್ತವಾಗಿ ಅವಲೋಕಿಸಿದಾಗ ಶೈವ ಧರ್ಮಪರವಾದ ನಿಲುವುಗಳೇ ಹೆಚ್ಚು ಕಂಡುಬರುತ್ತವೆ. ಹಬ್ಬ ಹರಿದಿನಗಳಲ್ಲಿ ಇವರು ವಿಭೂತಿಯನ್ನು ಹಣೆಗೆ ಧರಿಸುತ್ತಾರೆ. ಮರಣಿಸಿದ ವ್ಯಕ್ತಿಯ ಹಣೆಗೆ ವಿಭೂತಿಯನ್ನು ಬಳಿಯುತ್ತಾರೆ. ಕೃಷಿಗೆ ಸಂಬಂಧಿಸಿದಂತೆ ಬಗ್ಗ ಹಾಕಲು ತೆಗೆದುಕೊಂಡು ಹೋಗುವ ಬೀಜದ ಕುಕ್ಕೆಗೆ ವಿಭೂತಿ ಬಳಿಯುತ್ತಾರೆ. ಜೇನಕವನ್ನು ಮಾಡುವುದು, ಸೋಮವಾರ ಶಿವನ ವಾರವೆಂದು ಭಾವಿಸಿ ಆದಿನದ ಕೆಲಸ ಕಾರ್ಯಗಳಿಂದ ದನ ಕರುಗಳಿಗೆ ಬಿಡುವು ನೀಡುವುದು, ಅದರೊಂದಿಗೆ ಶಕ್ತಿಸ್ವರೂಪಿಣಿ ಪಾರ್ವತಿಯ ರೂಪಗಳೆನಿಸಿಕೊಂಡಿರುವುದನ್ನು ಗಮನಿಸಿದಾಗ ಮೂಲತಃ ಇವರು ಶೈವಧರ್ಮಕ್ಕೆ ಸಂಬಂಧಿಸಿದವರೆಂದು ಸ್ಪಷ್ಟವಾಗುತ್ತದೆ.

# ಕನ್ನಡನಾಡಿನ ಒಕ್ಕಲಿಗರು

ಪ್ರೊ. ಹ.ಕ. ರಾಜೇಗೌಡ

೧

ಕನ್ನಡನಾಡಿನ ಒಕ್ಕಲಿಗರನ್ನು ಕುರಿತು ಮಾತನಾಡುವಾಗ, ಬರೆಯುವಾಗ ಅನೇಕ ಸಮಸ್ಯೆಗಳು ಎದುರಾಗುತ್ತವೆ. ಒಕ್ಕಲಿಗರು ಒಂದು ಧರ್ಮವೇ, ಜಾತಿಯೇ, ಮತವೇ, ಜನಾಂಗವೆ? ಹೀಗೆ ಒಂದರ ಹಿಂದೆ ಒಂದು ಪ್ರಶ್ನೆಗಳು ಸೆಟೆದು ನಿಲ್ಲುತ್ತವೆ. ಇದಾವುದು ಅಲ್ಲ ಒಕ್ಕಲುತನ ಮಾಡುವವರೆಲ್ಲಾ ಒಕ್ಕಲಿಗರೆ ಎಂಬ ವಾದವನ್ನು ಒಕ್ಕಲಿಗರೂ ಕೆಲವರು ಸೇರಿದಂತೆ ಮಂಡಿಸುತ್ತಾರೆ. ಇಂಥವರು ಪರಂಪರೆಯನ್ನು ಗಮನಿಸುವುದಿಲ್ಲ. ದಾಖಲೆಗಳನ್ನು ನೋಡುವುದಿಲ್ಲ. ಸರಿಯಾಗಿ ಅಧ್ಯಯನ ಮಾಡಿ ಹೇಳಿದರೆ ಇತರರಂತೆ ಒಕ್ಕಲಿಗರೂ ಒಂದು ಜಾತಿಯೆಂಬುದು ಸ್ಪಷ್ಟವಾಗುತ್ತದೆ. ಕ್ರಿ.ಪೂ. ೩೦೦ರಲ್ಲಿ ಭಾರತಕ್ಕೆ ಬಂದ ಮೆಗಸ್ತನೀಸ್ ಭಾರತೀಯರನ್ನು ಏಳು ವೃತ್ತಿ ಪಂಗಡಗಳಾಗಿ ವಿಂಗಡಿಸಿರುವುದನ್ನು ಹೇಳಿ ಒಕ್ಕಲಿಗರದು ಎರಡನೆಯ ಸ್ಥಾನ ಎಂದಿದ್ದಾನೆ. ಇಷ್ಟರಿಂದ ಒಕ್ಕಲಿಗರು ಒಂದು ಜಾತಿಯಾಗುವುದಿಲ್ಲ. ಅವನು ಮುಂದುವರಿದು ಹೇಳುತ್ತಾನೆ. ''ಅಂತರ್ಪಂಗಡ ಮದುವೆ ನಿಷಿದ್ಧ. ಒಂದು ವೃತ್ತಿಯನ್ನು ಮಾಡುವವನು ಇನ್ನೊಂದು ವೃತ್ತಿಯನ್ನು ಮಾಡುವಂತಿಲ್ಲ''. ಈಗ ಒಕ್ಕಲಿಗರು ಸ್ಪಷ್ಟವಾಗಿ ಒಂದು ಜಾತಿಯೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಇಂದು ವೃತ್ತಿ ಮೂಲವನ್ನು ಯಾವ ಜಾತಿಯೂ ಉಳಿಸಿಕೊಂಡಿಲ್ಲ. ಬ್ರಾಹ್ಮಣ ವ್ಯವಸಾಯ ಮಾಡುತ್ತಾನೆ. ಒಕ್ಕಲಿಗ ಶಾಸ್ತ್ರಾಧ್ಯಾಯನ ಮಾಡುತ್ತಾನೆ. ಬಡಗಿ, ಕಮ್ಮಾರ, ಅಂತ್ಯಜ ಎಲ್ಲರೂ ತಮ್ಮ ಮೂಲ ವೃತ್ತಿಯನ್ನು ಉಳಿಸಿಕೊಂಡಿಲ್ಲ. ಆದರೆ ಇವರಾರೂ ತಮ್ಮ ಜಾತಿಯನ್ನು ಬಿಟ್ಟಿಲ್ಲ. ತಮ್ಮದು ಇನ್ನೂ ಇನ್ನೂ ಹಿಂದುಳಿದ ಕೆಳಜಾತಿ ಎಂದು ಪರಿಗಣಿಸಿ ಎಂದು ಚಳುವಳಿ ಮಾಡುತ್ತಿದ್ದಾರೆ. ಹಿಂದೊಬ್ಬರು ಮುಖ್ಯಮಂತ್ರಿ ನಾನೂ ಒಕ್ಕಲಿಗ ಎಂದರು. ತಾವು ಬೇಸಾಯ ಮಾಡುವುದರಿಂದ ಒಕ್ಕಲಿಗ ಎಂಬುದು ಅವರ ವಾದ. ಆದರೆ ವೇದವನೋದಿದ ಒಕ್ಕಲಿಗನನ್ನು ಬ್ರಾಹ್ಮಣ ಎಂದು ಸುತರಾಂ ಅವರು ಒಪ್ಪುವುದಿಲ್ಲ. ತನ್ನ ಮನೆಯ ಕಕ್ಕಸು ತಾನೆ ತೊಳೆದುಕೊಳ್ಳುವ ಒಕ್ಕಲಿಗರನ್ನು ಪರಿಶಿಷ್ಟರೆಂದು ಒಪ್ಪುವುದಿಲ್ಲ. ಹಾಗೆಯೇ ಒಕ್ಕಲಿಗರು ದನ ಕಾಯುತ್ತಾರೆ ಯಾದವರಲ್ಲ, ಕುರಿ ಕಾಯುತ್ತಾರೆ ಕುರುಬರಲ್ಲ, ವ್ಯಾಪಾರ ಮಾಡುತ್ತಾರೆ ವೈಶ್ಯರಲ್ಲ, ರಾಜಕಾರಣದಲ್ಲಿದ್ದರೆ

ಕ್ಷತ್ರಿಯರಲ್ಲ. ಇದು ಅನುಕೂಲ ವಾದವಲ್ಲದೆ ಮತ್ತೇನು?

ಗೌಡ ಎಂಬುದು ಜಾತಿ ಸೂಚಕವಲ್ಲ, ಪದವಿ ಸೂಚಕ. ಆದುದರಿಂದ ಗೌಡರು ಒಕ್ಕಲಿಗರಲ್ಲ ಎಂಬುದು ಮತ್ತೊಂದು ವಾದ. ವರ್ಣ ಧರ್ಮದ ಪ್ರಕಾರ ಒಕ್ಕಲಿಗರು ಗ್ರಾಮಗಳಲ್ಲಿ ನೆಲೆಸಬೇಕಾಗಿತ್ತು. ಅಲ್ಲಿ ಅವರೇ ಬಹು ಸಂಖ್ಯಾತರು. ಪ್ರತಿ ಹಳ್ಳಿಗೆ ಕೆಲವೊಮ್ಮೆ ಎರಡು ಮೂರು ಹಳ್ಳಿಗಳಿಗೊಂದು ಕುಟುಂಬದಂತೆ ಕೆಲಸಿಗರಿರುತ್ತಿದ್ದರು. ಕಮ್ಮಾರ, ಬಡಗಿ, ಅಗಸ, ಕ್ಷೌರಿಕ, ಹೊಲೆಯ ಮಾದಿಗ ಇವೆಲ್ಲಾ ಗ್ರಾಮಗಳಲ್ಲಿದ್ದ ಅಲ್ಪಸಂಖ್ಯಾತರು. ಇವರೆಲ್ಲ ತಾಂತ್ರಿಕರೂ ಹೌದು. ಗೌಡ ಗ್ರಾಮ ಮುಖಂಡ. ಗ್ರಾಮವೃದ್ಧರಿಂದ ಬಂದಿದೆ ಎಂಬುದು ಸ್ಪಷ್ಟ. ಈ ಪರಿಸ್ಥಿಯಲ್ಲಿ ಸ್ವಾಭಾವಿಕವಾಗಿಯೇ ಒಕ್ಕಲಿಗರೇ ಊರ ಗೌಡರಾಗುತ್ತಿದ್ದರು. ಆರಂಭದಲ್ಲಿ ಪದವಿ ಸೂಚಕವಾದರೂ ಅದು ಒಂದು ತಲೆಮಾರು ಉಳಿಯಲಿಲ್ಲವೆನಿಸುತ್ತದೆ. ಗೌಡನಿಗೆ ನಾಲ್ಕೈದು ಮಂದಿ ಮಕ್ಕಳಿದ್ದರೆ ಅವರೆಲ್ಲ ತಮ್ಮ ಹೆಸರಿನ ಮುಂದೆ ಗೌಡ ಸೇರಿಸಿಕೊಂಡರು. ಆಮೇಲೆ ಒಕ್ಕಲಿಗರೆಲ್ಲ ಗೌಡರೇ ಆದರು. ಊರ ಗಾಮುಂಡಗಳು ಎಂದು ಶಾಸನಗಳು ಹೇಳುತ್ತವೆ. ಆಮೇಲೆ ಒಕ್ಕಲಿಗರೆಲ್ಲ ಗೌಡರೇ ಆದರು. ಊರ ಗಾಮುಂಡಗಳು ಎಂದು ಶಾಸನಗಳು ಹೇಳುತ್ತವೆ. ಅಂದರೆ ಊರಲ್ಲಿದ್ದ ಒಕ್ಕಲಿಗ ರನ್ನೆಲ್ಲಾ ಗೌಡರೆಂದು ಕರೆಯಲಾಗಿದೆ. ಅನೇಕರು ಗೌಡಕುಲ ತಿಲಕರೆಂದೂ ಗೌಡ ಕುಲ ಕಮಲ ದಿವಾಕರರೆಂದೂ ತಮ್ಮನ್ನು ಕರೆದುಕೊಂಡಿದ್ದಾರೆ. ಗೌಡ ಒಂದು ಜಾತಿ ಸೂಚಕವೆಂಬುದನ್ನು ಇವು ಸ್ಪಷ್ಟವಾಗಿ ಪ್ರತಿಪಾದಿಸುತ್ತವೆ.

ಬೇರೆ ಕೆಲವು ಜನಾಂಗಗಳಲ್ಲಿ ಗೌಡರಿದ್ದಾರೆ. ಉದಾಹರಣೆಗೆ ಕುರುಬ ಗೌಡ, ಈಡಿಗ ಗೌಡ ಮುಂತಾದವು. ಮೊದಲಿಗೆ ಅಲ್ಪಸಂಖ್ಯಾತರಾಗಿದ್ದ ಇವರ ಸಂಖ್ಯೆ ಬೆಳೆದಂತೆಲ್ಲಾ ಅವರು ಬೇರೆ ಬೇರೆ ನೆಲೆಗಳನ್ನು ಮಾಡಿಕೊಂಡರು. ಅವು ಮುಂದೆ ಗ್ರಾಮಗಳಾದುವು. ಅಂತಹ ಕಡೆ ಅವರು ತಮ್ಮ ಗೌಡರನ್ನು ಮಾಡಿಕೊಂಡರು. ಇದು ತೀರಾ ಇತ್ತೀಚಿನ ಬೆಳವಣಿಗೆ. ವೀರ ಶೈವದಲ್ಲಿರುವ ಗೌಡರು ಒಕ್ಕಲಿಗರಿಂದ ಹೋದವರೆ. ಹದಿನೈದನೆಯ ಶತಮಾನಕ್ಕಿಂತ ಹಿಂದಿನ ಗೌಡರೆಲ್ಲ ಒಕ್ಕಲಿಗರೇ ಆಗಿರುತ್ತಿದ್ದರು. ಒಕ್ಕಲಿಗರು ಒಂದು ಜಾತಿಯೂ ಹೌದು ಜನಾಂಗವೂ ಹೌದೆಂಬುದಕ್ಕೆ ಅನೇಕ ಆಧಾರಗಳು ಕ್ರಿಸ್ತ ಪೂರ್ವದಿಂದಲೂ ದೊರೆಯುತ್ತವೆ. ಒಕ್ಕಲಿಗರು ಅನಕ್ಷರಸ್ಥ ಸಮಾಜಕ್ಕೆ ಸೇರಿದವರಾದುದರಿಂದ ತಮ್ಮ ಮತ್ತು ಜನಾಂಗದ ಸಾಧನೆಗಳನ್ನು ಬರೆದಿಡುವ ಪದ್ಧತಿ ಇರಲಿಲ್ಲ. ಆದುದರಿಂದ ಈ ಬೃಹತ್ ಜನಾಂಗದ ಸಾಧನೆ ಸಂಸ್ಕೃತಿಗಳನ್ನು ಅಕ್ಷರ ಬಲ್ಲ ಬೇರೆಯವರೂ ದಾಖಲು ಮಾಡುವ ಗೋಜಿಗೆ ಹೋಗಲಿಲ್ಲ. ಮುಂದೆ ಈ ಗ್ರಾಮ ಸಂಸ್ಕೃತಿ ನಿರ್ಲಕ್ಷ್ಯಕ್ಕೆ ಒಳಗಾಯಿತು. ಇಂದಿಗೂ ಒಕ್ಕಲಿಗರೂ ಈ ದೇಶಕ್ಕೆ ನೀಡಿರುವ ಮಹಾನ್ ಸಂಸ್ಕೃತಿಯನ್ನು ಒಪ್ಪಲು ಅನೇಕರು ತಯಾರಿಲ್ಲ. ಯಾರು ಏನು ಹೇಳಲಿ ಒಕ್ಕಲಿಗರದು ಈ ಮೂಲ ಸಂಸ್ಕೃತಿ, ಅವರು ಬೇರಾವ ಜಾತಿಗೂ ಕಡಿಮೆ ಇಲ್ಲದಂಥ ಕೊಡುಗೆಯನ್ನು ನೀಡಿದ್ದಾರೆಂಬುದು ತೋರಿಸುವುದೇ ಈ ಲೇಖನದ ಉದ್ದೇಶ.

## ೨

ಮಾನವನ ಉಗಮ ಮತ್ತು ವಿಕಾಸದ ಇತಿಹಾಸವನ್ನು ಹೊಂದಿರುವ ಪ್ರಾಚೀನ ನೆಲೆಗಳಲ್ಲಿ ಭಾರತವೂ ಮುಖ್ಯವೂ ಪ್ರಧಾನವೂ ಆದ ಒಂದು ನೆಲೆ. ಮಾನವ ವಿಕಾಸದ ಕಾಲವನ್ನು ಲಕ್ಷಾಂತರ ವರ್ಷಗಳಷ್ಟು ಹಿಂದಕ್ಕೆ ಮಾನವ ಶಾಸ್ತ್ರಜ್ಞರು ಒಯ್ದಿದ್ದಾರೆ. ಮೊದಲಿಗೆ ಇತರ ಪ್ರಾಣಿಗಳಂತೆ ಕಾಡುಮೇಡುಗಳಲ್ಲಿ, ಗುಹೆಗಳಲ್ಲಿ ಬದುಕುತ್ತಿದ್ದ ಮನುಷ್ಯ ತನ್ನ ಬುದ್ಧಿ ವಿಕಾಸವಾದಂತೆಲ್ಲಾ ತನ್ನ ಜೀವನ ಶೈಲಿಯನ್ನು, ಜೀವನ ಮಾರ್ಗವನ್ನು ರೀತಿನೀತಿಗಳನ್ನು ಬದಲಾಯಿಸುತ್ತಾ ಬಂದಿರುವುದನ್ನು ಮಾನವ ವಿಜ್ಞಾನಿಗಳು ಗುರುತಿಸಿದ್ದಾರೆ. ಈ ಬದಲಾವಣೆಯ ಅಥವಾ ವಿಕಾಸದ ಕಾಲ ಎಣಿಕೆಗೆ ಸಿಗಲಾರದಷ್ಟು ವಿಶಾಲವಾದುದೆಂಬ ಅಭಿಪ್ರಾಯವೂ ಇದೆ. ಹೀಗೆ ಏಕವಾಗಿ ಬದುಕುತಿದ್ದ ಮಾನವ ಸಮಾಜದಲ್ಲಿ ಕೂಡ ಅನೇಕ ಮಜಲುಗಳು ಒಳಗೊಂಡಿರುವುದನ್ನೂ ಗುರುತಿಸಲಾಗಿದೆ. ಕಾಡಿನಲ್ಲಿ ಗುಹೆಯಲ್ಲಿ ಇತರ ಪ್ರಾಣಿಗಳಂತೆಯೇ ಜೀವಿಸುತ್ತಿದ್ದ ಮನುಷ್ಯರಲ್ಲಿ ಗುಂಪಿನ ನಾಯಕನೇ ಸರ್ವಾಧಿಕಾರಿ ಯಾಗಿರುತ್ತಿದ. ಆಚರಣೆಗಳಿಗೆ ಸಂಬಂಧಿಸಿದಂತೆ ಹಿರಿಯನೊಬ್ಬ ಇರುತ್ತಿದ್ದ. ಈ ಮುಂದಾಳುಗಳು ಅಥವಾ ನಾಯಕರೇ ಜನಾಂಗವನ್ನು ನಿಯಂತ್ರಿಸುತ್ತಿದ್ದರು. ಇದರಲ್ಲಿ ಯಾವುದೇ ಜಾತಿಮತಗಳ ಗೊಂದಲವಿರಲಿಲ್ಲ. India's recorded civilisation is one of the longest in the course of world history and its mythology spans the whole of that time and more. For some periods indeed since Hindu scholarship traditionally has little interest in history as such, mythology and sacred lore constitute the sole recorded and the changes that may be noted in such traditional meterials are thus vital clue to our knowledge of social political change. ಇದು ಅನಕ್ಷರ ಸಮಾಜದ ಇತಿಹಾಸವನ್ನು ಹೇಗೆ ಕಡೆಗಣಿಸಲಾಯಿತೆಂಬುದನ್ನೂ ಅದರ ಪ್ರಾಚೀನತೆಯನ್ನು ತೋರಿಸುತ್ತದೆ.

ಭಾರತದಲ್ಲಿ ಜನಾಂಗ ಅಧ್ಯಯನಕ್ಕೆ ಸಂಬಂಧಿಸಿದಂತೆ ದೊರೆಯುವ ಅತ್ಯಂತ ಪ್ರಾಚೀನ ಬರಹ ರೂಪದ ದಾಖಲೆಗಳಲ್ಲಿ ಕ್ರಿ.ಪೂ. ೩೦೦ರಲ್ಲಿ ಭಾರತಕ್ಕೆ ಬಂದ ಮೆಗಾಸ್ತನೀಸನ ಬರಹವೇ ಮೊದಲನೆಯದೆಂದು ಹೇಳಬಹುದಾಗಿದೆ. ಅವನು ಬಂದ ಕಾಲದಲ್ಲಿ ವರ್ಣಧರ್ಮ ಇನ್ನೂ ಜಾರಿಗೆ ಬಂದಂತೆ ಕಾಣುವುದಿಲ್ಲ. ಭಾರತದ ಜನಜೀವನದ ಪ್ರಾಚೀನತೆಯನ್ನು ಕುರಿತಂತೆ ಅಯೋನಿಸನಿಂದ ಸಂದ್ರಾಕೊಟೂಸ್ ಅಂದರೆ ಚಂದ್ರಗುಪ್ತ ಮೌರ್ಯನವರೆಗೆ ನೂರೈವತ್ತು ಮೂರು ರಾಜರುಗಳು ಆಗಿಹೋಗಿದ್ದಾರೆಂದು ಲೆಕ್ಕಹಾಕಿದ್ದಾರೆ. ಈ ರಾಜರುಗಳ ಆಳ್ವಿಕೆಯ ಒಟ್ಟುಕಾಲ ಆರು ಸಾವಿರ ನಲವತ್ತೆರಡು ವರ್ಷಗಳು ಎಂದು ಹೇಳಿದ್ದಾನೆ. ಮೆಗಾಸ್ತನೀಸನು ಇಂಡಿಯ ಒಂದು ವಿಶಾಲ ದೇಶವೆಂದೂ ಅದರ ಜನ ಸಂಖ್ಯೆ ಅಪಾರವೆಂದೂ ಹೇಳಿ ಅವನು ಬಂದ ಕಾಲಕ್ಕೆ ಜನರಲ್ಲಿದ್ದ ಮತ, ಜಾತಿ ಅಥವಾ ಗುಂಪುಗಳ ರೀತಿನೀತಿ, ಕಟ್ಟುಪಾಡು ಆಚಾರ ವಿಚಾರಗಳನ್ನು ಕುರಿತು ಸ್ಪಷ್ಟವಾಗಿ ಹೇಳಿದ್ದಾನೆ.

''ಇಂಡಿಯಾದಲ್ಲಿರುವ ಜನರನ್ನು ಏಳು ಪಂಗಡಗಳಾಗಿ ವಿಂಗಡಿಸಿದ್ದಾರೆ. ಒಂದನೆಯ ಪಂಗಡಕ್ಕೆ ಸೇರಿದವರನ್ನು ವೇದಾಂತಿಗಳೆಂದು ಕರೆಯುತ್ತಾರೆ. ಇವರ ಸಂಖ್ಯೆ ಕಡಿಮೆ. ಇವರು ಜನರ ಪರವಾಗಿ ದೇವರ ಕೆಲಸಗಳನ್ನು ಮಾಡುತ್ತಾರೆ. ಇದಕ್ಕೆ ಪ್ರತಿಫಲವಾಗಿ ಜನರು ಬೆಲೆಯಾದ ದತ್ತಿ ದಾನಗಳನ್ನು ಕೊಡುತ್ತಾರೆ. ಜನರ ಒಳಿತಿಗಾಗಿ ಯೋಚಿಸುತ್ತಾ ಲೌಕಿಕ ಆಸ್ತಿಪಾಸ್ತಿಗಳಿಗೆ ಆಸೆ ಪಡದ ಜ್ಞಾನಿಗಳಾದವರು ಯಾರು ಬೇಕಾದರೂ ವೇದಾಂತಿಗಳಾಗಬಹುದು.

ಎರಡನೆಯ ಪಂಗಡ ಬೇಸಾಯಗಾರರ ಪಂಗಡ. ಇವರ ಸಂಖ್ಯೆ ಉಳಿದೆಲ್ಲರಿಗಿಂತ ಹೆಚ್ಚು. ಇವರು ತಮ್ಮ ಜೀವಮಾನ ಪರ್ಯಂತ ಬೇಸಾಯ ಮಾಡಿಕೊಂಡಿರುತ್ತಾರೆ. ಇವರು ದೇಶಕ್ಕೆ ಬಹು ಉಪಯುಕ್ತರಾದವರೆಂಬ ಭಾವನೆಯಿದೆ. ಈ ಒಕ್ಕಲಿಗರು ತಮ್ಮ ಹೆಂಡತಿ ಮಕ್ಕಳ ಸಮೇತ ಹಳ್ಳಿಗಳಲ್ಲಿ ನೆಲಸಿರುತ್ತಾರೆಯೇ ವಿನಃ ಪಟ್ಟಣಗಳಿಗೆ ಹೋಗುವುದೇ ಇಲ್ಲ. ದೇಶಕ್ಕೆ ಆಪತ್ತು ಬಂದಾಗ ರಾಜ ಕರೆದರೆ ತಮ್ಮ ಪ್ರಾಣದ ಹಂಗು ತೊರೆದು ಹೋರಾಡುತ್ತಾರೆ. ಸಾಗುವಳಿ ಮಾಡಿದ ಜಮೀನಿಗೆ ಕಂದಾಯ ಕೊಡುತ್ತಾರೆ.

ಈ ದೇಶದವರು ಒಕ್ಕಲಿಗರನ್ನು ಪವಿತ್ರರೂ ಪರಿಶುದ್ಧರೂ ಆದ ಜನರೆಂದು ಭಾವಿಸುತ್ತಾರೆ. ಸುತ್ತಮುತ್ತ ಯುದ್ಧದ ಕಹಳೆ ಮೊಳಗುತ್ತಿದ್ದರೂ ರೈತರ ತಂಟೆಗೆ ಯಾರೂ ಹೋಗುವುದಿಲ್ಲ. ಯುದ್ಧದಲ್ಲಿ ತೊಡಗಿರುವ ಪಕ್ಷ ಪ್ರತಿಪಕ್ಷಗಳು ರಕ್ತದ ಕೋಡಿ ಹರಿಸಬಹುದು. ಆದರೆ ರೈತರು ಮಾತ್ರ ಸುರಕ್ಷಿತವಾಗಿರುತ್ತಾರೆ. ಭೂಮಿಯಲ್ಲಿ ಬೆಳೆದ ಬೆಳೆ ಹಾಳು ಮಾಡುವ ಕೆಲಸಕ್ಕೆ ಶತ್ರುಗಳೂ ಕೈ ಹಾಕುವುದಿಲ್ಲ.

ಹಳ್ಳಿಗಳಲ್ಲಿ ವಾಸಮಾಡುವ ಇವರ ಅಗತ್ಯಗಳು ಬಹಳ ಕಡಿಮೆ. ತಮಗೆ ಬೇಕಾದುದೆಲ್ಲವನ್ನು ಸ್ವತಃ ಬೆಳೆಯುತ್ತಾರೆ. ಇವರು ತಮಗೆ ಬೇಕಾದ ಬಟ್ಟೆಯನ್ನು ತಾವೇ ನೇಯ್ದು ಕೊಳ್ಳುತ್ತಾರೆ. ಆದರೆ ರಾಜ ರೈತರ ಅನುಕೂಲಕ್ಕಾಗಿ ಕಮ್ಮಾರ, ಬಡಗಿ ಮುಂತಾದ ಕೆಲಸಿಗರನ್ನು ಹಳ್ಳಿಗೊಂದು ಕುಟುಂಬದಂತೆ ಇಟ್ಟಿರುತ್ತಾನೆ. ಇವರು ರೈತರಿಗೆ ಬೇಕಾದ ಉಳುವ, ಅಗೆಯುವ ಪರಿಕರಗಳನ್ನು ಮಾಡಿಕೊಡುತ್ತಾರೆ. ಗ್ರಾಮದ ಆಡಳಿತವನ್ನು ರೈತರೇ ನೋಡಿಕೊಳ್ಳುತ್ತಾರೆ. ಊರಿನ ಹಿರಿಯರ ಮಾತನ್ನು ಯಾರೂ ಮೀರುವಂತಿಲ್ಲ. ತಾವು ಬೆಳೆದುದರಲ್ಲಿ ಅರ್ಧವನ್ನು ರಾಜನಿಗೆ ಕೊಡುತ್ತಾರೆ. ಉಳಿದರ್ಧದಲ್ಲಿ ಕೆಲಸಿಗರಿಗೆ ಕೊಟ್ಟು, ಉಳಿದುದರಲ್ಲಿ ತಾವು ಜೀವಿಸುತ್ತಾರೆ. ರಾಜನಲ್ಲದೆ ಬೇರೆ ಯಾರೂ ಇವರ ಗ್ರಾಮಾಡಳಿತದಲ್ಲಿ ಕೈಹಾಕುವಂತಿಲ್ಲ. ಮನೆಮಂದಿಯೆಲ್ಲ ಬೆಳಗಿನಿಂದ ಸಂಜೆಯವರೆಗೆ ಹೊಲದಲ್ಲಿ ಕೆಲಸ ಮಾಡುತ್ತಾರೆ. ಇಂಡಿಯಾ ದೇಶದ ರೈತರು ಮಾಂಸಾಹಾರಿಗಳು. ಆದರೆ ಮದ್ಯಪಾನ ಮಾಡುವುದು ಕೀಳೆಂದು ಭಾವಿಸುತ್ತಾರೆ. ಅಂತಹವರನ್ನು ಜಾತಿಯಿಂದಷ್ಟೇ ಅಲ್ಲ ಹಳ್ಳಿಯಿಂದಲೇ ಹೊರಹಾಕುತ್ತಾರೆ. ಹೀಗೆ ರೈತರು ಸರಳವೂ ಪರಿಶುದ್ಧವೂ ಆದ ಜೀವನ ನಡೆಸುತ್ತಾರೆ.

ಮೆಗಾಸ್ತನೀಸನ ಜನಾಂಗದ ವಿವರಣೆ ಅವರವರು ಮಾಡುವ ವೃತ್ತಿ ಆಧಾರಿತವೆಂದೂ ಅದು ಜಾತಿ ಅಥವಾ ಜನಾಂಗವನ್ನು ಸೂಚಿಸುವುದಿಲ್ಲವೆಂದು ವಾದಿಸುವವರಿದ್ದಾರೆ. ಈ ವಾದಕ್ಕೂ

ಮೆಗಾಸ್ತನೀಸ್ ಸೂಕ್ತ ಮಾಹಿತಿಗಳನ್ನು ಒದಗಿಸಿದ್ದಾನೆ. ಈ ರೀತಿಯಲ್ಲಿ ಇಂಡಿಯಾ ದೇಶದ ಸಮಾಜವನ್ನು ಏಳು ಭಾಗವಾಗಿ ವಿಂಗಡಿಸಲಾಗಿದೆ. ಇವರಲ್ಲಿ ಅಂತರ್ಪಂಗಡ ವಿವಾಹವಿಲ್ಲ. ಒಂದು ಪಂಗಡದವನು ತನ್ನ ವೃತ್ತಿಯನ್ನು ಬಿಟ್ಟು, ಬೇರೊಂದು ವೃತ್ತಿಯನ್ನು ಅನುಸರಿಸುವಂತಿಲ್ಲ. ಉದಾಹರಣೆಗೆ ಬೇಸಾಯಗಾರರ ಪಂಗಡಕ್ಕೆ ಸೇರಿದವನು ಕೈಗಾರಿಕೆಯಲ್ಲಿ ತೊಡಗಿರುವವರ ಪಂಗಡಕ್ಕೆ ಸೇರಿದ ಹೆಣ್ಣನ್ನು ಮದುವೆಯಾಗುವಂತಿಲ್ಲ. ಅಲ್ಲದೆ ಒಬ್ಬ ಮನುಷ್ಯ ಎರಡು ಕಸುಬುಗಳನ್ನು ಮಾಡುವಂತಿಲ್ಲ. ಒಬ್ಬನು ಒಂದು ಪಂಗಡವನ್ನು ಬಿಟ್ಟು ಇನ್ನೊಂದು ಪಂಗಡಕ್ಕೆ ಹೋಗುವಂತಿಲ್ಲ. ಆದರೆ ಮೊದಲನೆ ಪಂಗಡಕ್ಕೆ ಸೇರಿದ ವೇದಾಂತಿಗಳು ಯಾವ ಪಂಗಡದವರಾದರೂ ಆಗಬಹುದು.''

ಆರ್ಯರು ಜಾರಿಗೆ ತಂದ ಜಾತಿಪದ್ಧತಿಯ ಯಾವ ಪ್ರಸ್ತಾಪವೂ ಮೆಗಾಸ್ತನೀಸನಲ್ಲಿ ಇಲ್ಲ. ಅವನ ನಂತರ ನಾಲ್ಕೂರು ವರ್ಷಗಳ ಮೇಲೆ ಭಾರತಕ್ಕೆ ಬಂದ ಹೊಯೆತ್ಸಾಂಗ ಮೊಟ್ಟಮೊದಲಿಗೆ ವರ್ಣ ಧರ್ಮದ ಪ್ರಸ್ತಾಪ ಮಾಡಿದ್ದಾನೆ. ''ಹಿಂದೂಗಳು ತಮ್ಮ ಜಾತಿಗಳನ್ನು ವರ್ಣಗಳು ಅಂದರೆ ಬಣ್ಣಗಳು ಎಂದು ಕರೆಯುತ್ತಾರೆ. ವಂಶಾವಳಿಯ ದೃಷ್ಟಿಯಿಂದ ಅವನ್ನು ಜಾತಕ ಅಥವಾ ಹುಟ್ಟುಗಳೆಂದೂ ಕರೆಯುತ್ತಾರೆ. ಮೊದಲನೆಯವರು ಬ್ರಹ್ಮಣರು. ಇವರು ಬ್ರಹ್ಮನ ತಲೆಯಿಂದ ಹುಟ್ಟಿದವರಂತೆ. ಎರಡನೆಯವರು ಕ್ಷತ್ರಿಯರು. ಇವರು ಬ್ರಹ್ಮನ ಭುಜದಿಂದ ಹುಟ್ಟಿದವರಂತೆ. ಮೂರನೆಯವರು ವೈಶ್ಯರು. ಇವರು ಬ್ರಹ್ಮನ ತೊಡೆಯಿಂದ ಹುಟ್ಟಿದರಂತೆ. ನಾಲ್ಕನೆಯವರು ಶೂದ್ರರು ಇವರು ಬ್ರಹ್ಮನ ಪಾದದಿಂದ ಹುಟ್ಟಿದರಂತೆ. ಈ ನಾಲ್ಕು ವರ್ಣಗಳವರು ಜಾತಿಯ ಪರಿಶುದ್ಧತೆಯನ್ನು ಉಳಿಸಿಕೊಳ್ಳಲು ಅವರವರ ಜಾತಿಯಲ್ಲಿ ಮಾತ್ರ ಮದುವೆಯಾಗಬಹುದು. ಇವರಲ್ಲದೆ ಅಂತ್ಯಜರೆಂಬ ಇನ್ನೊಂದು ಜಾತಿಯ ಜನರೂ ಇದ್ದಾರೆ.

ಭಾರತಕ್ಕೆ ಬಂದು ಹೋದ ಪ್ರವಾಸಿಗರ ಮೇಲಿನ ಅಭಿಪ್ರಾಯಗಳು ವೃತ್ತಿಯಾಧಾರಿತ ಪಂಗಡಗಳಾಗಿದ್ದ ಭಾರತೀಯ ಸಮಾಜ ಬಣ್ಣಗಳಾಗಿ ಪರಿವರ್ತನೆಯಾಯಿತೆಂಬುದು ಒಂದು ಸ್ಪಷ್ಟ ಚಿತ್ರವನ್ನು ಕೊಡುತ್ತದೆ. ಇದರಿಂದ ಭಾರತ ಆದಿಯಿಂದಲೂ ವ್ಯವಸಾಯ ಪ್ರಧಾನವಾದ ಮಾನವ ನೆಲೆ ಎಂಬುದನ್ನು ಸಂಶೋಧಕರು ಪ್ರತಿಪಾದಿಸುತ್ತಾ ಬಂದಿದ್ದಾರೆ. ಮಾನವನ ಅತ್ಯಂತ ಪ್ರಾಚೀನವಾದ ನೆಲೆಗಳಲ್ಲಿ ಹರಪ್ಪ, ಮೊಹೆಂಜದಾರೊ ಮತ್ತು ನದಿಯ ಕಣಿವೆಗಳು ಸೇರುತ್ತವೆ. ಈ ಪ್ರದೇಶಗಳಲ್ಲಿ ಗ್ರಾಮ ಸಂಸ್ಕೃತಿ ತನ್ನ ಉಚ್ಛ್ರಾಯ ಸ್ಥಿತಿಯನ್ನು ಮುಟ್ಟಿದ್ದಿತು. They introduced a neolithic village culture based on agriculture by about 5000 BC. ಇದರಿಂದ ವ್ಯವಸಾಯಗಾರರು ಮತ್ತು ಅವರ ಗ್ರಾಮ ಸಂಸ್ಕೃತಿಯೆ ಭಾರತದ ಮುಖ್ಯ ಸಂಸ್ಕೃತಿಯಾಗಿದ್ದಿತೆಂಬುದು ಖಚಿತವಾಗುತ್ತದೆ.

ಆರ್ಯರು ಭಾರತಕ್ಕೆ ಹಾಗೆಯೇ ಬೇರೆ ಬೇರೆ ಕಡೆಗೆ ವಲಸೆ ಬಂದರು. ಇವರ ವಲಸೆ ಕಿ.ಪೂ. ೧೫೦೦ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆರ್ಯರ ವಲಸೆ ಭಾರತೀಯ ಜನಜೀವನವನ್ನು ಛಿದ್ರ ಛಿದ್ರ ಮಾಡಿತೆಂದು ಹೇಳಬಹುದು. ಆವರೆಗೆ ಏಕವಾಗಿದ್ದ ಕೇವಲ ವೃತ್ತಿ ಆಧಾರದ ಪಂಗಡಗಳಾಗಿ ಭಾರತೀಯರು ವರ್ಣ ಅಥವಾ ಜಾತಿಗಳಾಗಿ, ಮೇಲು ಕೀಳುಗಳಾಗಿ

ವಿಭಜನೆಯಾಗುತ್ತಾ ನಡೆದಿರುವುದನ್ನು ಕಾಣಬಹುದಾಗಿದೆ. ಮುಂದೆ ಅದು ಅನೇಕಾನೇಕ ಧರ್ಮ, ಉಪಧರ್ಮ, ಜಾತಿ, ಉಪಜಾತಿ, ಪಂಗಡ ಒಳಪಂಗಡಗಳಾಗಿ ಒಡೆಯುತ್ತಾ ಬಂದಿತು. ಭೌಗೋಳಿಕ ಮತ್ತು ಸಾರಿಗೆ ಸಂಪರ್ಕದ ಅಭಾವದಿಂದಾಗಿ ಭಾರತದ ರೈತ ಸಮುದಾಯ ಒಂದಾಗಿರಲು ಆಗಲಿಲ್ಲ. ಜೊತೆಗೆ ಮುಂದೆ ಅನೇಕಾನೇಕ ಧರ್ಮಪ್ರವರ್ತಕರು ಹೊಸ ಹೊಸ ಧರ್ಮಗಳನ್ನು ಆರಂಭಿಸಿ ದಂತೆಲ್ಲಾ ಅವುಗಳನ್ನು ಅಪ್ಪಿದವರು ಬಹುತೇಕವಾಗಿ ರೈತ ಜನಾಂಗದವರೇ.

೩

ಕನ್ನಡ ನಾಡಿನ ಒಕ್ಕಲಿಗ ಜನಾಂಗದ ಬಗೆಗೆ ಕ್ರಿಸ್ತಪೂರ್ವದಿಂದ ಇಲ್ಲಿಯವರೆಗೆ ಅನೇಕ ಲಿಖಿತ ಮತ್ತು ಕಂಠಸ್ಥ ಆಧಾರಗಳು ದೊರೆಯುತ್ತವೆ. ಇವುಗಳ ಆಧಾರದಿಂದ ಒಕ್ಕಲಿಗರು ಈ ನಾಡಿನ ಬಹುಸಂಖ್ಯಾತ ಜನಾಂಗವಾಗಿದ್ದು ನಾನಾ ಕಾರಣಗಳು ಮತ್ತು ಪ್ರಲೋಭನೆಗೆ ಒಳಗಾಗಿ ಬೇರೆ ಬೇರೆ ಮತಧರ್ಮಗಳಿಗೆ ಪಲಾಯನ ಮಾಡಿರುವುದು ಕಂಡು ಬರುತ್ತದೆ. ಇದರಲ್ಲಿ ಬಹು ಮುಖ್ಯವಾದುದು ಆರ್ಯರು ಜಾರಿಗೆ ತಂದ ವರ್ಣ ಧರ್ಮದಲ್ಲಿ ಅಲ್ಲಿಯವರೆಗೆ ಎರಡನೆಯ ಸ್ಥಾನದಲ್ಲಿದ್ದು ಅತ್ಯಂತ ಪವಿತ್ರರೆನಿಸಿಕೊಂಡಿದ್ದ ಈ ಜನಾಂಗವನ್ನು ನಾಲ್ಕನೆಯ ಸ್ಥಾನಕ್ಕೆ ತಳ್ಳಿ, ರೈತರನ್ನು ಶೂದ್ರರೆಂದು ಕರೆದುದು. ಇಲ್ಲಿಂದ ಮುಂದೆ ತಮ್ಮ ಮೊದಲಿನ ಸ್ಥಾನವನ್ನು ಉಳಿಸಿಕೊಳ್ಳಲು ಅವರು ಬೇರೆ ಬೇರೆ ಧರ್ಮಗಳಿಗೆ ವಲಸೆ ಹೋಗಿದ್ದಾರೆ. ಒಕ್ಕಲಿಗರಿಗೂ ಗೋತ್ರ ಸೂತ್ರಗಳು ಮುಂತಾಗಿ ವೇದಾಂತಿಗಳಿಗಿದ್ದ ಎಲ್ಲಾ ಸಾಮಾಜಿಕ ಗೌರವಗಳೂ ಇದ್ದವೆಂಬುದಕ್ಕೆ ಈ ಕಥೆಯನ್ನು ನೋಡಬಹುದಾಗಿದೆ. ''ಮತ್ತೊಂದು ದಿವಸ ಮಯೋಧ್ಯಾಪುರದೊಕ್ಕಲಿಗಂ ಬಲ ಭದ್ರನೆಂಬಾತನ ಹೆಂಡತಿ ಅತಿರೂಪವಂತೆ ಭದ್ರೆಯೆಂಬಳಂ ಬ್ರಹ್ಮ ರಾಕ್ಷಸಂ ಕಂಡು ಮರುಳ್ಗೊಂಡು ಕುಡಿಯ ವೇಷದೊಳ್ ಬಂದು ಮನೆಯಂ ಪುಗುವುದು ಮವೆಸ ನಡೆಯಂ ಬಲಭದ್ರನ ಪೆಂಡತಿಯರಿದು ಗರ್ಭಗೃಹದ ಕದವನಿಕ್ಕುವುದುಂ ಅನಿರೊಳ್ ಬಲಭದ್ರಂ ಬಂದು ನಿಂದಿರಲು ಬ್ರಹ್ಮರಾಕ್ಷಸಂ ಮನೆಯೊಡೆಯ ನಾನೆಂದು ವಾದಿಸಲ್ಕಾ ಈರ್ವರ ರೂಪಮಂ ಕಂಡು ಗೋತ್ರಜರ್ ಚೋದ್ಯಂಬಟ್ಟು, ಅವರಂ ಕರೆದು ಕುರುಹು ಕೂನಂಗಳಂ ಗೋತ್ರ ಸೂತ್ರಂಗಳಂ ಬೆಸಗೊಂಡು'' ಯಾರು ನಿಜವಾದ ಬಲಭದ್ರನೆಂದು ಕಂಡುಹಿಡಿದರು.

ಬಲಭದ್ರನ ಕತೆ ಒಕ್ಕಲಿಗರ ಪ್ರಾಚೀನತೆಯನ್ನೂ ಅವರ ಸಾಮಾಜಿಕ ಸ್ಥಾನಮಾನಗಳನ್ನು ಸೂಚಿಸುತ್ತದೆ. ಈ ಬಲಭದ್ರನು ಅಯೋಧ್ಯೆಯ ಒಕ್ಕಲಿಗ. ಇದರಿಂದ ರಾಮಾಯಣ ಕಾಲದಲ್ಲಿನ ಒಕ್ಕಲಿಗರನ್ನು ಈ ಕಥೆ ಪ್ರತಿನಿಧಿಸುತ್ತದೆ. ಆಗ ಈ ಜನಾಂಗವು ಮೆಗಾಸ್ತನೀಸನು ಹೇಳುವ ಜನಾಂಗ ಅಥವಾ ಪಂಗಡ ವಿಭಜನೆಯಂತೆ ಒಕ್ಕಲಿಗರು ಎರಡನೆಯ ಸ್ಥಾನದಲ್ಲಿದ್ದರೆಂಬುದನ್ನು ಸೂಚಿಸುತ್ತದೆ. ಮೊದಲನೆಯ ಸ್ಥಾನದಲ್ಲಿದ್ದ ವೇದಾಂತಿಗಳ ಪಂಗಡಕ್ಕಿದ್ದಂತೆ ಇವರಿಗೂ ಗೋತ್ರ ಸೂತ್ರಗಳಿದ್ದು ವೆಂಬುದೂ ಬಲಭದ್ರನೆಂಬ ಒಕ್ಕಲಿಗನ ಕಥೆಯಿಂದ ತಿಳಿದುಬರುತ್ತದೆ.

ಕನ್ನಡ ನಾಡಿಗೆ ಸೀಮಿತವಾದ ಒಕ್ಕಲಿಗರ ಬಗೆಗಿನ ಕಥೆಯು ಹೀಗಿದೆ. ''ಕಲ್ಯಾಣ ಪಟ್ಟಣದಲ್ಲಿ ಒಕ್ಕಲಿಗ ಮುದ್ದೇಗೌಡನೆಂಬ ಕುಲಮುಖಂಡನಿದ್ದ. ಅವನದು ಅತ್ಯಂತ ಶ್ರೀಮಂತಿಕೆಯ ಕುಟುಂಬ. ಅಲ್ಲಿನ ಭೂಮಿಯೆಲ್ಲಾ ಅವನಿಗೆ ಸೇರಿದುದು. ಅವನಿಗೆ ಏಳು ಹಟ್ಟಿಯ ತುಂಬ ದನಗಳಿದ್ದವು. ಏಳು ಹಟ್ಟಿಯ ತುಂಬ ಕುರಿಗಳಿದ್ದವು. ಅವನ ಮನೆಯಲ್ಲಿ ಹಂಡೆಗಟ್ಟಲೆ ಹಾಲು ಕರೆಯುತ್ತಿತ್ತು. ಕಲ್ಯಾಣ ಮಂಟಪದವರೆಲ್ಲಾ ಅವನಿಂದಲೇ ಹಾಲು ತೆಗೆದುಕೊಂಡು ಹೋಗುತ್ತಿದ್ದರು. ಧವಸಧಾನ್ಯ ತುಂಬಿದ ಅಸಂಖ್ಯಾತ ಹಗೇವುಗಳಿದ್ದುವು. ಅರಮನೆಯೂ ಸೇರಿದಂತೆ ಕಲ್ಯಾಣ ಪಟ್ಟಣದ ಜನರಿಗೆ ಅವನೇ ಅಪಾರ ಧಾನ್ಯ ಒದಗಿಸುತ್ತಿದ್ದವನು. ಮುದ್ದೇಗೌಡ ರಾಜನಿಗೆ ಮೂಟೆಗಟ್ಟಲೆ ಹೊನ್ನುಗಳ ತೆರಿಗೆ ಕೊಡುತ್ತಿದ . ಈತ ಆ ರಾಜ್ಯದ ಒಕ್ಕಲಿಗ ಜನಾಂಗದ ಮುಖಂಡನಾಗಿದ್ದು ಇದೇ ಜನಾಂಗದ ಕ್ಷೇಮವನ್ನು ನೋಡಿಕೊಳ್ಳುವನಾಗಿದ್ದ. ಅವನ ತೀರ್ಮಾನವನ್ನು ಒಕ್ಕಲಿಗರು ಮಾನ್ಯವೆಂದು ಪರಿಗಣಿಸುತ್ತಿದ್ದರು.

ಮುದ್ದೇಗೌಡನಿಗೆ ಏಳು ಜನ ಗಂಡು ಮಕ್ಕಳು ಒಬ್ಬಳೇ ಮಗಳು. ಆಕೆ ರೂಪವಂತೆ. ತಂದೆ ತಾಯಿ. ಬಂಧುಗಳ ಅಣ್ಣಂದಿರುಗಳ ಕಣ್ಮಣಿಯಾಗಿ ಆಕೆ ಬೆಳೆದು ಪ್ರಾಪ್ತವಯಸ್ಸಿಗೆ ಬಂದಿದ್ದಳು. ಆಕೆಗಾಗಿ ಕುಲದ ವರನನ್ನು ನೋಡುತ್ತಿದ್ದರು. ಕುಲ ಮುಖಂಡನ ಅಂತಸ್ತಿಗೆ ತಕ್ಕ ವರನ ಶೋಧ ನಡೆದಿತ್ತು. ಈ ಸಮಯದಲ್ಲಿ ಆ ನಗರ ಪ್ರಧಾನಿಯಿಂದ ಮುದ್ದೇಗೌಡನಿಗೆ ತನ್ನನ್ನು ಭೇಟಿ ಮಾಡಬೇಕೆಂಬ ಸೂಚನೆ ಬಂತು. ಮುದ್ದೇಗೌಡ ಪ್ರಧಾನಿಯನ್ನು ಭೇಟಿಯಾದ. ಮಗಳನ್ನು ಕಿರು ಜಾತಿಯ ವರನೊಬ್ಬನಿಗೆ ಕೊಟ್ಟು ಮದುವೆ ಮಾಡುವಂತೆ ಪ್ರಧಾನಿ ಗೌಡನಿಗೆ ಸೂಚಿಸಿದ. ತನ್ನ ಮಗಳನ್ನು ಪ್ರಧಾನಿ ಕಿರು ಜಾತಿಯ ವರನಿಗೆ ಕೊಡು ಎಂದದ್ದು ಮುದ್ದೇಗೌಡನಿಗೆ ಅಪಾರ ಕೋಪ ಬರಿಸಿತು. ಆ ಪ್ರಸ್ತಾಪವನ್ನು ಗೌಡ ಪ್ರಬಲವಾಗಿ ವಿರೋಧಿಸಿದ. ಆದರೆ ಪ್ರಧಾನಿ ಏಳು ದಿನಗಳ ಗಡುವು ನೀಡಿ ಅಷ್ಟರಲ್ಲಿ ತಾನು ಸೂಚಿಸಿದ ವರನಿಗೆ ಮಗಳನ್ನು ಕೊಡಲು ಒಪ್ಪದಿದ್ದ ಪರಿಣಾಮವನ್ನು ಎದುರಿಸಬೇಕಾಗುವುದೆಂದು ಎಚ್ಚರಿಸಿದ.

ವಿಷಯವನ್ನು ಪ್ರಧಾನಿಯ ಎಚ್ಚರಿಕೆಯನ್ನು ಗೌಡ ತನ್ನ ಏಳು ಜನ ಮಕ್ಕಳಿಗೆ ತಿಳಿಸಿದ. ಅವರೆಲ್ಲಾ ಪ್ರಧಾನಿಯ ಸೂಚನೆ ಕೇಳಿ ಕೋಪದಿಂದ ಕೆಂಡಮಂಡಲವಾದರು. ಪ್ರಧಾನಿಯ ವಿರುದ್ಧ ದಂಗೆ ಏಳುವುದಾಗಿಯೂ ವಿಷಯವನ್ನು ರಾಜನಿಗೆ ತಿಳಿಸುವುದಾಗಿಯೂ ಹೇಳಿದರು. ಮುದ್ದೇಗೌಡ ಪ್ರಧಾನಿಯು ರಾಜನನ್ನು ಮೂಲೆಗೆ ತಳ್ಳಿ ತಾನೇ ಸರ್ವಾಧಿಕಾರಿಯಾಗಿರುವುದರಿಂದ ರಾಜನಿಗೆ ತಿಳಿಸುವುದರಿಂದ ಪ್ರಯೋಜನವಿಲ್ಲ. ಕೇವಲ ಏಳು ದಿನದಲ್ಲಿ ಪ್ರಧಾನಿಯ ವಿರುದ್ಧ ಜನಾಂಗವನ್ನು ಸಂಪರ್ಕಿಸಿ ದಂಗೆ ಏಳುವುದು ಸರಿಯಲ್ಲ ಎಂದ. ಕಡೆಗೆ ಕುಲ ಮುಖ್ಯರನ್ನು ಕರೆಸಿ ಚರ್ಚಿಸಿದರು. ಅವರು ಮುದ್ದೇಗೌಡ ಮತ್ತು ಮಕ್ಕಳು ರಾತ್ರೋ-ರಾತ್ರೆ ಪ್ರಧಾನಿಗೆ ತಿಳಿಯದಂತೆ ಯಾವುದಾದರೂ ದೂರ ಪ್ರದೇಶಕ್ಕೆ ಹೊರಟು ಹೋಗುವುದೆಂದೂ ಜನಾಂಗದವರೆಲ್ಲಾ ಒಂದಾಗಿ ದಂಗೆ ಎದ್ದು ಪ್ರಧಾನಿಯನ್ನು ಮುಗಿಸಿ ರಾಜನನ್ನು ಬಂಧಮುಕ್ತನನ್ನಾಗಿಸುವುದಾಗಿ ಮುದ್ದೇಗೌಡನು ಆನಂತರ ಹಿಂದಿರುಗಬೇಕೆಂದೂ ಅವನ ಮನ ಒಲಿಸಿದರು.

ಕುಲ ಮುಖಂಡರ ಸೂಚನೆಯಂತೆ ಮುದ್ದೇಗೌಡನ ಸಂಸಾರ ಒಂದು ಅಮಾವಾಸ್ಯೆಯ ರಾತ್ರಿ ವೇಷಾಂತರದಿಂದ ಕಲ್ಯಾಣವನ್ನು ತೊರೆದು ದಕ್ಷಿಣದತ್ತ ಪ್ರಯಾಣ ಬೆಳೆಸಿತು. ಈ ಮಧ್ಯೆ ಒಕ್ಕಲಿಗರು ಸಭೆ ಸೇರಿ ಪ್ರಧಾನಿ ವಿರುದ್ಧದ ದಂಗೆಗೆ ತಯಾರಿ ಆರಂಭಿಸಿದರು. ಪ್ರಧಾನಿಗೆ ಅನುಮಾನ ಬರದಿರಲೆಂದು ಪ್ರಧಾನಿ ಸೂಚಿಸಿದ ವರನಿಗೆ ಮಗಳನ್ನು ಕೊಡಲು ಮುದ್ದೇಗೌಡ ಒಪ್ಪಿರುವುದಾಗಿಯೂ ತನ್ನ ಕುಲದವರಿಗಲ್ಲಾ ತಿಳಿಸಿ ಮದುವೆಗೆ ಏರ್ಪಾಡು ಮಾಡಲು ಕಾಲಾವಕಾಶಬೇಕೆಂದೂ ತಿಳಿಸಿದರು. ತನಗೆ ಮುದ್ದೇಗೌಡ ತಲೆ ಬಾಗಿದನೆಂದು ಸಂತೋಷಗೊಂಡ ಪ್ರಧಾನಿ ಕಾಲಾವಕಾಶಕ್ಕೆ ಒಪ್ಪಿದ. ಇತ್ತ ರಾತ್ರೋ ರಾತ್ರಿ ಹೊರಟ ಮುದ್ದೇಗೌಡನ ಸಂಸಾರ ತುಂಗಭದ್ರಾ ನದಿಯ ತೀರವನ್ನು ತಲುಪಿತು. ನದಿಯು ತುಂಬು ಪ್ರವಾಹದಿಂದ ಹರಿಯುತ್ತಿದ್ದುದರಿಂದ ಗೌಡನ ಸಂಸಾರ ಅಲ್ಲಿಯ ಪ್ರವಾಹ ಇಳಿಯುವವರೆಗೆ ಬೀಡು ಬಿಡುವುದು ಅನಿವಾರ್ಯವಾಯಿತು.

ಪ್ರಧಾನಿಗೆ ಮುದ್ದೇಗೌಡನ ಸಂಸಾರ ಪಲಾಯನ ಮಾಡಿರುವ ವಿಷಯ ಹೇಗೋ ತಿಳಿದು ಹೋಯಿತು. ಅವನಿಗೆ ಗೌಡನ ಮೇಲೆ ಅಪರಿಮಿತ ಕೋಪ ಬಂದಿತು. ಕೂಡಲೆ ಮುದ್ದೇಗೌಡನ ಸಂಸಾರ ಎಲ್ಲಿದ್ದರೂ ಹುಡುಕಿ ಎಳೆದು ತರಬೇಕೆಂದು ಸೂಚಿಸಿ ಸೇನೆಯನ್ನು ಪ್ರಧಾನಿ ಎಲ್ಲಾ ದಿಕ್ಕುಗಳಿಗೂ ಅಟ್ಟಿದ. ಈ ವಿಷಯವನ್ನು ಕುಲದವರು 'ವೀರನೊಬ್ಬನ ಮೂಲಕ ತುಂಗಭದ್ರಾ ನದಿಯ ತೀರ'ದಲ್ಲಿದ್ದ ಮುದ್ದೇಗೌಡನಿಗೆ ತಿಳಿಸಿದರು. ಗೌಡ ಕಂಗಾಲಾದ. ಸೇನೆಗೆ ಸಿಗುವುದರ ಬದಲು ನದೀ ಪಾಲಾಗುವುದೇ ಮೇಲೆಂದು ಕೂಡಲೇ ತಮ್ಮ ಗಾಡಿಗಳನ್ನು ಹೂಡಿದರು. ನದಿಯ ಹತ್ತಿರ ಬಂದಾಗ ಮುದ್ದೇಗೌಡನ ಮಗಳು ಗಾಡಿಯಿಂದ ಧುಮುಕಿ ಪ್ರವಾಹಕ್ಕಿಳಿದಳು. ನದಿಯ ನೀರು ಇಬ್ಭಾಗವಾಯಿತು. ಮುದ್ದೇಗೌಡನ ಗಾಡಿಗಳು ಆಕೆಯನ್ನು ಹಿಂಬಾಲಿಸಿದವು. ಅವರೆಲ್ಲಾ ಸುರಕ್ಷಿತವಾಗಿ ಆಚೆಯ ದಡ ಸೇರಿದರು. ತುಂಗಭದ್ರೆ ಮತ್ತೆ ತುಂಬಿ ಹರಿಯಲಾರಂಭಿಸಿದಳು.

ಕಲ್ಯಾಣ ನಾಡಿನ ಒಕ್ಕಲಿಗರು ದಂಗೆ ಎದ್ದರು. ರಾಜ್ಯಾದ್ಯಂತ ರಕ್ತದ ಕೋಡಿ ಹರಿಯಿತು. ಈ ದಂಗೆಗೆ ರಾಜನ ಕಡೆಯವರು ಕಾರಣವೆಂದು ಪ್ರಧಾನಿಯ ಕಡೆಯವರು ರಾಜನನ್ನು ಕೊಂದರು. ಇದರಿಂದ ರೋಷಗೊಂಡ ರೈತರು ಪ್ರಧಾನಿಯ ಕಡೆಯವರನ್ನು ಕೊಂದರು. ಪ್ರಧಾನಿ ರಾಜ್ಯವನ್ನು ಬಿಟ್ಟು ಓಡಿಹೋದ. ಕಡೆಗೆ ರಾಜನ ಕಿರಿಯ ವಯಸ್ಸಿನ ಮಗನಿಗೆ ಪಟ್ಟ ಕಟ್ಟಲಾಯಿತು.

ಈ ಕಡೆ ಮುದ್ದೇಗೌಡನ ಸಂಸಾರ ಒಂದು ಅರಣ್ಯ ಪ್ರದೇಶದಲ್ಲಿ ಬೀಡು ಬಿಟ್ಟಿತು. ರಕ್ತಪಾತ ನಡೆದ, ರಾಜನ ಕೊಲೆಯಾದ ನಾಡಿಗೆ ಹಿಂತಿರುಗಲೂ ಮುದ್ದೇಗೌಡ ಬಯಸಲಿಲ್ಲ. ಅವನು ತನ್ನ ಮಕ್ಕಳು ಮತ್ತು ಪರಿವಾರದೊಂದಿಗೆ ಆ ಕಾಡನ್ನು ಕಡಿದು ವ್ಯವಸಾಯ ಯೋಗ್ಯವಾಗಿ ಮಾಡಿದ. ಒಂದು ಮಧ್ಯಾಹ್ನ ಅವರೆಲ್ಲಾ ಕೆಲಸ ಮಾಡಿ ಬಂದು ಉಂಡು ವಿಶ್ರಾಂತಿ ಪಡೆಯುತ್ತಿದ್ದರು. ಸುಖವಾಗಿದ್ದ ಅಣ್ಣಂದಿರು, ರಾಜನೋಪಾದಿಯಲ್ಲಿದ್ದ ತಂದೆಗೆ ಒದಗಿದ ಸಂಕಷ್ಟ ಕಂಡು ಆಕೆಗೆ ದುಃಖವಾಯಿತು. ತನ್ನಿಂದ ತಾನೇ ಇಷ್ಟೆಲ್ಲಾ ಆದುದು. ಮುಂದೆ ಇನ್ನೇನು ಕಾದಿದೆಯೊ? ನಾನೇ ಇಲ್ಲವಾದರೆ ಈ ತೊಂದರೆಯೇ ಇರುವುದಿಲ್ಲ. ಆಕೆ ಸ್ವಲ್ಪ ಬೆಂಕಿಯೊಂದಿಗೆ ಮನೆಯಿಂದ ಹೊರ ಬಂದಳು. ಸ್ವಲ್ಪ ದೂರದಲ್ಲಿ ಅಣ್ಣಂದಿರು ಕಡಿದು ರಾಶಿ ಹಾಕಿದ್ದ ಮರದ ಮುಂದೆ ಗಿಡ ಗಂಟೆಗಳ

ದೊಡ್ಡ ರಾಶಿಯೇ ಬಿದ್ದಿತು. ಆಕೆ ತನ್ನ ಕೈಯಲ್ಲಿದ್ದ ಬೆಂಕಿಯನ್ನು ಆ ರಾಶಿಗೆಸೆದಳು. ಒಣಗಿದ್ದ ಆ ರಾಶಿ ಧಗಧಗನೆ ಹತ್ತಿ ಉರಿಯಲಾರಂಭಿಸಿತು. ಮುದ್ದೇಗೌಡನ ಮುದ್ದಿನ ಮಗಳು ಆ ಬೆಂಕಿಯಲ್ಲಿ ಬಿದ್ದು ಆತ್ಮಾರ್ಪಣೆ ಮಾಡಿಕೊಂಡು ಕುಲದ ಮಹಾಸತಿಯಾದಳು.

ಉರಿವ ಬೆಂಕಿಯಲ್ಲಿ ಉಂಟಾದ ಸದ್ದಿನಿಂದ ಎಚ್ಚರಗೊಂಡ ಮುದ್ದೇಗೌಡ ಮತ್ತು ಅವನ ಏಳು ಜನ ಮಕ್ಕಳು ಸ್ಥಳಕ್ಕೆ ಧಾವಿಸಿದರು. ಕಾಲ ಮಿಂಚಿ ಹೋಗಿತ್ತು. ಅಪಾರವಾಗಿ ದುಃಖ ಪಟ್ಟರು. ಕುಲ ಗೌರವಕ್ಕೆ ಆತ್ಮಾರ್ಪಣೆ ಮಾಡಿಕೊಂಡ ತಂಗಿಯನ್ನೇ ತಮ್ಮ ಮನೆ ದೇವತೆ ಮಾಡಿಕೊಂಡರು. ಆ ಏಳು ಜನ ಸೋದರರಿಂದ ಒಕ್ಕಲಿಗ ಜನಾಂಗ ಉಂಟಾಯಿತು. ಅವರು ಈ ಜನಾಂಗದ ೧. ಆನೆಯವರು ೨. ಸಲಾಂಬೆಯರು ೩. ಮೊರಸರು ೪. ಕುಂಚರು ೫. ನೊಣವರು ೬. ಕುಡಿಯರು ೭. ಸಾದರು ಪಂಗಡಗಳ ಮೂಲ ಪುರುಷರು ಎಂದು ಈ ಕಥೆ ಹೇಳುತ್ತದೆ.

ಒಕ್ಕಲಿಗ ಮೂಲದ ಬಗೆಗೆ ದೊರೆಯುವ ಅನೇಕ ಕಥೆಗಳಲ್ಲಿ ಇನ್ನೊಂದು ಹೀಗಿದೆ. ವೊಕ್ಕಲಿಗಂ ಭೂಮಿ ಪುಟ್ಟಿದಯೇಳು ದಿವಸಕ್ಕೆ ಮಳೆ ಹೊಯ್ದೊಡೆ ಕಾಡೋಳ್ಬೆಳೆದೊರಗಿರ್ದ ಧಾನ್ಯವಿದಳಾದಿಗಳಂ ಕಸಮಂ ಕಳೆದು ಪಾಕಮಂ ಮಾಳ್ಪುದರಿಯದೆ ಸಕಲ ಜೀವಂಗಳು ಕ್ಷುದಾ ಪೀಡಿತರಾಗಿರಲು ಬ್ರಹ್ಮಂ ಭ್ರಮಣೆಯಿಂದ ಆಡುತ್ತಾ ಬೆಳೆದಿರ್ದ ಧಾನ್ಯಂಗಳಂ ಕಂಡು ಸಂಸ್ಕಾರಗೆಯ್ಯಲು ಪಾಯಮಯಂ ಕಾಣದೆ ತನ್ನ ದಕ್ಷಿಣಾಂಘ್ರಿಯನೆತ್ತಿ ಪೊಯ್ಯಲಾ ಪಾದದೊಳೆ ಅರುಗಡ್ಡಿ, ಮೆರೆಗೋಲು ಕೊಂಗಗಳ್ಸಹಿತವಾಗಿ ಪುಟ್ಟಿ ಸಂಸ್ಕಾರದಿಂ ವಚನದಿಂದಷ್ಟಸಿದ್ಧಾನ್ನಮಂ ದೇವಾದಿ ದೇವರ್ಗಳೆಲ್ಲರು ಮುಂಡು ತೃಪ್ತಿ ಪಡೆದು ಶಕ್ತಿ ಪುಟ್ಟಿದುದರಿಂ ದೇವತೆಗಳೆಲ್ಲರು ಮಹಾಮೇರುವಂ ಮಂಥನಂ ಮಾಡಿ ಆದಿ ಶೇಷನೆ ರಜ್ಜುವಾಗೆ ಸಮುದ್ರಮಂ ಕಡೆದೊಡೆ ಅಲ್ಲಿ ಚಂದ್ರಮ, ಲಕ್ಷಿಯುಂ, ಕೌಸ್ತುಭಮುಂ, ರತ್ನಮುಂ, ಅಮೃತಮುಂ, ಸುಧೆ ಮೊದಲಾದವು ಪುಟ್ಟಿ ಈಶಂ ಚಂದ್ರನಂ ನಾರಾ.ಣಂ ಲಕ್ಷ್ಮಿಯಂ, ಕೌಸ್ತುಭಮಂ ದೇವತೆಗಳು ಅಮೃತಮಂ ದಾನವರು ಸುರೆಯಂ ಕೊಂಡುಮತ್ತಂ ಅರಿಮಥನಮಂ ಮಾಡಲು ವಿಷಂ ಪುಟ್ಟಿದೊಡಾರುಂ ಕೊಳ್ಳದಿರಲು ಲೋಕಮಂ ದಹಿಸುತ್ತಿರಲು ಈಶ್ವರ ಕೊಂಡು ಕಂಠದೊಳು ಧರಿಸಿದುದರಿಂ ವಿಷಕಂಠನಾದಂ ಮತ್ತಂ ಈಶ್ವರಂ ಕಾಡೊಳಿರ್ದ ಧಾನ್ಯಗಳನೊಕ್ಕಿ ತರುವುದಕ್ಕೆ ವೊಕ್ಕಲಿರ್ಗೆ ತನ್ನ ವೃಷಭನಂ ಕೊಟ್ಟು, ಆ ಭೂಮಿಯೊಳು ಬಿತ್ತಿ ಬೆಳೆಯಿರಿ ಎಂದು ನೇಮಿಸೆ ಆಮೇಲೆ ವೊಕ್ಕಲಿಗರು ಬಿತ್ತಿ ಬೆಳೆದು ಇರುವೆ ಮೊದಲಾದ ಎಂಭತ್ತನಾಲ್ಕು ಜೀವರಾಶಿಗಳಿಗೆಲ್ಲ ಅನ್ನಮಂ ಕೊಟ್ಟುದರಿಂ ನೀನೇ ಲೋಕಕ್ಕೆ ಜೀವನಕಾರಿಯೆಂದು ದೇವತೆಗಳಾಗಿಯುವರು ಕೊಂಡಾಡುವರು ಆ ವಂಶದೊಳೆ ಅನೇಕ ಜಾತಿಗಳುತ್ಪತ್ತಿಯಾದವು. ಅವರಲ್ಲಿ ಗಂಗ, ಕುಡಿಯ, ಮೊಸರ, ಕುಂಚ, ರಡ್ಡಿ, ನೊಣಬ, ಸಾದ, ಗುಡಿ, ದಾಸ ಮೊದಲಾದ ಭೇದಂಗಳಾಗಿ ವರ್ತಿಸುವರು. ಆದುದರಿಂದ ಒಕ್ಕಲಿಗನೆ ಶ್ರೇಷ್ಠ.'' ಹೀಗೆ ಒಕ್ಕಲಿಗ ಜನಾಂಗವು ಅತ್ಯಂತ ಪ್ರಾಚೀನವೂ ಗೌರವಯುತವೂ ಆದ ಜನಾಂಗವೆಂಬ ಹಲವಾರು ಕಥೆಗಳು ದೊರೆಯುತ್ತವೆ.

ಕನ್ನಡನಾಡಿನ ಬಹುತೇಕ ಶಾಸನಗಳಲ್ಲಿ ಗೌಡರ ಎಂದರೆ ಒಕ್ಕಲಿಗರ ಪ್ರಸ್ತಾಪ ಬರುತ್ತದೆ. ರಾಜ ಮಹಾರಾಜರಾಗಿ, ವೀರರಾಗಿ, ಸತಿಯರಾಗಿ, ತ್ಯಾಗಿಗಳಾಗಿ ಸಾವಿರಾರು ಜನ ಒಕ್ಕಲಿಗರು

ಶಾಸನೋಕ್ತರಾಗಿದ್ದಾರೆ. ಅನೇಕ ಶಾಸನಗಳು ಒಕ್ಕಲಿಗರು ಮತ್ತು ಅವರ ಒಳ ಪಂಗಡಗಳನ್ನು ಉಲ್ಲೇಖಿಸುತ್ತವೆ. ಅಂತಹ ಒಂದು ಶಾಸನವನ್ನು ನೋಡಬಹುದು ಮತ್ತು ಅದರ ಸ್ಥೂಲ ಕಥೆ ಹೀಗಿದೆ. ''ಒಂದು ಸಾಮಂತ ರಾಜ್ಯ ಅದರ ರಾಜ ಎರೆಗಂಗ. ಅವನ ಮಗ ಪಿಚ. ಇನ್ನೊಂದು ಸಾಮಂತ ನಾಡು. ಅದರ ರಾಜ ಜವಸ. ಅವನ ಮಗ ರವಿಗ. ರವಿಗನ ಪತ್ನಿ ಜಾಕಬ್ಬೆ. ಈ ದಂಪತಿಗಳಿಗೆ ದೇಕಬ್ಬೆ ಎಂಬ ಒಬ್ಬಳೇ ಮಗಳು, ಈಕೆಯನ್ನು ಪಿಚನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಈ ಇಬ್ಬರೂ ಗಂಗಾ ವಂಶದ ಒಕ್ಕಲಿಗ ರಾಜರು. ದೇಕಬ್ಬೆಯ ಗಂಡ ಪಿಚನನ್ನು ತಲಕಾಡಿಗೆ ಕರೆಸಿಕೊಂಡು ಚೋಳ ಪ್ರತಿನಿಧಿ ಅವನನ್ನು ಕೊಂದು ಹಾಕಿದ. ಈ ವಿಷಯವನ್ನು ತಿಳಿದ ದೇಕಬ್ಬೆ ಸಹಗಮನಕ್ಕೆ ಸಿದ್ಧಳಾದಳು. ಆಗ ಅವಳ ತಂದೆ ತಾಯಿಯರು, ಕುಲ ಮುಖಂಡರೆಲ್ಲ ಸೇರಿ ನೀನು ಸಹಗಮನ ಮಾಡುವುದು ಬೇಡವೆಂದು ಒತ್ತಾಯಿಸಿದರು. ಆದರೂ ಆಕೆ ಅವಳ ತಂದೆ ತಾಯಿಯರ ಕುಲದವರನ್ನು ಒಪ್ಪಿಸಿ ಸತಿಯಾದಳು. ದೇಕಬ್ಬೆಯ ತಂದೆ ರವಿಗ ''ಕುಡಿಯರವಲ್ಲಭಂ ಕುಡಿಯರಾಭರಣಂ'' ಮುಂತಾಗಿ ಕರೆಯಲ್ಪಟ್ಟಿದ್ದಾನೆ. ದೇಕಬ್ಬೆಯು ಅಗ್ನಿ ಪ್ರವೇಶ ಮಾಡುವಾಗ ಆನೆಯ ಗಾಮುಂಡಗಳು, ಸೆಲಾಂಭೆಗಮುಂಡಗಳು, ಕುಡಿಯ ಗಾಮುಂಡರುಗಳು ಸೇರಿದ್ದರೆಂದು ಒಂಬತ್ತನೆಯ ಶತಮಾನದ ಈ ಶಾಸನ ಹೇಳುತ್ತದೆ. ಇವರೆಲ್ಲ ಒಕ್ಕಲಿಗರ ಒಳಪಂಗಡಗಳ ಮುಖಂಡರೆಂಬುದು ಇದರಿಂದ ಸೂಚಿತವಾಗುತ್ತದೆ. ಹೀಗೆ ಕೆಲವೇ ಒಳಪಂಗಡಗಳಿಂದ ನಾಡಿನ ಗಣ್ಯ ಜನಾಂಗವಾಗಿದ್ದ ಒಕ್ಕಲಿಗರಲ್ಲಿ ಕಾಲಾನುಕ್ರಮದಲ್ಲಿ ಅವು ಹದಿನೆಂಟು ಆದವು. ಕುಲವೊಂದು ಹದಿನೆಂಟು ಜಾತಿಯಾಯಿತೆಂದು ದಾಖಲೆಗಳು ಹೇಳುತ್ತವೆ. ಜನಾಂಗದ ಹಿರಿಯರಾದವರು ಈ ಮಾತನ್ನು ಬಳಸುತ್ತಾರೆ. ಇದು ಒಕ್ಕಲಿಗರು ಈ ದೇಶದ ಮೂಲ ಜನರೂ, ಅವರದು ಅತ್ಯಂತ ಪ್ರಾಚೀನ ಸಂಸ್ಕೃತಿ ಎಂಬುದನ್ನು ತೋರಿಸುತ್ತದೆ.

೪

ಒಕ್ಕಲಿಗರು ಪ್ರಧಾನವಾಗಿ ಬೇಸಾಯಗಾರರಾದರೂ ಆ ಜನಾಂಗದ ಯುವಕರು ತಾಯಿ ನಾಡ ರಕ್ಷಣೆಯಲ್ಲಿಯೂ ಪಾಲುಗೊಳ್ಳುತ್ತಿದ್ದರು. ಹೀಗೆ ರಾಜರಲ್ಲಿ ಸೇರಿದವರು ಮುಂದೆ ತಾವೇ ಒಂದು ರಾಜ್ಯವನ್ನು ಕಟ್ಟಿ ರಾಜರಾದುದೂ ಉಂಟು. ಇಂತಹ ಅನೇಕ ಉದಾಹರಣೆಗಳು, ಉಲ್ಲೇಖಗಳು ದಾಖಲೆಗಳು ದೊರೆಯುತ್ತವೆ. ಗ್ರಾಮ ರಕ್ಷಣೆಯಲ್ಲಿ ಈ ಜನಾಂಗದ ವೀರರ ಕಥೆಗಳು ಅತ್ಯಂತ ರೋಚಕವಾಗಿವೆ. ಊರಿನ ದನಕರುಗಳನ್ನು ಅಪಹರಿಸುತ್ತಿದ್ದವರೊಂದಿಗೆ ಹೋರಾಡಿ ಸತ್ತವರು, ಊರು ಹೆಣ್ಣು ಮಕ್ಕಳ ಪ್ರಾಣ ಮಾನ ರಕ್ಷಣೆಗಾಗಿ ಹೋರಾಡಿ ಸತ್ತವರು, ಗ್ರಾಮದ ಮೇಲೆ ಧಾಳಿ ಮಾಡಿದ ಕಳ್ಳಕಾಕರ ಮೇಲೆ ಧಾಳಿ ಮಾಡಿ ಸತ್ತವರು. ಹೀಗೆ ಒಕ್ಕಲಿಗರು ತಮ್ಮ ವೀರತ್ವ ಮತ್ತು ತ್ಯಾಗ ಬಲಿದಾನಗಳನ್ನು ಮೆರೆದಿದ್ದಾರೆ.

ಸರಿ ಸುಮಾರು ಏಳುನೂರು ವರ್ಷಗಳ ಕಾಲ ಗಂಗವಾಡಿ ತೊಂಬತ್ತಾರು ಸಾಸಿರವನ್ನು ಆಳಿದ

ತಲಕಾಡಿನ ಗಂಗರು ರೈತ ಮೂಲದಿಂದ ಬಂದವರೆಂಬುದನ್ನು ಈಗ ಚರಿತ್ರಕಾರರು, ಸಂಶೋಧಕರೆಲ್ಲರೂ ಒಪ್ಪಿಕೊಂಡಿದ್ದಾರೆ. ದಡಿಗ ಎಂಬ ರೈತ ಮುಖಂಡನು ತನ್ನ ಜನರನ್ನೆಲ್ಲಾ ಸಂಘಟಿಸಿ ರಾಜ್ಯವೊಂದನ್ನು ಸ್ಥಾಪಿಸಿದ. ಮುಂದೆ ಈ ರಾಜ್ಯ ಕನ್ನಡ ನಾಡಿನ ಅರ್ಧಕ್ಕೂ ಹೆಚ್ಚು ಭಾಗವನ್ನು ಆವರಿಸಿಕೊಂಡಿತು. ಗಂಗರನ್ನು ಜೈನ ಧರ್ಮೀಯರೆಂದು ಕೆಲ ವಿದ್ವಾಂಸರು ಅಭಿಪ್ರಾಯಪಟ್ಟಿದ್ದರು. ಆದರೆ ಸುಪ್ರಸಿದ್ಧ ಗಂಗ ದೊರೆ ದುರ್ವಿನೀತನ ಶಾಸನಗಳು ದೇವತೆಗಳಿಗೆ ಪ್ರಾಣಿ ಬಲಿಯನ್ನು ಪ್ರತಿಪಾದಿಸಿರುವುದು ಕಂಡುಬಂದ ನಂತರ ಈ ಬಗ್ಗೆ ಅನೇಕ ರೀತಿಯ ಚರ್ಚೆಗಳು ಪಡೆದು ಅವರು ರೈತ ಮೂಲದವರೆ ಎಂದು ಸಾಬೀತುಪಡಿಸಲಾಯಿತು. ಗಂಗಡಿಕಾರ ಒಕ್ಕಲಿಗರನ್ನು ಆನೆಯವರು, ಆನೆ ಕುಲದವರೆಂದು ಶಾಸನಗಳು ಕರೆದಿವೆ. ಗಂಗರ ರಾಜಲಾಂಛನವೆ ಆನೆ, ಆದರೆ ಈ ವಂಶದ ಇಮ್ಮಡಿ ಮಾರಸಿಂಹ ಜೈನ ಮುನಿಯೊಬ್ಬನಿಂದ ಶಿಕ್ಷಣ ಪಡೆದು ಆತನ ಶಿಷ್ಯನಾಗಿದ್ದ. ಇವನ ಮಂತ್ರಿ ಚಾಮುಂಡಯ್ಯಾ ಕೂಡ ಅದೇ ಮುನಿಯಲ್ಲಿ ರಾಜಕುಮಾರ ಮಾರಸಿಂಹನೊಂದಿಗೆ ಶಿಕ್ಷಣ ಪಡೆದವನು. ಅಧಿಕಾರಕ್ಕೆ ಬಂದ ಮೇಲೆ ಈ ಇಬ್ಬರೂ ಶಿಷ್ಯರು ತಮ್ಮ ಗುರುವಿನ ಅಪೇಕ್ಷೆಯಂತೆ ಗೊಮ್ಮಟೇಶ್ವರನನ್ನು ಕೆತ್ತಿಸಿದರು. ಈ ಮಾರಸಿಂಹನನ್ನು ಅನೇಕ ಶಾಸನಗಳು ಮಾರಸಿಂಹ ಗಾವುಂಡ ಎಂದೂ ಕರೆದಿವೆ. ರೈತರಲ್ಲಿ ಸಾಮಾನ್ಯವಾಗಿ ದೈವಭೇದವಿಲ್ಲ. ಅವರು ಎಲ್ಲಾ ದೇವರುಗಳಿಗೂ ನಡೆದುಕೊಳ್ಳುತ್ತಾರೆ. ಆದರೂ ರೈತರು ಪ್ರಧಾನವಾಗಿ ಶೈವರು, ಶಿವಾರಾಧಕರು. ಗಂಗರು ತಮ್ಮ ಆಡಳಿತಾವಧಿಯಲ್ಲಿ ತಲಕಾಡಿನ ಪಂಚಲಿಂಗ ಶಿವಾಲಯಗಳೂ ಸೇರಿದಂತೆ ಸಾವಿರಾರು ಶಿವಾಲಯಗಳನ್ನು ನಿರ್ಮಿಸಿದ್ದಾರೆ.

ಒಕ್ಕಲಿಗ ಮೂಲದಿಂದ ಒಂದು ರಾಜ್ಯ ಸಂಪಾದಿಸಿ ಗಂಗರಷ್ಟೇ ಪ್ರಖ್ಯಾತರಾದವರು ರಾಷ್ಟ್ರಕೂಟರು. ಕನ್ನಡ ನಾಡಿನ ಉತ್ತರ ಭಾಗವನ್ನೆಲ್ಲಾ ಐದುನೂರು ವರ್ಷಗಳ ಕಾಲ ಆಳಿದವರು. ಇವರು ರಟ್ಟ, ಅಥವಾ ರೆಡ್ಡಿ ಎಂಬ ಒಕ್ಕಲಿಗ ಪಂಗಡದಿಂದ ಬಂದವರು. ಇವರು ಕನ್ನಡ ಸಾಹಿತ್ಯ ಸಂಸ್ಕೃತಿಗಳನ್ನು ಅಪಾರವಾಗಿ ಪ್ರೋತ್ಸಾಹಿಸಿ ಬೆಳೆಸಿದರು. ಈ ವಂಶದ ಅಮೋಘವರ್ಷ ನೃಪತುಂಗ ಇಂದಿಗೂ ಪ್ರಖ್ಯಾತನಾಗಿದ್ದಾನೆ.

ದ್ವಾರಸಮುದ್ರದ ಹೊಯ್ಸಳರು ಒಕ್ಕಲಿಗ ಮೂಲದಿಂದ ಬಂದವರು. ಹೊಯ್ಸಳಲು ಎಂಬ ಊರಿನಿಂದ ಬಂದುದರಿಂದ ಇವರಿಗೆ ಹೊಯ್ಸಳರೆಂಬ ಹೆಸರು ಬಂದಿತು. ಹೊಯ್ಸಳಲು ಸುತ್ತಮುತ್ತ ನರಭಕ್ಷಕ ಹುಲಿಯೊಂದು ಜನರಿಗೆ ತೊಂದರೆ ಕೊಡುತ್ತಿದ್ದಿತು. ಆ ಊರಿನ ರೈತ ಯುವಕನೊಬ್ಬ ಆ ಹುಲಿಯನ್ನು ಅಟ್ಟಿಸಿಕೊಂಡು ಹೋಗಿ ಕೊಂದ. ಸುತ್ತಮುತ್ತಲಿನ ಜನರು ಆತನನ್ನೇ ತಮ್ಮ ನಾಯಕನನ್ನಾಗಿ ಮಾಡಿಕೊಂಡರು. ಈತ ಸುತ್ತಮುತ್ತಲ ಪ್ರದೇಶ ಗೆದ್ದು ಒಂದು ರಾಜ್ಯ ಸ್ಥಾಪಿಸಿದ. ತಾನು ಹುಲಿಯನ್ನು ಕೊಂದಲ್ಲಿಯೇ ಒಂದು ನಗರ ಸ್ಥಾಪಿಸಿ ಅದನ್ನೆ ರಾಜಧಾನಿಯಾಗಿ ಮಾಡಿಕೊಂಡ. ಕೆಲ ವರ್ಷಗಳ ನಂತರ ರಾಜ್ಯ ವಿಸ್ತರಿಸಿ ಚಾಲುಕ್ಯರ ಸಾಮಂತರಾಗಿ ಹಳೇಬೀಡನ್ನು ರಾಜಧಾನಿಯಾಗಿ ಮಾಡಿಕೊಂಡರು. ಮುಂದೆ ಈ ವಂಶದ ವೀರಬಲ್ಲಾಳನ ಕಾಲಕ್ಕೆ ಸ್ವತಂತ್ರ ರಾಜರೆಂದು ಘೋಷಿಸಿಕೊಂಡರು. ಈ ರಾಜ ವಂಶದ ವಿಷ್ಣುವರ್ಧನ ಮತ್ತು ಶಾಂತಲಾದೇವಿ ದಂಪತಿಗಳು

ಕನ್ನಡ ನಾಡಿನ ಚರಿತ್ರೆಯಲ್ಲಿಯೇ ಅತಿ ವಿರಳರು ಮತ್ತು ಪ್ರಸಿದ್ಧರು. ವಿಷ್ಣುವರ್ಧನ ಶ್ರೀ ವೈಷ್ಣವ ಧರ್ಮಕ್ಕೆ ಮತಾಂತರವಾದನೆಂಬುದು ಸರಿಯಲ್ಲ. ಶ್ರೀ ರಾಮಾನುಜಾಚಾರ್ಯರಿಗೆ ಆಶ್ರಯ ನೀಡಿದುದರಿಂದ ಈ ಅಭಿಪ್ರಾಯ ಮೂಡಿದೆ. ಆತ ಮತಾಂತರವಾಗಲಿಲ್ಲವೆಂಬುದು ಹೊಯ್ಸಳರ ಮುಂದಿನ ಚರಿತ್ರೆಯಿಂದ ತಿಳಿಯುತ್ತದೆ. ವಿಷ್ಣುವರ್ಧನ ಶಾಂತಲೆಯರ ಸಮಾಧಿಯ ಮೇಲೆ ಶಿವಾಲಯ ನಿರ್ಮಿಸಿರುವುದೇ ಇದಕ್ಕೆ ಸಾಕ್ಷಿ. ಇವರು ಬಲ್ಲಾಳ ಒಕ್ಕಲಿಗರು ಎಂಬ ಒಕ್ಕಲಿಗ ಪಂಗಡಕ್ಕೆ ಸೇರಿದವರು.

ಕನ್ನಡ ನಾಡಿನ ಸಾಮಂತರು ಮತ್ತು ಸ್ಥಾನೀಕ ರಾಜರುಗಳಲ್ಲಿ ಬಹು ಮಂದಿ ಒಕ್ಕಲಿಗರಾಗಿದ್ದರು. ಯಲಹಂಕ, ಮೈಸೂರು, ಮಧುಗಿರಿ, ಕೆಳದಿ ಮುಂತಾದವರು ಮೂಲತಃ ಒಕ್ಕಲಿಗರೆಂಬುದಕ್ಕೆ ಬೇಕಾದಷ್ಟು ಆಧಾರಗಳಿವೆ. ಇವರುಗಳಲ್ಲಿ ಕೆಲವರು ಮುಂದೆ ಬೇರೆ ಬೇರೆ ಧರ್ಮವನ್ನು ಅವಲಂಬಿಸಿದರು. ಯಲಹಂಕದವರು ತುಮಕೂರು ಜಿಲ್ಲೆಯ ಕುರುವಗೆರೆಯಿಂದ ತಮ್ಮ ಆಡಳಿತ ಆರಂಭಿಸಿ ಬೆಳೆದರು. ಈ ವಂಶದ ಒಂದನೆಯ ಕೆಂಪೇಗೌಡ ಕೃಷ್ಣದೇವ ರಾಯನಿಗೆ ಹತ್ತಿರದವನಾಗಿ ಬೆಂಗಳೂರು ನಗರವನ್ನು ನಿರ್ಮಿಸಿ ಅದನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡ. ಹೀಗೆ ಅನೇಕ ಒಕ್ಕಲಿಗರು ರಾಜಮಹಾರಾಜರಾಗಿ ಚಕ್ರವರ್ತಿಗಳಾಗಿ ಮೆರೆದಿರುವುದನ್ನು ಕಾಣಬಹುದು.

ಆಧುನಿಕ ರಾಜಕಾರಣಕ್ಕೆ ಕನ್ನಡ ನಾಡಿನ ಒಕ್ಕಲಿಗರದ್ದು ಮಹತ್ವದ ಕೊಡುಗೆ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈ ಜನಾಂಗದವರು ಅಪಾರ ಸಂಖ್ಯೆಯಲ್ಲಿ ಪಾಲುಗೊಂಡಿದ್ದು ಹುತಾತ್ಮರಾಗಿದ್ದಾರೆ. ಅವರ ಮುಂದಾಳುಗಳಾದ ಸಾಹುಕಾರ ಚನ್ನಯ್ಯ, ಎಚ್.ಕೆ. ವೀರಣ್ಣ ಗೌಡ, ಕಡಿದಾಳು ಮಂಜಪ್ಪ, ಕೆ.ವಿ. ಶಂಕರ ಗೌಡ, ಕೆಂಗಲ್ ಹನುಮಂತಯ್ಯ, ಜಿ. ರಾಮೇಗೌಡ, ಶಾಂತವೇರಿ ಗೋಪಾಲ ಗೌಡ, ಬಾಣಸಂದ್ರದ ಹುಚ್ಚೇಗೌಡ ಮುಂತಾದ ಒಕ್ಕಲಿಗ ನಾಯಕರನ್ನು ಸ್ಮರಿಸಬೇಕಾಗುತ್ತದೆ. ಮಹಾರಾಜರ ಆಡಳಿತದಲ್ಲಿ ಮಂತ್ರಿಗಳಾಗಿದ್ದ ಅಪ್ಪಾಜಿ ಗೌಡ, ಎಚ್.ಬಿ. ಗುಂಡಪ್ಪ ಗೌಡರನ್ನು ನೆನೆಯಬೇಕು. ಕನ್ನಡ ನಾಡಿಗೆ ನಾಲ್ವರು ಮುಖ್ಯಮಂತ್ರಿಗಳನ್ನು ಒಬ್ಬ ಉಪಮುಖ್ಯಮಂತ್ರಿಯನ್ನು ಕೊಟ್ಟ ಕೀರ್ತಿಯೂ ಈ ಜನಾಂಗಕ್ಕೆ ಸಲ್ಲುತ್ತದೆ. ಸ್ವಾತಂತ್ರ್ಯ ನಂತರ ಅನೇಕರು ವಿಧಾನಸಭೆ, ವಿಧಾನ ಪರಿಷತ್ತುಗಳ ಸದಸ್ಯರಾಗಿ, ಮಂತ್ರಿಗಳಾಗಿ ಸೇವೆ ಸಲ್ಲಿಸಿದ್ದಾರೆ. ಇನ್ನೆಷ್ಟೋ ಜನಾಂಗದ ಯುವಕರು ರಾಜಕೀಯದಲ್ಲಿ ಮುಂದೆ ಬರುತ್ತಿದ್ದಾರೆ. ರಾಜಮಹಾರಾಜರಾಗಿ, ಮಂತ್ರಿ ದಂಡನಾಯಕರಾಗಿ, ಸ್ವಾತಂತ್ರ ಹೋರಾಟಗಾರರಾಗಿ, ಆಧುನಿಕ ಆಡಳಿತ ಮುಖ್ಯಮಂತ್ರಿಗಳಾಗಿ ಒಕ್ಕಲಿಗರ ರಾಜಕೀಯ ಕೊಡುಗೆ ಅಪಾರವಾದುದು. ಈ ಪರಂಪರೆ ಇದ್ದುದರಿಂದಲೇ ಈ ಶಕ್ತಿ ಇದ್ದುದರಿಂದಲೇ ಆಧುನಿಕ ಭಾರತಕ್ಕೊಬ್ಬ ಪ್ರಧಾನಿಯನ್ನು ಕೊಟ್ಟ ಕೀರ್ತಿಯೂ ಕನ್ನಡ ನಾಡಿನ ಒಕ್ಕಲಿಗ ಜನಾಂಗಕ್ಕೆ ಸಲ್ಲುತ್ತದೆ.

ಒಕ್ಕಲಿಗರು ವ್ಯವಸಾಯನಿರತ ಜನಾಂಗವಾದರೂ ಸಾಹಿತ್ಯ ಮತ್ತು ಕಲೆಗಳಿಗೆ ಅವರ ಕೊಡುಗೆ ಯಾರಿಗೂ ಎರಡನೆಯದಲ್ಲ. ಈ ಜನಾಂಗದ ಸಾಹಿತ್ಯ ಕೃಷಿ ಅಭಿನಂದ ಗೌಡನೆಂಬ ಸಂಸ್ಕೃತ ಕವಿಯಿಂದ ಆರಂಭವಾಗುತ್ತದೆ. ಈತ ಪ್ರಕಾಂಡ ಸಂಸ್ಕೃತ ಪಂಡಿತನಾಗಿದ್ದು ರಾಮಾಯಣ, ಭಾರತ

ಬರೆದಿದ್ದಾನೆ. ಆದರೆ ಈತ ಶೂದ್ರನೆಂಬ ಕಾರಣದಿಂದ ಈತನ ಕಾವ್ಯಗಳು ಬೆಳಕಿಗೆ ಬರಲಿಲ್ಲವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಹನ್ನೆರಡನೆಯ ಶತಮಾನದ ಒಕ್ಕಲಿಗ ಮುದ್ದೇಗೌಡ, ಕೋಡಗದ ಮಾರಯ್ಯಾ, ಸಿದ್ದರಾಮ ಇವರೆಲ್ಲ ಒಕ್ಕಲಿಗರೆಂಬುದಕ್ಕೆ ಆಧಾರಗಳಿವೆ. ಮುದ್ದೇಗೌಡ ನಂತೂ ತಾನೂ ಒಕ್ಕಲಿಗನೆಂದು ಸ್ವತಃ ಹೇಳಿಕೊಂಡಿದ್ದಾನೆ. ಇನ್ನೂ ಪ್ರಾಚೀನ ಕಾಲಕ್ಕೆ ಒಕ್ಕಲಿಗ ಸಾಹಿತ್ಯ ಬರೆಯಬಹುದಾದರೆ ಗಂಗ ದೊರೆ ದುರ್ವಿನೀತನೆ ಕೆಲವು ಶಾಸ್ತ್ರ ಗ್ರಂಥಗಳನ್ನು ರಚಿಸಿದ್ದಾನೆ. ಹದಿನೈದನೆಯ ಶತಮಾನದ ಯಕ್ಷಗಾನ ಕವಿ ಕೆಂಪಣ್ಣಗೌಡ ಒಕ್ಕಲಿಗ ಜನಾಂಗದವನು. ಇದೇ ಕಾಲದ ಮೂರನೆ ಮಂಗರಸ ಮತ್ತು ನಂಜುಂಡರು ಒಕ್ಕಲಿಗ ಮೂಲದವರು. ನಂಜುಂಡ ಮಂಗರಸರು ಕ್ರಮವಾಗಿ ಜೆಳೆದು ವೀರಶೈವ ಧರ್ಮಗಳಿಗೆ ಮತಾಂತರ ಹೊಂದಿದರೆಂದು ತಿಳಿದು ಬರುತ್ತದೆ. ನಂಜುಂಡ ಮೂಲ ಹೆಸರು ದೇವನರಸಗೌಡ. ಮೈಸೂರು ಅರಸರೊಂದಿಗೆ ಸಂಬಂಧ ಬೆಳೆಸಿದ ಇವರು ಮುಂದೆ ಅರಸರೆಂದು ಕರೆದುಕೊಂಡರು.

ಮೈಸೂರು ಅರಸರ ಕಾಲದಲ್ಲಿದ್ದ ಒಕ್ಕಲಿಗ ಕವಿಗಳಲ್ಲಿ ಭಾರತೀನಂಜ, ಸಂಚಿ ಹೊನ್ನಮ್ಮರು ಪ್ರಮುಖರು. ರಣಧೀರ ಕಂಠೀರವನ ಆಸ್ಥಾನ ಕವಿಯಾಗಿದ್ದ ಭಾರತೀನಂಜ ಕಂಠೀರವ ನರಸರಾಜ ಚರಿತ್ರೆಯನ್ನು ಬರೆದಿದ್ದಾನೆ. ಈತ ತಲಕಾಡಿನವನು. ಕಂಠೀರವ ನರಸರಾಜನಿಗೆ ಆಪ್ತ ಮತ್ತು ಹತ್ತಿರದವನಾಗಿದ್ದನೆಂದು ಅವನ ಕಾವ್ಯದಿಂದಲೇ ತಿಳಿಯುತ್ತದೆ. ಚಿಕ್ಕದೇವ ರಾಜ ಒಡೆಯನ ಮಹಿಷಿಯರಲ್ಲೊಬ್ಬಳಾದ ಸಂಚಿಯ ಹೊನ್ನಮ್ಮ ಆಗ ಮೊದಲ ಕವಿಯತ್ರಿ. ಈಕೆಯು ಹದಿಬದೆಯ ಧರ್ಮ ಎಂಬ ಕಾವ್ಯವನ್ನು ಬರೆದಿದ್ದಾಳೆ. ತಿಮ್ಮ ರಾಜಗೌಡ ಎಂಬ ಕವಿಯು ಸ್ತ್ರೀ ವೈದ್ಯ ಎಂಬ ಗ್ರಂಥವನ್ನು ಬರೆದಿದ್ದಾನೆ. ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಹುಟ್ಟಿದ ಶ್ರೀಕಂಠೇಶಗೌಡ ನಾಟಕ, ಕಾವ್ಯ, ಕಾದಂಬರಿ, ಜಾನಪದ ಮುಂತಾದ ಕ್ಷೇತ್ರಗಳಲ್ಲಿ ವಿಶೇಷವಾಗಿ ರೂಪಾಂತರ ಅನುವಾದದಲ್ಲಿ ಅಪಾರ ಕೆಲಸ ಮಾಡಿರುವುದು ಕಂಡು ಬರುತ್ತದೆ. ಇವರು ಮಂಡ್ಯಜಿಲ್ಲೆಯ ಮದ್ದೂರು ತಾಲ್ಲೂಕು ದೇಶ ಹಳ್ಳಿಯವರು ಆಗಿನ ಕಾಲಕ್ಕೆ ನ್ಯಾಯಾಂಗ ಪದವಿ ನ್ಯಾಯಾಧೀಶರೂ ಆಗಿದ್ದರು.

ಆಧುನಿಕ ಕನ್ನಡ ಸಾಹಿತ್ಯದ ಮಹಾಕವಿ, ಋಷಿಕವಿ ವಿಶ್ವಮಾನವ ತತ್ವ ಬೋಧಿಸಿದ ದ್ರಷ್ಟಾರ ಶ್ರೀ ಕುವೆಂಪು ಹುಟ್ಟಿದ್ದು ಒಕ್ಕಲಿಗ ಜಾತಿಯಲ್ಲಿ. ರಾಷ್ಟ್ರಪಿತ ಗಾಂಧಿ ಬನಿಯನಾಗಿ ಹುಟ್ಟಿ ಲೋಕಕಲ್ಯಾಣಕ್ಕಾಗಿ ದುಡಿದಂತೆ, ನವೋದಯ ಸಾಹಿತ್ಯದ ಅನೇಕ ಮೊದಲುಗಳಿಗೆ ಶ್ರೀ ಕುವೆಂಪು ಪಾತ್ರರಾಗಿದ್ದರು. ಕನ್ನಡ ಸಾಹಿತ್ಯದ ಎಲ್ಲಾ ಎಲ್ಲಾ ಪ್ರಕಾರಗಳಲ್ಲಿಯೂ ಅವರು ಕುವೆಂಪು ಮುದ್ರೆಯೊತ್ತಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಒಕ್ಕಲಿಗ ಕವಿಗಳು, ನಾಟಕಕಾರರು, ಕಾದಂಬರಿ ಕಾರರು, ಸಂಶೋಧಕರು, ಜಾನಪದ ವಿದ್ವಾಂಸರು ಲೆಕ್ಕವಿಲ್ಲದಷ್ಟು ಜನರಿದ್ದಾರೆ. ದೇಜೇಗೌ, ಎಚ್.ಎಲ್. ನಾಗೇಗೌಡ, ಡಾ. ಜೀ. ಶಂ. ಪರಮಶಿವಯ್ಯ ಮುಂತಾದ ಹಿರಿಯರಿಂದ ಕಿರಿಯರವರೆಗೆ ಒಕ್ಕಲಿಗ ಜನಾಂಗದಿಂದ ಹುಟ್ಟಿ ಬಂದ ಸಾಹಿತಿಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ, ಶ್ರೀಮಂತಗೊಳಿಸುತ್ತಿದ್ದಾರೆ.

ಕಲಾ ಜಗತ್ತಿಗೆ ಒಕ್ಕಲಿಗರ ಕೊಡುಗೆ ಪಟ್ಟ ಮಹಾದೇವಿ ಶಾಂತಲಾದೇವಿಯಿಂದ ಆರಂಭವಾಗುತ್ತದೆ. ಅದಕ್ಕು ಮುಂಚೆ ಇದ್ದಿರಲಿಲ್ಲವೆಂದಲ್ಲ. ಶಾಂತಲಾದೇವಿ ನೃತ್ಯ ಸಂಗೀತ ಸಾಹಿತ್ಯದಲ್ಲಿ ಅಸಾಧಾರಣ ಪ್ರತಿಭಾವಂತಳಾಗಿದ್ದಳು. ಈಕೆಯನ್ನು ಲಕ್ಷ್ಮಿ, ಸರಸ್ವತಿ, ಪಾರ್ವತಿ, ನಾಟ್ಯ ರಾಣಿ ಎಂದೆಲ್ಲಾ ಶಾಸನಗಳು ಹಾಡಿ ಹೊಗಳಿವೆ. ಕನ್ನಡ ನಾಡಿನಲ್ಲಿ ಇಂತಹ ಮತ್ತೊಬ್ಬ ಮಹಿಳೆ ಕಂಡು ಬರುವುದಿಲ್ಲ. ಹೊಯ್ಸಳ ಒಂದನೆಯ ಬಲ್ಲಾಳ ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಮೂವರು ಕನ್ಯೆಯರನ್ನು ಮದುವೆಯಾಗಿದ್ದ. ಈ ಕನ್ಯೆಯರು ನೃತ್ಯ, ಗೀತ, ಶಾಸ್ತ್ರದಲ್ಲಿ ಜಗದಳೆಯರೆನಿಸಿದ್ದರು.

ಹದಿನೆಂಟನೆಯ ಶತಮಾನದ ಭೈರವಿ ಕೆಂಪೇಗೌಡರು ಸಂಗೀತ ಸಾಮ್ರಾಟರೆನಿಸಿದ್ದರು. ಮೈಸೂರು ಅರಮನೆಯಲ್ಲಿ ಕೆಲಕಾಲ ಆಸ್ಥಾನ ವಿದ್ವಾಂಸರಾಗಿದ್ದು, ವಂಚನೆಗೆ ಗುರಿಯಾದರೂ ಗೌಡರು ಸಂಗೀತ ಕ್ಷೇತ್ರದ ಧ್ರುವತಾರೆಯಾಗಿದ್ದರು. ಸಂಗೀತ ಕ್ಷೇತ್ರದಲ್ಲಿ ಅಪಾರ ಹೆಸರು ಮಾಡಿದ್ದ ಪಿಟೀಲು ಚೌಡಯ್ಯ ಒಕ್ಕಲಿಗರು. ಸಿನೆಮಾ ಕ್ಷೇತ್ರದಲ್ಲಿ ಹೆಸರು ಮಾಡಿರುವ ಬಿ. ಸರೋಜಾದೇವಿ, ಅಂಬರೀಶ್ ಮುಂತಾದ ಕಲಾವಿದರು ಒಕ್ಕಲಿಗರು. ನಾಟಕ ಮತ್ತು ಜನಪದ ಕಲಾಕ್ಷೇತ್ರದಲ್ಲಿ ಅಸಂಖ್ಯಾತ ಒಕ್ಕಲಿಗ ಕಲಾವಿದರಿದ್ದಾರೆ. ಹೀಗೆ ಕಲಾಕ್ಷೇತ್ರಕ್ಕೂ ಕನ್ನಡ ನಾಡಿನ ಒಕ್ಕಲಿಗರು ತಮ್ಮದೇ ಆದ ಕೊಡುಗೆಯನ್ನು ನೀಡಿ ಪ್ರಖ್ಯಾತರಾಗಿದ್ದಾರೆ.

ಸಾಮಾಜಿಕ ಕ್ಷೇತ್ರದ ಒಕ್ಕಲಿಗರ ಕೊಡುಗೆ ವಿಸ್ಮಯವನ್ನುಂಟು ಮಾಡುತ್ತದೆ. ಕನ್ನಡ ನಾಡಿನ ಉದ್ದಗಲಕ್ಕೂ ದೊರೆಯುವ ಶಾಸನಗಳು ಒಕ್ಕಲಿಗರು ನಿರ್ವಹಿಸಿದ ಸಾಮಾಜಿಕ ಹೊಣೆಗಾರಿಕೆಯನ್ನು ತೋರಿಸುತ್ತವೆ. ಗೌಡರುಗಳು ನೀಡಿರುವ ದಾನ ಧರ್ಮ ತಮ್ಮ ತುರುಗಳಿಗಾಗಿ ಗ್ರಾಮಗಳ ಒಕ್ಕಲಿಗ ಯುವಕರು ತೋರಿರುವ ವೀರತ್ವ, ತಮ್ಮ ಹಳ್ಳಿಯ ವನಿತೆಯರ ಮಾನ ರಕ್ಷಣೆಗಾಗಿ ಅವರು ಮಾಡಿರುವ ತ್ಯಾಗ ಬಲಿದಾನಗಳು ಅನುಪಮ ಅಸಾಧಾರಣವಾದಂಥವು. ಗ್ರಾಮ ಮುಖಂಡರಾಗಿ, ಗ್ರಾಮವೃದ್ಧ ರಾಗಿ ಅವರು ನಿರ್ವಹಿಸುವ ವಿವಿಧ ಪಾತ್ರಗಳು ಅಪರೂಪವಾದಂತಹವು. ಅನೇಕರು ತಮ್ಮನ್ನು ಗೌಡ ಕುಲದೀಪಕರೆಂದು ಕರೆದುಕೊಂಡಿದ್ದಾರೆ. ಎಲ್ಲಾ ಧರ್ಮಗಳಿಗೂ ಎಲ್ಲಾ ದೇವರು ದಿಂಡರು ಗಳಿಗೂ ಇವರು ಪಕ್ಷಪಾತವಿಲ್ಲದೆ ನಡೆದುಕೊಂಡಿದ್ದಾರೆ. ದತ್ತಿದಾನಗಳನ್ನು ಬಿಟ್ಟಿದ್ದಾರೆ. ಇಂತಹ ಸಾವಿರಾರು ಗೌಡರುಗಳ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತದೆ.

ಒಂದು ಕಾಲದಲ್ಲಿ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಗೌಡರು ಅರ್ಥಾತ್ ಒಕ್ಕಲಿಗರು ಕ್ರಮೇಣ ಹೀನಾಯ ಸ್ಥಿತಿಯತ್ತ ಜಾರಿದರು. ಕೃಷಿ ಅವಲಂಬಿತ ಈ ದೇಶದಲ್ಲಿ ಎರಡನೆಯ ಸ್ಥಾನದಲ್ಲಿದ್ದ ಒಕ್ಕಲಿಗರು ಮುಂದೆ ಶೂದ್ರರೆನಿಸಿಕೊಂಡು ಬಿಸಿಲು, ಮಳೆಗಳಲ್ಲಿ ದುಡಿಯುವ ಕೂಲಿಗಳಂತಾದರು. ಹಣದ ವ್ಯವಸ್ಥೆ ಜಾರಿಗೆ ಬಂದ ಮೇಲೆಯೂ ಈ ಜನಾಂಗದವರು ಭೂಮಿಗೇ ಅಂಟಿ ಕುಳಿತುದರಿಂದ ಅಪಾರವಾದ ಕಷ್ಟ ನಷ್ಟ ಅನುಭವಿಸಿದರು. ಹಳ್ಳಿಗಳಲ್ಲಿ ರೈತರ ಸಹಾಯಕ್ಕಾಗಿ ಇರುತ್ತಿದ್ದ ಕೆಲಸಿಗರ ಸಂತಾನ ಸಂಖ್ಯೆ ಬೆಳೆಯಿತು. ಬೆಳೆದಂತೆಲ್ಲಾ ಅವರು ತಮ್ಮದೇ ಆದ ಪಂಗಡ ರಚಿಸಿಕೊಂಡರು. ತಮ್ಮ ಗುಂಪಿಗೆ ನಾಯಕರನ್ನು ತಮ್ಮ ಪಂಗಡದಿಂದಲೇ ಆರಿಸಿಕೊಂಡರು.

ಕಸುಬುದಾರರೆಲ್ಲಾ ಹಣ ಸಂಪಾದನೆಯನ್ನು ಗುರಿಯಾಗಿಟ್ಟುಕೊಂಡರು. ನಗರಗಳು ಬೆಳೆಯ ತೊಡಗಿದವು. ಗ್ರಾಮ ಜೀವನ ಅದರೊಂದಿಗೆ ಮಳೆಯಾಧಾರಿತ ಕೃಷಿ ನಂಬಿದ ಒಕ್ಕಲಿಗರು ಬಡತನ, ಅನಕ್ಷರತೆಯಿಂದ ನರಳತೊಡಗಿದರು. ಒಂದು ಕಾಲದಲ್ಲಿ ಆರ್ಯರು ಬಂದು ಸಂಸ್ಕೃತ ಹೇರಿದಂತೆ ಆಧುನಿಕ ಯುಗದಲ್ಲಿ ಇಂಗ್ಲಿಷರು ಬಂದು ಇಂಗ್ಲಿಷನ್ನು ಹೇರಿದರು. ಬೇರೆಲ್ಲಾ ಜನಾಂಗದವರು ಈ ಶಿಕ್ಷಣ ಪಡೆದು ಸರ್ಕಾರಿ ಕೆಲಸ ಹಿಡಿದರೂ ಒಕ್ಕಲಿಗರು ತಮ್ಮ ಹೊಲಗದ್ದೆ ಬಿಟ್ಟು ಈಚೆಗೆ ಬರಲಿಲ್ಲ. ಬೇರೆಲ್ಲಾ ಜಾತಿಯವರೂ ತಮ್ಮ ಜಾತಿಯ ಸಂಘಗಳನ್ನು ಮಾಡಿಕೊಂಡು ತಮ್ಮ ಜಾತಿಯವರಿಗೆ ಈ ಆಧುನಿಕ ಶಿಕ್ಷಣ ಕೊಡಿಸುತ್ತಿದ್ದರು. ಒಕ್ಕಲಿಗರಲ್ಲಿ ಅಂತಹ ಯಾವ ಸಂಘಟನೆಗಳೂ ಇರಲಿಲ್ಲ. ಇಪ್ಪತ್ತನೆಯ ಶತಮಾನದ ಆದಿಯಲ್ಲಿ ನಡೆದ ಘಟನೆಯೊಂದು ಈ ಜನಾಂಗದಲ್ಲಿ ಸ್ವಲ್ಪ ಚುರುಕನ್ನುಂಟು ಮಾಡಿತು.

ಮೈಸೂರು ಅರಸರು ತಮ್ಮ ದಿವಾನರೂ ಸೇರಿದಂತೆ ಉನ್ನತ ಅಧಿಕಾರಿಗಳನ್ನು ಮದರಾಸು ಪ್ರಾಂತ್ಯದ ಅಯ್ಯಂಗಾರ್ ಮತ್ತು ಅಯ್ಯರ್ ಜನಾಂಗದಿಂದಲೇ ತರುತ್ತಿದ್ದರು. ಆಗ ಮೈಸೂರು ರಾಜ್ಯದಲ್ಲಿದ್ದ ಕಾಲೇಜುಗಳೆಲ್ಲಾ ಮದರಾಸು ವಿಶ್ವವಿದ್ಯಾನಿಲಯಕ್ಕೆ ಅಧೀನವಾಗಿದ್ದವು. ಪದವಿ ಪರೀಕ್ಷೆಯಲ್ಲಿ ಮೊದಲ ಹತ್ತು ಸ್ಥಾನಗಳನ್ನು ಪಡೆದವರನ್ನು ರೆವಿನ್ಯೂ ಅಧಿಕಾರಿಗಳಾಗಿ ನೇಮಿಸುತ್ತಿದ್ದರು. ಆ ರೀತಿಯ ಒಂದು ರೀತಿಯ ನಿಯಮವೇ ಜಾರಿಯಲ್ಲಿತ್ತು. ೧೯೦೨ರಲ್ಲಿ ಒಕ್ಕಲಿಗ ಜನಾಂಗದ ಚೆನ್ನಿಗಪ್ಪ ಎಂಬವರು ಪದವಿ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದರು. ಚೆನ್ನಿಗಪ್ಪ ರೆವಿನ್ಯೂ ಉನ್ನತಾಧಿಕಾರ ಪಡೆಯುತ್ತಾರೆಂದು ನಂಬಲಾಗಿತ್ತು. ಆದರೆ ಆದುದೇ ಬೇರೆ. ಎರಡರಿಂದ ಹತ್ತು ಸ್ಥಾನ ಪಡೆದ ಒಂಬತ್ತು ಮಂದಿ ಅವರೆಲ್ಲಾ ಬ್ರಾಹ್ಮಣರು ಉನ್ನತ ಹುದ್ದೆಗಳಿಗೆ ನೇಮಕವಾದರು. ಮೊದಲಿನ ಸ್ಥಾನದ ಚೆನ್ನಿಗಪ್ಪನವರು ಪ್ರೌಢಶಾಲೆಯ ಅಧ್ಯಾಪಕರಾಗಿ ನೇಮಿಸಲಾಯಿತು. ಆಗ ದಿವಾನರಾಗಿದ್ದ ಎಂ. ವಿಶ್ವೇಶ್ವರಯ್ಯನವರು ಇದಕ್ಕೆ ಕೊಟ್ಟ ಕಾರಣ ''ಯಾವನೆ ಶೂದ್ರ ಉನ್ನತ ಹುದ್ದೆಗೆ ಅರ್ಹನಲ್ಲ'' ಎಂಬುದು. ಈ ಅನ್ಯಾಯವನ್ನು ವಿರೋಧಿಸುವ ಸ್ಥಿತಿಯಲ್ಲಿ ಒಕ್ಕಲಿಗರು ಇರಲಿಲ್ಲ. ಚೆನ್ನಿಗಪ್ಪ ಬೆಂಗಳೂರಿನಲ್ಲಿ ಸಂಘವೊಂದನ್ನು ಕಟ್ಟಿ ಪ್ರತಿಭಟಿಸಲು ಯತ್ನಿಸಿ ವಿಫಲರಾಗಿ ತಮಗಾದ ಅನ್ಯಾಯದಿಂದ ನರಳಿ ಸತ್ತರು. ಇಲ್ಲಿಂದ ಬ್ರಾಹ್ಮಣೇತರ ಚಳುವಳಿ ಆರಂಭವಾಯಿತು.

ಬೆಂಗಳೂರಿನಲ್ಲಿ ಚೆನ್ನಿಗಪ್ಪನವರು ಆರಂಭಿಸಿದ್ದ ಒಕ್ಕಲಿಗ ಸಂಘವನ್ನು ೧೯೦೬ರಲ್ಲಿ ಕೆ.ಎಚ್. ರಾಮಯ್ಯ, ಬಿ. ಪುಟ್ಟಯ್ಯ, ರಾವ್ ಬಹದ್ದೂರು ಚನ್ನಯ್ಯ, ಮಾರಪ್ಪ, ಮುನಿಸ್ವಾಮಪ್ಪ ಮುಂತಾದ ಕುಲಮುಖಂಡರು ಕೈಗೆತ್ತಿಕೊಂಡರು. ಆಗ ಯುವರಾಜರಾಗಿದ್ದ ಕಂಠೀರವ ನರಸರಾಜ ಒಡೆಯರು ಇದಕ್ಕೆ ಬೆಂಬಲ ಕೊಟ್ಟುದು ಮುಖಂಡರಿಗೊಂದು ಶ್ರೀರಕ್ಷೆಯಾಯಿತು. ಜನಾಂಗದ ಅನೇಕರು ಶಿಕ್ಷಣ ಪಡೆದು ಮುಂದೆ ಬರಲು ಈ ಸಂಘಟನೆ ಕಾರಣವಾಯಿತು. ಹಾಗೆಯೇ ಮೈಸೂರಿನಲ್ಲಿ ಸಾಹುಕಾರ ಚನ್ನಯ್ಯ. ಎಚ್.ಸಿ. ದಾಸಪ್ಪ, ಎನ್.ಜಿ. ಮಜ್ಜೇಗೌಡ ಮುಂತಾದವರು ಸೇರಿ ಒಕ್ಕಲಿಗರಿಗಾಗಿ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದರು. ಮೈಸೂರು ರಾಜ್ಯದ ಜಿಲ್ಲಾ ಕೇಂದ್ರ

ಗಳೆಲ್ಲೆಲ್ಲಾ ಈ ಚಳುವಳಿಯ ಕಾರಣದಿಂದ ಒಕ್ಕಲಿಗರ ಸಂಘ ಮತ್ತು ವಿದ್ಯಾರ್ಥಿ ನಿಲಯಗಳು ಹುಟ್ಟಿಕೊಂಡವು. ಒಕ್ಕಲಿಗರಿಗಷ್ಟೇ ಅಲ್ಲ ಗ್ರಾಮಾಂತರದ ಎಲ್ಲಾ ವರ್ಗದವರಿಗೂ ಈ ನಿಲಯಗಳಲ್ಲಿ ಅವಕಾಸ ಕೊಟ್ಟು ತಮ್ಮ ಜಾತ್ಯಾತೀತತಯೆಯನ್ನು ಮೆರೆದಿದ್ದಾರೆ. ಕೆಲವು ಕಾಲ ಉತ್ತಮ ಸೇವೆ ಸಲ್ಲಿಸಿದ ಈ ಸಂಘಗಳು ಕೆಲವನ್ನುಳಿದು ಬಹುತೇಕವು ಯಾರ್ಯಾರದೋ ಸ್ವತ್ತಾಗಿ ತಿನ್ನುವವರ ತಾಣವಾಗಿ ನಿಷ್ಕ್ರಿಯವಾಗಿವೆ.

ಧಾರ್ಮಿಕವಾಗಿ ಒಕ್ಕಲಿಗರಿಗೆ ಅಷ್ಟೇನೂ ನಿಬಂಧನೆಗಳಲ್ಲ. ಅದಕ್ಕೆ ಕಾರಣ ಇದು ಯಾವನೊಬ್ಬ ಮತ ಸ್ಥಾಪಕ ಸ್ಥಾಪಿಸಿದ ಜಾತಿಯಲ್ಲ. ಒಕ್ಕಲಿಗರನ್ನು ಜಾತಿ ಎನ್ನುವುದಕ್ಕಿಂತ ಜನಾಂಗ ಎನ್ನುವುದು ಸೂಕ್ತ. ಇದೊಂದು ನೈಸರ್ಗಿಕ ಕುಲ ಅಂದರೆ ಮತ್ತಿನವರೆಲ್ಲ ಜಾತಿಯ ಬೇಲಿ ಹಾಕಿಕೊಂಡುದರಿಂದ ಇದಕ್ಕೆ ತನಗೆ ತಾನೇ ಒಂದು ಬೇಲಿಯಾಗಿದೆ. ಆದರೂ ಒಕ್ಕಲಿಗರೂ ಪ್ರಧಾನವಾಗಿ ಶೈವರು ಶಿವಾರಾಧಕರು. ಇದಕ್ಕೆ ಎರಡು ಕಥೆಗಳಿವೆ. ಒಂದು ಈ ಹಿಂದೆಯೇ ಕೊಟ್ಟಿರುವ ಒಕ್ಕಲಿಗರಿಗೆ ಸಹಾಯವಾಗಲು ನಂದಿಯನ್ನು ಕೊಟ್ಟ ಕಥೆ.

ಮತ್ತೊಂದು ಹೀಗಿದೆ. ಒಕ್ಕಲಿಗರ ಮೂಲ ಪುರುಷ ಆದಿ ಗೌಡ. ಇವನಿಗೆ ಇಬ್ಬರು ಗಂಡು ಮಕ್ಕಳು. ಒಬ್ಬಳೇ ಮಗಳು. ಆಕೆ ಅಪೂರ್ವ ಸುಂದರಿ, ಅಸಾಧಾರಾಣ ವ್ಯಕ್ತಿತ್ವ. ಶಿವ ಈಕೆಯನ್ನು ಮೆಚ್ಚಿ ಮದುವೆಯಾದ. ಆಕೆಯೇ ಗೌರಿ. ಈಗಲೂ ಆಕೆ ವರ್ಷದಲ್ಲಿ ಮೂರು ನಾಲ್ಕು ದಿನ ತನ್ನ ತೌರಿಗೆ ಬರುವಳೆಂದೂ ತೌರಿನ ಸುಖದಲ್ಲಿ ಕೈಲಾಸವನ್ನೇ ಮರೆಯುವ ಈಕೆಯನ್ನು ಕರೆದೊಯ್ಯಲು ಮಗ ಗಣಪ ಬರುವನೆಂದು ನಂಬಿಕೆ. ಈ ಕಾರಣದಿಂದಲೇ ಅನೇಕ ವೀರಶೈವ ಕವಿಗಳು ''ಆದ್ರಿ ಪುತ್ರಿಯನು ಶೂದ್ರೆಯೆಂದವರುಂಟೆ? ಒಕ್ಕಲು ಮಗಳೆಂದವರುಂಟೆ ಎಂದೆಲ್ಲಾ ಬಡಬಡಿಸಿದ್ದಾರೆ. ಗಂಡು ಮಕ್ಕಳಲ್ಲಿ ಹಿರಿಯನು ವ್ಯವಸಾಯ ಮತ್ತು ದನಕರುಗಳನ್ನು ನೋಡಿಕೊಂಡು ಒಕ್ಕಲಿಗರ ಮೂಲ ಪುರುಷನಾದ. ಕಿರಿಯವನು ಕುರಿಮಂದೆಗಳನ್ನು ನೋಡಿಕೊಳ್ಳುತ್ತಾ ಕುರುಬನಾದ ಎಂದು ಕಥೆ ಮುಂದುವರಿಯುತ್ತದೆ.

ಶೈವಧರ್ಮ ಭಾರತದಲ್ಲಷ್ಟೇ ಅಲ್ಲ ವಿಶ್ವಾದ ಬಹು ಭಾಗದಲ್ಲಿ ಪ್ರಧಾನ ಧರ್ಮವಾಗಿತ್ತು. ಒಕ್ಕಲಿಗರನ್ನು ಭೈರವನ ಒಕ್ಕಲು ಎಂದು ಅನೇಕ ಪ್ರಾಚೀನ ಗ್ರಂಥಗಳು ಹೆಸರಿಸುತ್ತವೆ. ವಾಸ್ತವವಾಗಿ ಕಾಶಿ ಭೈರವಕ್ಷೇತ್ರ. ವಿಶ್ವೇಶ್ವರ ಕೇವಲ ಇತ್ತೀಚಿನವನು. ವಿಷ್ಣುವಿಗೆ ಒಂಬತ್ತು ಅವತಾರಗಳಿದ್ದರೆ ಶಿವನಿಗೆ ಇಪ್ಪತ್ತಾರು ಅವತಾರಗಳಿವೆ. ಕಾಲಾನುಕ್ರಮದಲ್ಲಿ ಎಲ್ಲಾ ಧರ್ಮಗಳೂ ಕಿಲುಬು ಹತ್ತುತ್ತವೆ. ಹೀಗೆ ಶೈವಧರ್ಮವೂ ಆಗಿದೆ. ಕನ್ನಡ ನಾಡಿನಲ್ಲಿ ಶ್ರೀ ಆದಿಚುಂಚನಗಿರಿ, ಕದರಿ, ಭೈರನಬೆಟ್ಟ ಮುಂತಾದ ಅನೇಕ ಶೈವಕ್ಷೇತ್ರಗಳಿವೆ. ಭೈರವ ತನ್ನ ಶಕ್ತಿಯನ್ನು ಕಳೆದುಕೊಂಡು ಶಿವ, ಈಶ್ವರ ಇತ್ಯಾದಿ ಆಗಿದ್ದಾನೆ. ಇಷ್ಟಾದರೂ ಒಕ್ಕಲಿಗರು ಧರ್ಮ ವಿರೋಧಿ, ದೈವ ವಿರೋಧಿಗಳಲ್ಲ. ಕಡೆಗೆ ಮುಸಲ್ಮಾನರ ಬಾಬಯ್ಯನಿಗೂ ಅವರು ಕೈಮುಗಿಯುತ್ತಾರೆ. ಈ ದೃಷ್ಟಿಯಿಂದ ಒಕ್ಕಲಿಗರು ಸರ್ವಧರ್ಮ, ದೈವ ಸಮನ್ವಯ ಜನಾಂಗ.

ಇಂದು ಒಕ್ಕಲಿಗರು ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಇದ್ದಾರೆ. ಸಾಕಷ್ಟು ಪ್ರಗತಿಯನ್ನು

ಸಾಧಿಸಿದ್ದಾರೆ. ಶಿಕ್ಷಣ, ಆಡಳಿತ, ನ್ಯಾಯಾಂಗ ಕ್ಷೇತ್ರಗಳಲ್ಲಿ ತಮ್ಮದೇ ಆದ ಛಾಪು ಮುಡಿಸಿದ್ದಾರೆ. ವೈದ್ಯಕೀಯ ತಾಂತ್ರಿಕ, ವಿಜ್ಞಾನ ಕ್ಷೇತ್ರದಲ್ಲಿ ಕೂಡ ಇವರು ಯಾರಿಗೂ ಎರಡನೆಯವರಲ್ಲ. ಇವರಲ್ಲಿ ಕೆಲವು ಕೊರತೆಗಳೆಂದರೆ ಮೊದಲನೆಯದಾಗಿ ಒಗ್ಗಟ್ಟಿಲ್ಲದಿರುವುದು. ಅತಿ ಮುಖ್ಯವಾದುದೆಂದರೆ ಜನಾಂಗದ ಸಾಧನೆಗಳನ್ನು ದಾಖಲಿಸಿಡುವ ವ್ಯವಸ್ಥೆ ಇಲ್ಲದಿರುವುದು. ಇದರಿಂದ ಜನಾಂಗದ ಮಕ್ಕಳಿಗೆ ತಮ್ಮ ಹಿರಿಯರ ಸಾಧನೆ ಸಿದ್ಧಿಗಳು ತಿಳಿದು ಅದರಿಂದ ಸ್ಫೂರ್ತಿ ಪಡೆಯಲಾಗುತ್ತಿಲ್ಲ. ಸೆಕ್ಯೂಲರ್ ತನ್ನದನ್ನು ಬಿಡು ಎಂದು ಹೇಳುವುದಿಲ್ಲ. ನಿನ್ನದನ್ನು ಉತ್ತಮವಾಗಿ ಮನೆಯಲ್ಲಿ ಆಚರಿಸು, ಸಮಾಜದಲ್ಲಿ ಎಲ್ಲರೂ ಒಂದೇ ಎಂದು ನಡೆದುಕೋ ಎಂಬುದೇ ಜಾತ್ಯಾತೀತತೆ. ತನ್ನನ್ನು ತನ್ನ ಮನೆಯಲ್ಲಿ ಸರಿಯಾಗಿಟ್ಟುಕೊಳ್ಳಲಾರದವನು ಸಮಾಜವನ್ನು ಉತ್ತಮವಾಗಿಸಲಾರ. ಒಕ್ಕಲಿಗರಿಗೆ ಯಾವುದೇ ಧರ್ಮದ ಕಟ್ಟುಪಾಡುಗಳಿಲ್ಲ. ಯಾವುದೇ ಮತೀಯ ಲಾಂಛನಗಳಿಲ್ಲ. ಅವನಿಗೆ ಗಾಯತ್ರಿ ಇಲ್ಲ. ಪಂಚಾಕ್ಷರಿಯಿಲ್ಲ. ಇವುಗಳನ್ನೆಲ್ಲಾ ಇಂದಿಗೂ ಗೋಪ್ಯವಾಗಿ ಅಪ್ಪಿ ತಮ್ಮತಮ್ಮ ಜಾತಿಯ ರಾಜಕೀಯ ಸಂಘಟನೆಯಲ್ಲಿ ತೊಡಗಿರುವವರು ಅದೇನೂ ಇಲ್ಲದವರಿಗೆ ಜಾತ್ಯಾತೀತತೆ ಬಿಡದೆ ಹೇಳುತ್ತಿರುವುದು ವಿಪರ್ಯಾಸ.

ಇತಿಹಾಸದಲ್ಲೆಂದೂ ಅಸ್ಪೃಶ್ಯತೆ ಆಚರಿಸದ ಒಕ್ಕಲಿಗರ ಬಗ್ಗೆ ಇಲ್ಲದ ಅಸೂಯೆ ಬಿತ್ತಲಾಗುತ್ತದೆ. ಒಕ್ಕಲಿಗರು ನೋಡಿದೊಡನೆ ಮೈಲಿಗೆಯಾಯಿತೆಂದು ಸ್ನಾನ ಮಾಡಿದವರಲ್ಲ. ಅವರು ಕುಳಿತ ಜಾಗಕ್ಕೆ ಗೋಮೂತ್ರ ಹಾಕಿ ಶುದ್ಧಗೊಳಿಸಿದವರಲ್ಲ. ಅವರನ್ನು ಬಿಟ್ಟಿ ದುಡಿಸಿಕೊಂಡವರಲ್ಲ. ಕೋತಿ ತಾನು ತಿಂದು ಮೇಕೆಯ ಬಾಯಿಗೆ ಒರೆಸಿದಂತೆ ಸಮಸ್ಯೆಗಳಲ್ಲೆಲ್ಲಾ ಒಕ್ಕಲಿಗರನ್ನು ದೂರಲಾಗುತ್ತಿದೆ. ಇಂಥವುಗಳಿಗೆ ಒಕ್ಕಲಿಗರ ಸಂಘಗಳು ಸೂಕ್ತ ಉತ್ತರ ಕೊಡಬೇಕು. ತಪ್ಪಿದ್ದರೆ ಅದನ್ನು ಸಕಾರಣವಾಗಿ ತೋರಿಸಿಕೊಟ್ಟರೆ ಅಂಥವನ್ನು ತಿದ್ದಿಕೊಳ್ಳಲೂ ಒಕ್ಕಲಿಗರೂ ಅತ್ಯಂತ ಸೌಜನ್ಯದಿಂದ ಮುಂದಾಗಬೇಕು. ಅಸೂಯಾಪರವಾದವುಗಳಿಗೆ ಲಕ್ಷ್ಯ ಕೊಡುವುದು ಬೇಡ. ಒಕ್ಕಲಿಗರು ಈ ದೇಶದ ಮೂಲ ಸಂಸ್ಕೃತಿಯ ಜನಾಂಗ. ಭಾರತ, ಕನ್ನಡ ನಾಡುಗಳ ಸರ್ವತೋಮುಖ ಏಳಿಗೆಗೆ, ಸಂಸ್ಕೃತಿಗೆ ಅವರ ಕೊಡುಗೆಯ ಪ್ರಥಮತೆಯನ್ನು ಅಲ್ಲಗಳೆಯುವುದು ಯಾರಿಂದಲೂ ಸಾಧ್ಯವಲ್ಲ.

# ಶಾಸನೋಕ್ತ ಒಕ್ಕಲಿಗ ವೀರರು

ಪ್ರೊ. ಡಿ.ಕೆ. ರಾಜೇಂದ್ರ

ಶಾಸನಗಳು ಐತಿಹಾಸಿಕ ಮೂಲ ದಾಖಲೆಗಳು. ಕಾಲದಿಂದ ಕಾಲಕ್ಕೆ ಬೇರೆ ಬೇರೆ ರೂಪಗಳಲ್ಲಿ ಕಾಣಿಸಿಕೊಳ್ಳುತ್ತ ಬಂದ ಶಾಸನಗಳಲ್ಲಿ ಆಯಾ ಕಾಲದ ಘಟನೆಗಳ ದಾಖಲಾತಿಯನ್ನು ಕಾಣುತ್ತೇವೆ. ಶಿಲಾಶಾಸನಗಳಂತೂ ಖಚಿತತೆಯ ದೃಷ್ಟಿಯಿಂದ ಮಹತ್ವದ್ದಾಗಿ ಪರಿಗಣಿತವಾಗಿವೆ. ಶಾಸನಗಳು ಆಯಾ ಕಾಲದ ಯಾವುದೇ ಘಟನೆಗೆ ಸಂಬಂಧಿಸಿದ್ದಾಗಿರಬಹುದು. ಸಮಾಜದ ಯಾವುದೇ ವ್ಯಕ್ತಿಗೆ ಸಂಬಂಧಿಸಿದ್ದೂ ಆಗಿರಬಹುದು. ಶಾಸನಗಳನ್ನು ಇಂತಹವರೇ ಬರೆಸಬೇಕೆಂಬ ಕಡ್ಡಾಯವೂ ಇದ್ದಂತಿಲ್ಲ. ರಾಜಕೀಯ ಹಾಗೂ ಸಾಮಾಜಿಕ ವಲಯಗಳನ್ನು ಒಳಗೊಂಡಂತೆಯೇ, ಮೇಲು - ಕೀಳಿನ ಭಾವನೆಯೆಂಬುದಿಲ್ಲದೆ ಆಯಾ ವ್ಯಕ್ತಿಯ ಅಥವಾ ವಿಷಯದ ಮಹತ್ವದ ದೃಷ್ಟಿಯಿಂದ ಶಾಸನೋಕ್ತವಾಗಬಹುದು. ನಾಯಿಯೊಂದು ತನ್ನ ಅದ್ಭುತಸಾಹಸದಿಂದ ಶಾಸನೋಲ್ಲೇಖನಕ್ಕೆ ಅರ್ಹವಾಗುವಂತೆ, ಯಾವುದೇ ಸಾಮಾನ್ಯ ವ್ಯಕ್ತಿ ಕೂಡ ತನ್ನ ತ್ಯಾಗ - ಬಲಿದಾನ ಅಥವಾ ಸಾಹಸ - ಶೌರ್ಯದ ಕಾರಣಗಳಿಂದಾಗಿ ಆ ಮಾನ್ಯತೆಯನ್ನು ಪಡೆಯಬಹುದು. ಒಬ್ಬ ಸಾಂಸ್ಕೃತಿಕ ವೀರನಾಗಿ ಜನಮನದಲ್ಲಿ ಶಾಶ್ವತವಾಗಿ ಉಳಿಯುವಂತಾಗುತ್ತಾನೆ. ಈ ಕಾರಣಕ್ಕಾಗಿ ಶಾಸನಗಳು ಬಹುಮುಖಿ ಸಾಂಸ್ಕೃತಿಕ ದಾಖಲೆಗಳಾಗಿ, ಆಕರಗಳಾಗಿ ಉಳಿಯುತ್ತವೆ.

ಕರ್ನಾಟಕದ ಶಾಸನಗಳನ್ನು ಈ ದೃಷ್ಟಿಯಿಂದ ಪರಿಶೀಲಿಸಿದಾಗ ಅತ್ಯಮೂಲ್ಯವಾದ ಮಾಹಿತಿಗಳು ನಮಗೆ ಲಭ್ಯವಾಗುತ್ತವೆ. ಕನ್ನಡ ನಾಡಿನ ಸಂಸ್ಕೃತಿಕ ಪರಂಪರೆಯಲ್ಲಿ ಅವರೆಲ್ಲರೂ ಲೀನವಾಗಿದ್ದಾರೆ. ಅವರ ಧೈರ್ಯ-ಸಾಹಸಗಳು, ತ್ಯಾಗ-ಬಲಿದಾನಗಳು ನಮ್ಮನ್ನು ಎಚ್ಚರಿಸುವ ಹಾಗೂ ಮುಂದಿನವರೆಗೆ ದಾರಿ ದೀಪವಾಗುವಲ್ಲಿ, ಸತ್ವಯುತ ಬದುಕಿನೆಡೆಗೆ ಕೊಂಡೊಯ್ಯುವಲ್ಲಿ ಯಶಸ್ವಿಯಾದರೆ ನಿಜಕ್ಕೂ ಅವುಗಳ ಉದ್ದೇಶ ಸಾರ್ಥಕವಾದಂತೆ.

ಪ್ರಸ್ತುತ ಲೇಖನದಲ್ಲಿ ತುಮಕೂರು ಜಿಲ್ಲೆಯ ಒಕ್ಕಲಿಗ ಜನಾಂಗದ ವೀರ ಪುರುಷರನ್ನು ಕುರಿತ ಕೆಲವು ಶಾಸನಗಳನ್ನು ಪರಿಶೀಲಿಸಲಾಗಿದೆ. ಇದೊಂದು ತಲಸ್ಪರ್ಶಿಯಾದ ಸಮಗ್ರ ಅಧ್ಯಯನ ಅಲ್ಲ. ಶಾಸನಗಳಲ್ಲಿ ದೊರೆತ ಕೆಲವೊಂದನ್ನು ಮಾತ್ರ ಇಲ್ಲಿ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಬಗ್ಗೆ ಸಮಗ್ರವಾದ ಅಧ್ಯಯನದ ಅಗತ್ಯವಿದೆ ಎಂಬ ಅರಿವು ನನಗಿದೆ. ಹಾಗೆ ನೋಡಿದರೆ ಇದೊಂದು ಬೃಹತ್ ಗ್ರಂಥಕ್ಕೇ ವಸ್ತುವಾಗುತ್ತದೆ.

ಒಕ್ಕಲಿಗರು ಯಾರು? ಏನು? ಅವರ ಇತಿಹಾಸ ಎಷ್ಟು ದೊಡ್ಡದು ಎಂಬ ಯಾವ ವಿಷಯವನ್ನು ನಾನಿಲ್ಲಿ ಪ್ರಸ್ತಾಪಿಸುತ್ತಿಲ್ಲ. ಅವೆಲ್ಲವೂ ಒಂದೊಂದು ಪ್ರತ್ಯೇಕ ಲೇಖನಗಳಿಗೆ ವಸ್ತುವಾಗಬಲ್ಲ ವಿಷಯಗಳು. ಆದರೆ ಇಲ್ಲಿ ಈ ಜಿಲ್ಲೆಯ ಒಕ್ಕಲಿಗರು ಮಾಡಿದ ಕಾರ್ಯ, ತೋರಿದ ಸಾಹಸಗಳನ್ನು ಸಮೀಕ್ಷಿಸುವುದಷ್ಟೇ ಈ ಲೇಖನದ ಉದ್ದೇಶ. ಯಾವುದೇ ವ್ಯಕ್ತಿ ಅಥವಾ ಸಮಾಜ ಪರಂಪರೆಯ ಅರಿವಿಲ್ಲದೆ ಬದುಕಲು ಸಾಧ್ಯವಿಲ್ಲ. ತನ್ನನ್ನು ತಾನು ಅರಿತು ಬಲಗೊಳ್ಳಲು ಸಾಧ್ಯವಿಲ್ಲ. ಯಾವುದೇ ಜನಾಂಗಕ್ಕೆ ಆತ್ಮಬಲ ಉಂಟಾಗುವುದು ಪರಂಪರೆಯ ತಿಳಿವಿನಿಂದ ಎಂಬುದಂತೂ ನಿಜ. ಆ ದೃಷ್ಟಿಯಿಂದ ಈ ಬಗೆಯ ಅಧ್ಯಯನದ ಅವಶ್ಯಕತೆ ಹೆಚ್ಚಿದೆ.

ಪ್ರಸ್ತುತ ಲೇಖನದಲ್ಲಿ ನಾನು ವಿಚಾರಗಳ ತೀರ್ಮಾನಕ್ಕೆ ಬರುವಾಗ ಮುಖ್ಯವಾಗಿ ಅಂದಿನ ಸಾಮಾಜಿಕ ವ್ಯವಸ್ಥೆಯನ್ನು ಹಿನ್ನಲೆಯಾಗಿಟ್ಟುಕೊಂಡಿದ್ದೇನೆ. ಅಂದಿನ ಗ್ರಾಮ ಅಥವಾ ಹಳ್ಳಿಯನ್ನು ಗಮನಕ್ಕೆ ತೆಗೆದುಕೊಂಡಾಗ ಅದರ ರಚನೆಯೇ ವಿಶಿಷ್ಟ ರೀತಿಯದಾಗಿರುತ್ತಿತ್ತು. ವ್ಯವಸಾಯ ಅಲ್ಲಿಯ ಪ್ರಧಾನ ವೃತ್ತಿಯಾಗಿರುತ್ತಿತ್ತು. ಅದನ್ನವಲಂಬಿಸಿದಂತೆ ಇತರ ಉಪವೃತ್ತಿಯವರು ಅಲ್ಲಿರುತ್ತಿದ್ದರು. ಅವೆಲ್ಲವೂ ವ್ಯವಸಾಯಕ್ಕೆ ಪೂರಕವಾದ ಹಾಗೂ ಪೋಷಕವಾದ ಉಪವೃತ್ತಿಯಾಗಿರುತ್ತಿದ್ದುವು. ಕಮ್ಮಾರ, ಚಮ್ಮಾರ, ಅಗಸ, ಅಕ್ಕಸಾಲಿಗ, ನೇಯ್ಗೆ ಮುಂತಾದವರು ಕೂಡಿ ನಿರ್ದಿಷ್ಟ ಬದುಕು ಸಾಧ್ಯವಾಗಿತ್ತು. ಕೃಷಿಯನ್ನಲವಂಬಿಸಿದ ವರ್ಗ ಇದರಲ್ಲಿ ಪ್ರಧಾನವಾಗಿರುತ್ತಿತ್ತು. ಪ್ರಾರಂಭದಲ್ಲಿ ಈ ಕೃಷಿಕ ವರ್ಗದವರ ಸಂಖ್ಯೆ ಉಳಿದೆಲ್ಲಕ್ಕಿಂತಲೂ ಹೆಚ್ಚಾಗಿರುತ್ತಿತ್ತು ಎಂಬುದು ವೇದ್ಯ. ಇಂದಿನ ಹಿನ್ನೆಲೆಯಲ್ಲಿ ಗಮನಿಸುವಾಗಲೂ ಅವರು ಒಕ್ಕಲಿಗರೇ ಆಗಿದ್ದರು ಎಂಬುದನ್ನು ತಳ್ಳಿಹಾಕುವಂತಿಲ್ಲ. ಹಾಗಾಗಿ ಒಂದು ಜನಾಂಗವನ್ನಾಗಿಯೂ ಅವರನ್ನು ಪರಿಗಣಿಸಿದೆ.

ಈ ಜಿಲ್ಲೆಯಲ್ಲಿ ದೊರೆಯುವ ಶಾಸನಗಳನ್ನು ಗಮನಿಸಿದರೆ, ಬಹುತೇಕ ಶಾಸನಗಳ ವಸ್ತು ''ತುರುಗಾಳಗ''ಕ್ಕೆ ಸಂಬಂಧಿಸಿದ್ದು. ತುರುಗಳಿಗೂ-ಕೃಷಿಗೂ ಇರುವ ಸಂಬಂಧ ತಿಳಿದಿದ್ದೇ. ಭಾವನಾತ್ಮಕ ಸಂಬಂಧದ ಜೊತೆಗೆ, ವೃತ್ತಿಗೆ ಅನಿವಾರ್ಯವಾದ ನಂಟನ್ನೂ-ಗಂಟನ್ನು ಅದು ಪಡೆದುಕೊಂಡಿದೆ. ಜೊತೆಗೆ ಅವರ ಸಂಖ್ಯೆಯೇ ಹೆಚ್ಚಾಗಿರುತ್ತಿದ್ದ ಕಾರಣ ಇಂತಹ ಸಂದರ್ಭಗಳಲ್ಲಿ ಹೋರಾಟಕ್ಕೆ ಮುಂದಾಗುತ್ತಿದ್ದವರೂ ಅವರೇ. ಹಲವು ಸಂದರ್ಭಗಳಲ್ಲಿ ತಮ್ಮ ಸಾಹಸ ಕಾರ್ಯಗಳಿಗಾಗಿ 'ನಾಯಕ' ಪಟ್ಟವನ್ನು ಪಡೆದವರು. ಶಾಸನಗಳಲ್ಲಿ ಬರುವ ಬಹುತೇಕ ಘಟನೆಗಳು ಅಂತಹ ವೀರರ ಸಾಹಸಕಾರ್ಯಗಳ ಮೇಲೆ ಬೆಳಕು ಚೆಲ್ಲುತ್ತವೆ.

ಈ ಲೇಖನದಲ್ಲಿ ನಾನು ಪ್ರಸ್ತಾಪಿಸಿರುವ ಶಾಸನಗಳ ವಸ್ತುವಿನಲ್ಲಿ ಕಂಡು ಬರುವ ಘಟನೆಗಳು ಪ್ರಮುಖವಾಗಿ 'ತುರುಗಾಳ'ಕ್ಕೆ ಸಂಬಂಧಿಸಿದವುಗಳು. ಇನ್ನು ಕೆಲವು ಯುದ್ಧ ಸಂದರ್ಭದಲ್ಲಿ ಮೆರೆದು ಪ್ರಾಣಾರ್ಪಣೆ ಮಾಡಿದ ಶೌರ್ಯಕ್ಕಾದರೆ, ಮತ್ತೆ ಕೆಲವು ಕುದುರೆ ಕಾಳಗ ಹಾಗೂ ಹುಲಿಯಂತಹ ದುಷ್ಟ ಪ್ರಾಣಿಗಳನ್ನು ಕೊಂದದಕ್ಕೆ ಹಾಕಿಸಿದ ಶಾಸನಗಳು.

ಗುಬ್ಬಿ ಬಳಿಯ ಚಿಕ್ಕನೆಟ್ಟಿಕುಂಟೆ ಗ್ರಾಮದಲ್ಲಿನ ಒಂದು ಶಾಸನ ತುರುಗಾಳಗಕ್ಕೆ ಸಂಬಂಧಿಸಿದ ವೀರನಿಗೆ ಸಂಬಂಧಿಸಿದ್ದಾಗಿವೆ. ಹೊಯ್ಸಳ ವಿಷ್ಣುವರ್ಧನ ಪೃಥ್ವಿಯನ್ನು ಆಳುತ್ತಿದ್ದ ಸಂದರ್ಭದಲ್ಲಿ

ನೆಟ್ಟಕುಂಟೆಯ ಬೀರ ಗೌಂಡನ ಮಗ ಶೆಟ್ಟಿ ಗೌಂಡನ ದನಗಳನ್ನು ಮಾರಯ್ಯ ಎಂಬುವನು ಹೊಡೆದುಕೊಂಡು ಹೋಗುತ್ತಿರುವಾಗ, ಬೀರ ಗೌಂಡನು ಅವನ ಮೇಲೆ ಧಾಳಿ ಮಾಡಿ ತುರುಗಳನ್ನು ಹಿಂತಿರುಗಿಸಿ ತಂದನಾದರೂ, ಹೋರಾಟದಲ್ಲಿ ಬೀರ ಗೌಂಡನು ಸುರಲೋಕವನ್ನು ಸೇರುತ್ತಾನೆ. ಇವನ ಸಾಹಸ - ಶೌರ್ಯಗಳಿಗೆ ಮೆಚ್ಚಿ ನಿಟ್ಟೂರು, ಕಡಬ ಈ ಬೀಡಿನ ದಂಡನಾಯಕನು ಬೀರ ಗೌಂಡನ ಹೆಸರಿನಲ್ಲಿ ಹಾಕಿಸಿದ ವೀರಗಲ್ಲು ಇದಕ್ಕೆ ಸಾಕ್ಷಿಯಾಗಿದೆ.

''ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಕವರ್ಷ ೧೨೪೩ನೆಯ ದುಮಿತಿ ಸಂವತ್ಸರ''ದಲ್ಲಿ ಹಾಕಿಸಿದ ಶಾಸನವೊಂದರಲ್ಲಿ ನಂದಿಹಳ್ಳಿ ಗ್ರಾಮವನ್ನು ಕೆಲವು ಒಕ್ಕಲಿಗ ವೀರರಿಗೆ ಕೊಡುಗೆಯಾಗಿ ಕೊಟ್ಟ ಉಲ್ಲೇಖವಿದೆ. ಶಾಸನದ ಕೆಲವು ಭಾಗ ಮುಕ್ಕಾಗಿದ್ದರೂ, ಅದರ ಉಳಿದ ಭಾಗದಲ್ಲಿ ತಿಳಿಯುವ ಸಂಗತಿಯೆಂದರೆ: ಬೆಳವೆಯ ಮಂಚೇಗೌಡ, ಊರುಕೆರೆಯ ಏಚೀ ಗೌಡ, ಕಾಟಿಲ ಕೆಲಗೆರೆಯ ಹೆಗ್ಗಡೆ ಗೌಡ, ಉಚ್ಚಂಗ್ಯಾಗಿಯ ಸಿದ್ದೇ ಗೌಡ, ಬೊಮ್ಮ ಗೌಡ, ಹಾಗೂ ಬರುವ ಗೌಡ ಇವರುಗಳಿಗೆ ನಂದಿನಾಯಕನ ಹಳ್ಳಿಯನ್ನು ವೀರಗೊಡುಗೆಯಾಗಿ ಕೊಡಲಾಗಿದೆ. ಇದನ್ನು ಯಾವ ಕಾರಣಕ್ಕಾಗಿ ಕೊಡಲಾಗಿದೆ ಎಂಬ ವಿವರದ ಭಾಗ ಮುಕ್ಕಾಗಿದೆ. ಬಹುಶಃ ನಷ್ಟವಾಗಿರುವ ಭಾಗದಲ್ಲಿ ಅದೂ ನಷ್ಟ ಹೊಂದಿರಬೇಕು.

ಕುಣಿಗಲು ತಾಲೂಕಿನ ಟಂಕನಹಳ್ಳಿ ಗ್ರಾಮದ ದಕ್ಷಿಣ ಭಾಗದಲ್ಲಿನ ಗೌಡನ ಹೊಲದಲ್ಲಿ ದೊರೆತಿರುವ ಸಾಸನದಲ್ಲಿ ಟಂಕನಹಳ್ಳಿ ಗ್ರಾಮದ ಒಬ್ಬ ಗೌಡ, ಕೆಂಪರಾಮೇಗೌಡ ಎಂಬುವನಿಗೆ ವೀರಗೊಡುಗೆಯನ್ನು ಕೊಟ್ಟ ಬಗ್ಗೆ ಉಲ್ಲೇಖವಿದೆ. ಇದೂ ಕೂಡ ಮುಕ್ಕಾಗಿರುವ ಶಾಸನ. ಯಾವ ಸಾಹಸಕ್ಕಾಗಿ ಎಂಬ ವಿವರದ ಭಾಗವಿಲ್ಲ. ಬಹುಶಃ ತುರುಗಾಳಕ್ಕೆ ಸಂಬಂಧಿಸಿದಂತಿರಬೇಕು. ಇಲ್ಲವೇ ಹೆಣ್ಣಿನ ಮಾನರಕ್ಷಣೆಗೆ ಸಂಬಂಧಿಸಿದಂತೆಯೂ ಇರಲು ಸಾಧ್ಯ.

ತಿಪಟೂರು ತಾಲೂಕಿನಲ್ಲಿಯೂ ಕೂಡ ತುರುಗಾಳಕ್ಕೆ ಸಂಬಂಧಿಸಿದ ಅಪರೂಪದ ಶಾಸನವೊಂದು ಲಭ್ಯವಾಗಿದೆ. ವೀರನಾರಸಿಂಹ ಆಳುತ್ತಿದ್ದ ಕಾಲದಲ್ಲಿ ತಂಡಗದ ಊರಿನ ತುರುಗಳನ್ನು ಅಪಹರಿಸಿ ಕೊಂಡು ಹೋಗುತ್ತಿದ್ದ ಸಂದರ್ಭದಲ್ಲಿ ಹೊನ್ನವ್ವೆಯ ಸುಪುತ್ರ ಶತ್ರುಗಳ ವಿರುದ್ಧ ಹೋರಾಡಿ ಗೆದ್ದು ವೀರಮರಣವನ್ನು ಅಪ್ಪುತ್ತಾನೆ. ಆ ಸಂದರ್ಭದಲ್ಲಿ ಆತನ ಅಣ್ಣನ ಹೆಂಡತಿ ಕೇತವ್ವೆ ಮೈದುನನ ಹೆಸರಿನಲ್ಲಿ ಹಾಕಿಸಿದ ವೀರಗಲ್ಲು ಇದು.

ನೊಣವಿನ ಕೆರೆ ಹೋಬಳಿ ಮತ್ತಿಘಟ್ಟದ ಈಶ್ವರ ದೇವಸ್ಥಾನದ ಬಳಿ ದೊರೆತಿರುವ ವೀರಗಲ್ಲೊಂದು ಸಾಕಷ್ಟು ಶಿಥಿಲವಾಗಿದ್ದು ಅಸ್ಪಷ್ಟವಾಗಿದ್ದರೂ, ತುರುಗಾಳಕ್ಕೆ ಸಂಬಂಧಿಸಿದೆಂಬುದು ಸ್ಪಷ್ಟವಾಗುತ್ತದೆ. ಮತ್ತಿಘಟ್ಟದ ಮುದ್ದೇಗೌಂಡನ ಮಗ ಜಕ್ಕಗೌಂಡ, ಅವನ ಮಾರಗೌಂಡನು ತುರುಗಳ್ಳರನ್ನು ಎದುರಿಸಿ ಹೋರಾಡಿ ಗೆದ್ದುದರ ಬಗ್ಗೆ ವಿವರವಿದೆ. ಯುದ್ಧದಲ್ಲಿ ವೀರಮರಣ ಹೊಂದಿದ್ದಕ್ಕಾಗಿ ಈ ಶಾಸನ.

ತಿಪಟೂರು ತಾಲ್ಲೂಕಿನಲ್ಲಿಯೇ ದೊರೆತಿರುವ ಶಕವರ್ಷ ೧೦೩೬ರ ಶಾಸನದಲ್ಲಿ ಶೆಟ್ಟಿಗೌಂಡ ನೆಂಬುವನು ಶತ್ರುಗಳೊಡನೆ ಹೋರಾಡಿ, ತುರುಗಳನ್ನು ಮರಳಿ ತಂದು ಸುರಲೋಕವನ್ನು ಸೇರಿದ್ದರ

ಗೌರವಾರ್ಥ ಅವನ ಸಾಹಸವನ್ನು ಸಾರಲು ಆತನ ತಮ್ಮ ಸಾದಿಗೌಂಡ ಅಣ್ಣನ ಹೆಸರಿನಲ್ಲಿ ವೀರಶಾಸನ ವನ್ನು ಬರೆಸಿದ್ದಾನೆ. ಶೆಟ್ಟಿಗೌಂಡ ಗೌವುಂಡತನವನ್ನು ಮಾಡುತ್ತಿದ್ದುದ್ದಾಗಿ ತಿಳಿಯುತ್ತದೆ.

ಇದೇ ತಾಲ್ಲೂಕಿನ ಹೊನ್ನವಳ್ಳಿಯ ಮೊರಡಿಯಲ್ಲಿ ಮೇಯುತ್ತಿದ್ದ ತುರುಗಳನ್ನು ಕದ್ದೊಯ್ಯುತ್ತಿದ್ದ ಶತ್ರುಗಳನ್ನು ಬೆನ್ನಟ್ಟಿ ಹೋರಾಡಿ ಗೆದ್ದು ವೀರಮರಣವನ್ನಪ್ಪಿದ ವೀರರು ಸುರ ಲೋಕವನ್ನು ತಲುಪಿದರು ಎಂದು ಹೆಸರಿಸಿದ ಶಾಸನ ದೊರೆತಿದೆ. ಹೆಚ್ಚಿನ ವಿವರಗಳು ಇದರಲ್ಲಿ ದೊರೆಯುವುದಿಲ್ಲ. ಯಾರಿಗಾಗಿ ಯಾರು ಹಾಕಿಸಿದರು ಎಂಬ ಭಾಗವೂ ದೊರೆಯುವುದಿಲ್ಲ.

ಚಿಕ್ಕನಾಯಕನ ಹಳ್ಳಿಯ ಎರಡು ಶಾಸನಗಳು ತುರುಗಾಳಗದ ವಸ್ತುವನ್ನೊಳಗೊಂಡಿದೆ. ಕಳಸಿಯೂರ ಕಾಟಂಡೇ ಗೌಡರ ಮಗ ಮಾರಸಿಂಗ ಗಾವುಂಡ ತುರುಗಾಳದಲ್ಲಿ ಮಡಿದಾಗ ಬೂದೂರಗೌಂಡ ಆತನ ಹೆಸರಿನಲ್ಲಿ ನಿಲ್ಲಿಸಿದ ಶಾಸನ ಇದು. ಸೋಕೊಟ್ಟಿಯ ಬೊಮ್ಮಗೌಡನ ಇಬ್ಬರು ಮಕ್ಕಳು, ಕಾಳಯ್ಯ ಮತ್ತು ರಾಮಯ್ಯ ಎಂಬುವವರು ತುರುಗಳನ್ನು ಮಗುಳ್ಚಿತರುವಾಗ ಹೋರಾಟದಲ್ಲಿ ವೀರಸ್ವರ್ಗವನ್ನು ಸೇರಿದ ಸಂದರ್ಭದ ವಿವರ ಇಲ್ಲಿದೆ.

'ತುರುಗಾಳಗ' ಕರ್ನಾಟಕ ಸಂಸ್ಕೃತಿಯ ಸಾಂಸ್ಕೃತಿಕ ಇತಿಹಾಸದಲ್ಲಿ ಬಹುಮುಖ್ಯವಾಗಿ ಗಮನ ಸೆಳೆಯುತ್ತದೆ. ಅಜ್ಞಾತವಾಸದಲ್ಲಿದ್ದ ಪಾಂಡವರನ್ನು ಹಿಡಿಯುವ ಸಲುವಾಗಿ ಕೌರವರು ಹೂಡಿದ ತಂತ್ರ 'ಗೋಗ್ರಹಣ'ದಿಂದಲೂ ಅದರ ಇತಿಹಾಸ ಬೆಳೆದು ಬಂದಿದೆ. ಶತ್ರುಗಳಿಂದ, ಕಳ್ಳರಿಂದ ಗೋವುಗಳನ್ನು ರಕ್ಷಿಸುವುದು ಕರ್ತವ್ಯವೆಂದು ಭಾವಿಸಿ ಪ್ರಾಣವನ್ನು ತೃಣವಾಗಿ ಕಂಡು ಹೋರಾಡುತ್ತಿದ್ದ ವೀರರ ಪಡೆಯೇ ಇತ್ತು. ಗೋವುಗಳು ರೈತನ ಹಾಗೂ ಒಂದು ಗ್ರಾಮದ ಜೀವನಾಡಿಯೋ ಆಗಿದ್ದುವು. ಅವುಗಳಿಲ್ಲದೆ ಅವರ ಬಾಳು ಸಾಗುವಂತೆಯೇ ಇರಲಿಲ್ಲ. 'ಎತ್ತಿಲ್ಲ ದವನಿಗೆ ಎದೆ ಇಲ್ಲ' ಎಂಬ ಗಾದೆಯೇ ಇದೆ.

'ಗೋಗ್ರಹಣ' ಎರಡು ಕಾರಣಗಳಿಗಾಗಿ ನಡೆಯುತ್ತಿತ್ತೆಂದು ಗುರುತಿಸಲಾಗಿದೆ. ಒಂದು, ರಾಜಕೀಯ ಕಾರಣಕ್ಕಾಗಿ, ಮತ್ತೊಂದು ಕಳ್ಳತನದಿಂದ ಗೋವುಗಳನ್ನು ಕದ್ದೊಯ್ಯುವುದರ ಮೂಲಕ ಶತ್ರುವೆಂದು ಭಾವಿಸಿದ ಅವರನ್ನು ಯುದ್ಧಕ್ಕೆ ಆಹ್ವಾನಿಸುವುದೂ ಒಂದು ಕಾರಣವಾಗಿತ್ತು. ಕಾರಣ ಯಾವುದೇ ಆಗಿದ್ದರೂ ಹಾಗೆ ಕದ್ದೊಯ್ಯುವ ತುರುಗಳನ್ನು ಮರಳಿ ತರುವುದು ತಮ್ಮ ಕರ್ತವ್ಯವೆಂದು ಪ್ರತಿಯೊಬ್ಬರೂ ಭಾವಿಸಿದ್ದಂತೆ ತೋರುತ್ತದೆ. ಇಂತಹ ಸಂದರ್ಭದಲ್ಲಿ ವಿಶೇಷವಾಗಿ ಮುಂದಾಳುಗಳಾಗಿ ಹೋರಾಡುತ್ತಿದ್ದವರು ಕೃಷಿಯನ್ನವಲಂಬಿಸಿದ್ದ ಜನ ಎಂಬುದು ವೇದ್ಯ. ಇನ್ನಿತರರು ಅದಕ್ಕೆ ನೆರವಾಗುತ್ತಿದ್ದಿರಲೂಬಹುದು.

''ತುರುಗಾಳಗ'ದಂತೆಯೇ ಭಯಂಕರ ಪ್ರಾಣಿಗಳನ್ನು ಕೊಂದು ಸಾಹಸವನ್ನು ತೋರಿದ ವೀರರೂ ಇದ್ದಾರೆ. ಕೇವಲ ಬೇಟೆಯ ಸಂದರ್ಭದಲ್ಲಿ ಮಾತ್ರವಲ್ಲದೆ, ಊರಿಗೆ ನುಗ್ಗಿ ತೊಂದರೆ ಕೊಡುತ್ತಿದ್ದ ಹುಲಿಯಂತಹ ದುಷ್ಟ ಪ್ರಾಣಿಗಳನ್ನು ಕೊಂದು ಸಾಹಸಿಗರೆನಿಸಿದವರ ಬಗ್ಗೆಯೂ ಹಲವು ಪ್ರಸ್ತಾಪಗಳಿವೆ.

ತುಮಕೂರು ಜಿಲ್ಲೆಯ ಅದೇ ತಾಲ್ಲೂಕಿನ ಕರಿಕೆರೆ ಗ್ರಾಮದ ಬಸವನ ಗುಡಿಯ ಪೂರ್ವದ ಕಡೆ

ನಿಲ್ಲಿಸಿರುವ ವೀರಗಲ್ಲಿನ ''ಸ್ವಸ್ತಿ ಶ್ರೀ ಪ್ರಮಾದೋತ ಸಂವತ್ಸರದ ಮಾಘ ಮಾಸದ ಬಹುಳ ಪಂಚಮಿ ಮಂಗಳವಾರದಂದು ಕಾರಿಯಡವಿಯ ಮಾರಗಾವುಂಡನ ಮಗ ಶಂಕರ'' ಎಂದು ಬರೆಯಲಾಗಿದ್ದು ಅದರಲ್ಲಿ ಮಾರಗಾವುಂಡನ ಮಗ ಶಂಕರ ಎಂಬುವನು, ಸಮೀಪದ ಕಾಡಮನೆ ಎಂಬ ಊರಿಗೆ ಬಂದು ತೊಂದರೆ ಕೊಡುತ್ತಿದ್ದ ಹುಲಿಯೊಂದನ್ನು ಬಡಿದು ಕೊಂದು ತಾನೂ ವೀರಮರಣ ಹೊಂದಿದ ಎಂದು ಬರೆಯಲಾಗಿದೆ. ಶಂಕರ ಎಂಬುವವನು ಕರಿಕೆರೆ ಗ್ರಾಮದ ಒಬ್ಬ ವೀರ. ಅವನ ಸಾಹಸ - ಶೌರ್ಯಗಳನ್ನು ಇದರಲ್ಲಿ ಹೇಳಲಾಗಿದೆ.

ಹೀಗಿಯೇ ಯುದ್ಧ ಸಂದರ್ಭಗಳಲ್ಲಿ ತಮ್ಮ ಸಾಹಸಶೌರ್ಯಗಳನ್ನು ಮೆರೆದ ವೀರ ಪ್ರಸ್ತಾಪಗಳೂ ಹೇರಳವಾಗಿದೆ. ಚಿಕ್ಕನಾಯಕನ ಹಳ್ಳಿಯಲ್ಲಿ ದೊರೆತಿರುವ ಶಾಸನದಲ್ಲಿ ಯುದ್ಧರಂಗದಲ್ಲಿ ಹೋರಾಡಿ ಸುರಲೋಕವನ್ನು ಸೇರಿದ ತಂದೆ ಮತ್ತು ಅಣ್ಣಂದಿರ ಹೆಸರಿನಲ್ಲಿ ಕಿರಿಯ ಮಗ ಶಾಸನ ಬರೆಸಿದ ಪ್ರಸ್ತಾಪವಿದೆ. ಸೋದಲಸೀಮೆಯ ಗೋಪ ಗೌಡ ಮತ್ತು ಆತನ ಮಕ್ಕಳಾದ - ಬೊಮ್ಮಯ್ಯ, ಹರಿಮಯ್ಯ ಹಾಗೂ ಮಸಣಯ್ಯ ಇವರುಗಳು ತೀರ್ಥಯಾತ್ರೆಯನ್ನು ಮುಗಿಸಿಕೊಂಡು ಹಿಂತಿರುಗಿರುವ ಸಂದರ್ಭದಲ್ಲಿ ಇವರ ನಾಡಮೇಲೆ ದಾಳಿ ನಡೆಯುತ್ತಿರುತ್ತದೆ. ಇವರುಗಳು ಆ ದಾಳಿಯನ್ನು ಎದುರಿಸಿ ತಾವೂ ವೀರಮರಣವನ್ನು ಅಪ್ಪುತ್ತಾರೆ.

ತಿಪಟೂರು ತಾಲ್ಲೂಕಿನಲ್ಲಿ ದೊರೆತಿರುವ ಶಾಸನದಲ್ಲಿ ಕಲ್ಕಣಿ ನಾಡಿನ ಜಂಬೂವನ್ನು ಆಳುತ್ತಿದ್ದ ಮದ್ದಯ್ಯ ನಾಯಕನು ಶಕವರ್ಷ ೧೮೯೧ರಲ್ಲಿ ಹಗೆಯನ್ನು ಕೊಂದು ಸುರಲೋಕವನ್ನು ಸೇರಿದುದಕ್ಕಾಗಿ ಮುದ್ದೇಗೌಡ ಎಂಬುವನು ಹಾಕಿಸಿದ ಶಾಸನವಿದೆ.

ದಂಡಿನಶಿರವದಲ್ಲಿ ನಡೆದ ಯುದ್ಧದಲ್ಲಿ ದಂಡನಾಯಕರಾದ ಅಪ್ಪಯ್ಯ ದಂಡನಾಯಕ ಮತ್ತು ಗೋಪಯ್ಯ ದಂಡನಾಯಕರು ಕಾಡುವವರನ್ನು ನಿರ್ನಾಮ ಮಾಡಿ ಚೋಳರನ್ನು ಓಡಿಸಿದರು. ಆ ಕಾರಣಕ್ಕಾಗಿ ಬಲ್ಲಯ್ಯ ನಾಯಕ ಎಂಬುವನು ನಾರಸಿಂಹ ದೇವರಿಗೆ ಅರಿಕೆ ಮಾಡಿಕೊಂಡು ಅವರಿಬ್ಬರಿಗೂ ದಂಡಿನಸಿರವದ ಅರಕೆರೆ ತೂಬಿನ ಹತ್ತಿರದ ಗದ್ದೆಯನ್ನು ಕೊಡುಗೆಯಾಗಿ ಕೊಡಿಸಿದ್ದರ ಬಗ್ಗೆ ವಿವರವಿದೆ. ಇದೂ ಕೂಡ ಗುಬ್ಬಿ ತಾಲ್ಲೂಕಿನ ಬಳಿ ದೊರೆತಿದೆ.

''ತುಮಕೂರು ಜಿಲ್ಲೆಯ ಶಾಸನೋಕ್ತ ಒಕ್ಕಲಿಗ ವೀರರು'' - ಒಂದು ಸ್ಥೂಲ ಚಿತ್ರವನ್ನು ನಾನಿಲ್ಲಿ ಕೊಟ್ಟಿದ್ದೇನೆ. ಈ ನಿಟ್ಟಿನಲ್ಲಿ ಹೆಚ್ಚಿನ ಸಂಶೋಧನೆ ನಡೆಯಬೇಕಿದೆ. ಶಾಸನಗಳಲ್ಲಿ ಜಾತಿಯನ್ನು ಸಾಮಾನ್ಯವಾಗಿ ಸೂಚಿಸುವುದಿಲ್ಲ. ಆದರೆ ಕುಲಗಳನ್ನು ಸೂಚಿಸುವ ಸಂದರ್ಭಗಳುಂಟು. ಪ್ರಸ್ತುತ ಲೇಖನದಲ್ಲಿ ನಾನು ಆರಂಭದಲ್ಲಿಯೇ ಸೂಚಿಸಿರುವಂತೆ ಅಂದಿನ ಸಾಮಾಜಿಕ ವ್ಯವಸ್ಥೆಯನ್ನು, ಪರಿಸ್ಥಿತಿಯನ್ನು ಹಿನ್ನೆಲೆಯಾಗಿಟ್ಟುಕೊಂಡು, ಅವುಗಳ ಜೊತೆಗೆ ವ್ಯಕ್ತಿಗಳ ಹೆಸರಿನ ಜೊತೆಯಲ್ಲಿ ಬರುವ ''ಗಾವುಂಡ'' ಎಂಬುದನ್ನು ಆಧಾರವಾಗಿಟ್ಟುಕೊಂಡು ತೀರ್ಮಾನಕ್ಕೆ ಬಂದಿದ್ದೇನೆ. ಅಲ್ಲದೆ. ಶಾಸನಗಳಲ್ಲಿ ಬರುವ ಸಿದ್ದಪ್ಪ ನಾಯಕ, ಭೈರವ ನಾಯಕ ಮುಂತಾದ ಹೆಸರುಗಳ ಜೊತೆಯಲ್ಲಿ ಬರುವ 'ನಾಯಕ' ಎಂಬುದು 'ದಂಡನಾಯಕ' ಅಥವಾ 'ಮುಂದಾಳು' ಎನ್ನುವ ಅರ್ಥದಲ್ಲಿ ಪರಿಗಣಿಸಲಾಗಿದೆ. ಒಕ್ಕಲಿಗರಲ್ಲಿ 'ನಾಯಕ' ಎಂಬುದು ಜಾತಿಸೂಚಕವಾಗಿ

ಇಂದಿಗೂ ಇದೆ. ಅಂದಿನ ಸಮಾಜದ ಒಂದೊಂದು ಗ್ರಾಮವನ್ನು ಗಮನಿಸಿದಾಗಲ್ಲೂ ಅಲ್ಲಿ ಇನ್ನಿತರ ಕಸುಬಿನವರುಗಳು ಇದ್ದರೂ, ಕೃಷಿಯನ್ನು ಅವಲಂಬಿಸಿದವರದ್ದೇ ಪ್ರಧಾನವರ್ಗ ಆಗಿರುತ್ತಿತ್ತು ಎಂಬುದು ತಿಳಿದಿರುವ ವಿಷಯ. ಹಾಗಾಗಿ ಇಂತಹ ಹೋರಾಟದ ಸಂದರ್ಭಗಳಲ್ಲಿ ಅವರದ್ದೇ ಮೇಲುಗೈಯಾಗಿರುತ್ತಿತ್ತು ಎಂಬುದು ಸ್ಪಷ್ಟ. ಸಂದರ್ಭೋಚಿತವಾಗಿ ಇನ್ನಿತರ ವರ್ಗದವರೂ ಅದರಲ್ಲಿ ಸೇರಿಕೊಳ್ಳುತ್ತಿದ್ದಿರಬಹುದು.

# ಕೃಷಿ ಜಗತ್ತಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಗೌಡರು

ಎ.ಕೆ. ಹಿಮಕರ

## ಭಾಗ- ೧

## ಗೌಡರ ಕೃಷಿ ವಿಜ್ಞಾನ ಮತ್ತು ತಂತ್ರಜ್ಞಾನ

ಕರ್ನಾಟಕ ಕರಾವಳಿಯ ದಕ್ಷಿಣ ಭಾಗದಲ್ಲಿ ಮಂಗಳೂರಿನಿಂದ ಕಾಸರಗೋಡು, ಕೊಡಗು, ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಯವರೆಗೆ ಹರಡಿರುವ ಭಾಗ ಮಾತ್ರ ಆಡಳಿತಾತ್ಮಕವಾಗಿ ದಕ್ಷಿಣ ಕನ್ನಡ ಎಂಬುದಾಗಿ ಪರಿಗಣಿಸಲಾಗುತ್ತಿದೆ. ಒಕ್ಕಲಿಗ ಸಮುದಾಯವು ಸದ್ಯ ಕರಾವಳಿಯ ಈ ಭಾಗದಲ್ಲಿ ಮಾತ್ರ ವಾಸಿಸುತ್ತಿದ್ದಾರೆ. ಅಂದರೆ ಕರಾವಳಿಯ ಉತ್ತರದ ಭಾಗಗಳಾದ ಉಡುಪಿ, ಉತ್ತರ ಕನ್ನಡಗಳಲ್ಲಿ ಒಕ್ಕಲಿಗ ಗೌಡರು ಮನೆ ಮಾಡಿಕೊಂಡಂತಿಲ್ಲ. ಸದ್ಯ ಪ್ರಸ್ತುತ ಬರಹದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಗೌಡರನ್ನು ಮಾತ್ರ ಪರಿಗಣಿಸಲಾಗಿದೆ.

ಗೌಡರು ಮೂಲತಃ ಈ ಭಾಗದವರಲ್ಲ, ಅವರು ಮೈಸೂರು, ಹಾಸನ, ಐಗೂರು, ಚಿಕ್ಕಮಗಳೂರು ಮೂಲಕ ಕರಾವಳಿಗೆ ವಲಸೆಯಾದವರೆಂಬುದಾಗಿ ಗೌಡರ ಜನಾಂಗಾಧ್ಯಯನಗಳಿಂದ ಕಂಡು ಬರುತ್ತದೆ. ಹಾಗಾಗಿ ಘಟ್ಟದ ಬುಡದ ತಾಲೂಕುಗಳಾದ ಸುಳ್ಯ, ಪುತ್ತೂರು ಮತ್ತು ಬೆಳ್ತಂಗಡಿ ಭಾಗಗಳಲ್ಲಿ ಇವರು ನೆಲೆ ನಿಂತರು. ಬಳಿಕ ನಿಧಾನವಾಗಿ ಕರಾವಳಿ ಕಡೆಗೆ ಹರಡಿಕೊಂಡರು ಎಂಬುದಾಗಿ ತಿಳಿದುಬರುತ್ತದೆ. ಈ ಬಗ್ಗೆ ಹೆಚ್ಚಿನ ವಿವರಗಳನ್ನು ಡಾ. ಪುರುಷೋತ್ತಮ ಬಿಳಿಮಲೆಯವರ ಅಧ್ಯಯನಗಳಿಂದ ಪಡೆಯಬಹುದು.

ಗೌಡರ ಜನಸಂದಣಿ ಸುಳ್ಯದಲ್ಲಿ ಅತಿ ಹೆಚ್ಚು. ಸುಳ್ಯ ತಾಲೂಕಿನ ವಾಯುವ್ಯ ಭಾಗದ ಪೆರುವಾಜೆ, ಕೊಡಿಯಾಲ, ಬೆಳ್ಳಾರೆ ಗ್ರಾಮಗಳನ್ನು ಹೊರತುಪಡಿಸಿದರೆ ಉಳಿದ ೩೮ ಗ್ರಾಮಗಳಲ್ಲಿ ಗೌಡರೇ ಬಹು ಸಂಖ್ಯಾತರು. ಅದರಲ್ಲೂ ಸುಮಾರು ೨೦ ಗ್ರಾಮಗಳಲ್ಲಿ ಒಟ್ಟು ಜನಸಂಖ್ಯೆಯ ಶೇಕಡಾ ೬೦%ರಷ್ಟು ಗೌಡರೇ ಇರುವುದು ಕಂಡುಬರುತ್ತದೆ. ಪುತ್ತೂರು ತಾಲೂಕಿನ ಪೂರ್ವದ ಭಾಗ, ಬೆಳ್ತಂಗಡಿ ತಾಲೂಕಿನ ಪೂರ್ವದ ಭಾಗಗಳಲ್ಲಿ ಗೌಡರು ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಇದರ ಹೊರತಾಗಿ ವಿಟ್ಲ ಮತ್ತು ಬಂಟ್ವಾಳದ ಕೆಲವೇ ಹಳ್ಳಿಗಳಲ್ಲಿ ಗೌಡರು ವಾಸಿಸುತ್ತಿರುವುದನ್ನು

ಕಾಣಬಹುದು. ಇಂದು ಕೇರಳದ ಭಾಗವಾಗಿರುವ ಬಂದಡ್ಕ ಮತ್ತು ಕಲ್ಲಪಳ್ಳಿ ಪ್ರದೇಶದಲ್ಲಿ ಗೌಡರಿದ್ದಾರೆ. ಕೊಡಗಿನ ಭಾಗವಾದ ಪೆರಾಜೆ, ಚೆಂಬು, ಕೊಡಗು, ಸಂಪಾಜೆ ಹಲವಾರು ದೃಷ್ಟಿಯಲ್ಲಿ ದಕ್ಷಿಣ ಕನ್ನಡ ಗೌಡ ಜಗತ್ತಿನೊಂದಿಗೆ ಸಂಬಂಧವನ್ನು ಪಡೆದುಕೊಂಡಿದೆ.

ಸಸ್ಯ ಮತ್ತು ಪ್ರಾಣಿಗಳನ್ನು ಬಳಸಿ ಭೌಗೋಳಿಕ ಪರಿಸರವೊಂದರಲ್ಲಿ ಜನವರ್ಗವೊಂದು ತಮ್ಮ ಕೌಶಲ್ಯ, ತಂತ್ರಸಾಧನ ಮತ್ತು ಅನುಭವದೊಂದಿಗೆ ಉತ್ಪಾದನೆ ಮಾಡುವುದೇ ಬೇಸಾಯ ಎಂಬುದಾಗಿ ಪ್ರೊ. ಅರುಣ್ ಸಿಂಗ್ ವಿವರಿಸುತ್ತಾರೆ. ಕೃಷಿ ವ್ಯವಸ್ಥೆಯು ಮೂಲತಃ ಜನರ ಅವಶ್ಯಕತೆಯನ್ನಾಧರಿಸಿ ಬೆಳೆದಿರುವುದಾದರೂ ಅಲ್ಲಿಯ ಭೌಗೋಳಿಕ ಪರಿಸರ, ನೆಲದ ಮೇಲ್ಮೈ ಪರಿಸ್ಥಿತಿ, ಹವಾಗುಣ, ಜಲ ಮೊದಲಾದ ನೈಸರ್ಗಿಕ ಅಂಶಗಳು ಉತ್ಪಾದನಾ ಕೌಶಲ್ಯ, ತಂತ್ರಸಾಧನಗಳನ್ನು ರೂಪಿಸುತ್ತವೆ.

## ದಕ್ಷಿಣ ಕನ್ನಡ ಜಿಲ್ಲೆಯ ಭೌಗೋಳಿಕ ಪರಿಸರ

ದಕ್ಷಿಣ ಕನ್ನಡ ಜಿಲ್ಲೆಯನ್ನು ಕರ್ನಾಟಕ ಕರಾವಳಿ ಜಿಲ್ಲೆ ಎಂಬುದಾಗಿ ಪರಿಗಣಿಸಲಾಗಿದ್ದರೂ ಜಿಲ್ಲೆಯ ಬಹುಪಾಲು ಪ್ರದೇಶವನ್ನು ಮಲೆನಾಡು ಮತ್ತು ಅರೆಮಲೆನಾಡೆಂದೇ ಕರೆಯಬೇಕಾಗಿದೆ. ಅದರಲ್ಲೂ ಗೌಡ ಜನಾಂಗವು ವಾಸಿಸುತ್ತಿರುವ ಬಹುತೇಕ ಪ್ರದೇಶ ಮಲೆನಾಡು. ಈ ಭಾಗವು ಪಶ್ಚಿಮ ಘಟ್ಟಗಳ ದಟ್ಟ ಅರಣ್ಯ ಪ್ರದೇಶವಾಗಿದೆ. ಕಡಿದಾದ ಗಿರಿ ಕಂದರಗಳು, ಸದಾ ಹರಿಯುವ ಹಳ್ಳ ಕೊಳ್ಳಗಳಿಂದ ಕೂಡಿದ್ದು ಕರಾವಳಿ ಕಡೆಗೆ ಬಂದಂತೆ ಸಮತಟ್ಟಾದ ಬಯಲುಗಳು ಕಾಣಿಸುತ್ತವೆ. ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ನದಿಗಳು ಹುಟ್ಟುವುದು ಇದೇ ಪ್ರದೇಶದಲ್ಲಿ.

ಕಾಡುಗಳಲ್ಲಿ ನಿತ್ಯ ಹರಿದ್ವರ್ಣ ಮತ್ತು ಬೇಸಗೆಯಲ್ಲಿ ಎಲೆ ಉದುರಿಸುವ 'ಸೆಮಿ ಡೆಸುಡುವಸ್' ವರ್ಗದ ಅರಣ್ಯಗಳಿವೆ. ಏರಿಳಿಯುವ ಗುಡ್ಡಗಳ ಸಂದುಗೊಂದುಗಳಲ್ಲಿ ಊರು ಬೆಳೆಸಿರುವುದು ಇಲ್ಲಿಯ ಗೌಡರ ಹೆಗ್ಗಳಿಕೆ. ಕಾಡಲ್ಲಿ ವಿಪುಲವಾದ ನೈಸರ್ಗಿಕ ಸಂಪತ್ತುಗಳಿವೆ. ನಾನಾ ಬಗೆಯ ವನಸ್ಪತಿಗಳು, ರಾಂಪತ್ರೆ, ದಾಲ್ಚೀನಿ, ಬಗ, ದೂಪ, ಅಲ್ಲದೇ ಬಿದಿರು, ಬೆತ್ತ ಮೊದಲಾದ ಗೃಹೋಪಯೋಗಿ ಸೊತ್ತುಗಳು, ರೈತರ ಸಲಕರಣೆಗಳಾದ ಬುಟ್ಟಿ, ಕುಡಿಕೆಗಳನ್ನು ತಯಾರಿಸಲು ಹೇರಳ ಕಚ್ಚಾವಸ್ತುಗಳಿವೆ. ಬೀಟಿ, ಕಿರಾಲುಬೋಗಿ, ಮತ್ತಿ, ಹೆಬ್ಬಲಸು, ಬೆಂಡಕ್ಕಿ ಮೊದಲಾದ ಬೆಲೆಬಾಳುವ ಮರಮಟ್ಟುಗಳಿವೆ. ರೈತರಿಗೆ ಬೇಕಾದ ಎಲ್ಲಾ ವಿಧದ ಸೊಪ್ಪು, ಕಟ್ಟಿಗೆ ಧಾರಾಳ ಸಿಗುತ್ತಿತ್ತು. ಆದರೆ ಕ್ರಮೇಣ ಅರಣ್ಯ ನಾಶದಿಂದಾಗಿ ರೈತರು ತೀವ್ರ ಅಭಾವ ಎದುರಿಸುತ್ತಿದ್ದಾರೆ.

## ನೀರು ಮತ್ತು ನೀರ ಹರಿವು

ಗೌಡರು ವಾಸಿಸುವ ಪ್ರದೇಶದಲ್ಲಿ ನೇತ್ರಾವತಿ, ಕುಮಾರಧಾರೆ, ಗುಂಡಿಯ ಹೊಳೆ, ಪಯಸ್ವಿನಿ, ಕಲ್ಲಾಜೆ ಹೊಳೆಗಳು ಹರಿಯುತ್ತಿವೆ. ಇವು ಪ್ರಧಾನ ನದಿಗಳಾದರೂ, ಸಹಸ್ರಾರು ತೊರೆಗಳು ಪಶ್ಚಿಮ ಘಟ್ಟದಿಂದಿಳಿದು ಈ ನದಿಗಳನ್ನು ವಿಶಾಲವಾಗಿ ರೂಪಿಸಿವೆ. ಕಾಡಿನಿಂದ ಹರಿಯುವ ಈ ನದಿಗಳು ಸದಾ ಹರಿಯುತ್ತಿದ್ದು, ಕೃಷಿಕರಿಗೆ ನೀರಾಶ್ರಯ ನೀಡುತ್ತಿವೆ.

## ಮಳೆ

ನೈಸರ್ಗಿಕ ಸಂಪನ್ಮೂಲಗಳ ಪೈಕಿ ಕೃಷಿಕರಿಗೆ ಮಳೆ ಅತ್ಯಂತ ಮುಖ್ಯವಾದದ್ದು. ಗೌಡರ ಕೃಷಿ ಮಳೆಯನ್ನಾಧರಿಸಿಯೇ ರೂಢಿಗೆ ಬಂದಿದೆ. ಜೂನ್, ಜುಲೈ, ಆಗಸ್ಟ್ ತಿಂಗಳಲ್ಲಿ ಒಟ್ಟು ವಾರ್ಷಿಕ ಮಳೆಯ ಶೇಕಡಾ ೮೦% ಮಳೆ ಬೀಳುತ್ತದೆ. ಬಳಿಕ ಸಪ್ಟೆಂಬರ, ಒಕ್ಟೋಬರಗಳಲ್ಲಿ ಮಳೆ ಬಿದ್ದು, ಹೆಚ್ಚು ಕಡಿಮೆ ಆರು ತಿಂಗಳು ಮಳೆ ಮತ್ತಾರು ತಿಂಗಳು ಬೇಸಗೆ. ಗೌಡರ ಪ್ರಾಬಲ್ಯ ಇರುವ ಮೂರು ತಾಲೂಕುಗಳಲ್ಲಿ ಅತ್ಯಂತ ಹೆಚ್ಚು ಮಳೆಯಾಗುತ್ತದೆ.

## ಹವಾಗುಣ

ಕರಾವಳಿ ತೀರದಲ್ಲಿ ತೇವಾಂಶ ಹೆಚ್ಚಿದೆ. ಒಳನಾಡಿನ ಭಾಗವಾಗಿರುವ ಸುಳ್ಯ, ಪುತ್ತೂರು, ಬೆಳ್ತಂಗಡಿಗಳಲ್ಲಿ ಚಳಿ ಹೆಚ್ಚು. ಕಾಡಿನ ಹಸಿರು ಚಾವಣಿ ದಟ್ಟವಾಗಿದ್ದುದರಿಂದ ಹವೆ ತಂಪಾಗಿದ್ದು, ಹಲವಾರು ಬೆಳೆಗಳಿಗೆ ಅನುಕೂಲತೆ ಇದೆ. ಘಟ್ಟ ಏರುತ್ತಾ ಹೋದಂತೆ ಚಳಿಯ ಪ್ರಮಾಣವೂ ವೃದ್ಧಿಸುತ್ತದೆ. ಮಳೆ ಮತ್ತು ಬೇಸಗೆಯ ನಡುವೆ ಬಹಳ ಕಡಿಮೆ ಅವಧಿಯ ಚಳಿಗಾಲವಿದೆ. ಕನಿಷ್ಠ ತಾಪಮಾನ ೨೦.೯°C ಮತ್ತು ಅತಿ ಹೆಚ್ಚು ಅಂದರೆ ೩೨.೨°C ಆಗಿರುತ್ತದೆ.

## ಮಣ್ಣು

ಕೃಷಿಯ ತಳಹದಿಯೇ ಮಣ್ಣು. ಮಣ್ಣು ಭೂಮಿಯ ಮೂಲದ ವಸ್ತು. ಲ್ಯಾಟರೈಟ್ ವರ್ಗಕ್ಕೆ ಸೇರಿದ ಕೆಂಪು ಮಣ್ಣು, ತಗ್ಗಿನಲ್ಲಿರುವ ಮೆಕ್ಕಲು ಮಣ್ಣು, ಫಲವತ್ತಾಗಿದ್ದು ಭತ್ತ ಬೆಳೆಯಲು ಅನುಕೂಲವಾಗಿದ್ದುವು. ಕೆಂಪು ಮಣ್ಣು ತೋಟದ ಮತ್ತು ತೋಟಗಾರಿಕಾ ಬೆಳೆಗಳಿಗೆ ಅನುಕೂಲವಾಗಿದೆ. ಇಲ್ಲಿಯದು ಅತ್ಯಂತ ಶ್ರೀಮಂತ ಮಣ್ಣು.

## ಗೌಡರು ಮಣ್ಣು ಹದಗೊಳಿಸುವ ತಂತ್ರ

ನಾಗರೀಕತೆಯನ್ನು ಬೆಳೆಸಿರುವುದೇ ನೇಗಿಲು. ಗೌಡರೆಲ್ಲರೂ ನೇಗಿಲಯೋಗಿಗಳೆಂದು ಗುರುತಿಸಲ್ಪಡುತ್ತಾರೆ. ಮಣ್ಣನ್ನು ಕೈಯಿಂದ ಹದಬರಿಸುವಿಕೆಯ ಮುಂದುವರಿದ ಹಂತ ಪ್ರಾಣಿಶಕ್ತಿಯನ್ನು ಬಳಸಿಕೊಳ್ಳುವುದು. ಎತ್ತುಗಳನ್ನು ಜೊತೆಮಾಡಿ, ಅವುಗಳ ಹೆಗಲಿಗೆ ನೊಗ ಹೂಡಿ, ಅದಕ್ಕೆ ನೇಗಿಲನ್ನು ಜೋಡಿಸಿ ಉಳುಮೆ ಮಾಡುವುದು. ಮಣ್ಣನ್ನು ಎರಡು ರೀತಿಯಲ್ಲಿ ಹದ ಬರಿಸುತ್ತಾರೆ. ಒಂದು ಹುಡಿಗೆ ಹೂಡುವುದು, ಎರಡನೆಯದ್ದು ನೀರಿಗೆ ಹೂಡುವುದು. ನೀರು ತಂಬಿಸಿ ಯಾ ನೀರಿಲ್ಲದೆ ಹೂಡುವ ಈ ವಿಧಾನಗಳು ಉದ್ದೇಶಕ್ಕೆ ತಕ್ಕಂತಿರುತ್ತವೆ. ಪ್ರಾಣಿಗಳನ್ನು ಪಳಗಿಸುವ ತಂತ್ರಗಾರಿಕೆ ನಮ್ಮವರಿಗೆ ಚೆನ್ನಾಗಿ ತಿಳಿದಿತ್ತು. ಉಳುಮೆಗೆ ವಿಶೇಷ ಕೌಶಲ್ಯ ಬೇಕು. ಉಳುವೆಯಿಂದಲೇ ಕರಗತ ಮಾಡಿಕೊಳ್ಳಬೇಕು. ಎಲ್ಲವೂ ಕೈ, ಕಣ್ಣು, ಮತ್ತು ಕಾಲಿನ ಅಂದಾಜಿನಿಂದಲೇ ನಡೆಯುತ್ತದೆ. ರೇಖಾಗಣಿತದ ನಿಯಮಗಳು ಉಳುಮೆಯಲ್ಲಿವೆ. ನೀರು ನಿಂತ ಗದ್ದೆಯಲ್ಲಿ ಕಾಲಿನ ಸ್ಪರ್ಶದೊಂದಿಗೆ

ನೇಗಿಲನ್ನು ಹಿಡಿಯುತ್ತಾರೆ. ಮಣ್ಣಿನ ಹದ ಬರಿಸುವಿಕೆ ವಿಶಿಷ್ಟ ವಿಜ್ಞಾನ. ಯಾವತ್ತು ಗೊಬ್ಬರ ಹಾಕಬೇಕು. ಬಿತ್ತುವುದಕ್ಕೆ, ನೆಡುವುದಕ್ಕೆ, ಸುಗ್ಗಿಗೆ, ಪಣೆಲಿಗೆ, ಹೇಗೆ ಎಂಬ ಎಲ್ಲಾ ವಿಚಾರಗಳು ಶಾಸ್ತ್ರಬದ್ಧವಾಗಿರಬೇಕು. ಮಣ್ಣಲ್ಲಿ ಬೀಜ ಹಾಕುವಾಗ, ಹಾಕಿ ಸಸಿ ಮೊಳೆಯುವಾಗ ಎಷ್ಟೆಷ್ಟು ನೀರು ನಿಲ್ಲಿಸಬೇಕು. ಯಾವ ಸಂದರ್ಭಗಳಲ್ಲಿ ನೀರು ನಿಂತಿರಬಾರದು ಎಂಬ ಎಲ್ಲಾ ಜ್ಞಾನವೂ ಗೌಡರಲ್ಲಿದೆ. ಹೀಗೆ ಭೂಮಿ ಹಸನಾದಾಗ ಬದುಕು ಹಸನಾಗುತ್ತದೆಂಬುದನ್ನು ಅವರು ಬಲ್ಲವರಾಗಿದ್ದರು. ಇದು ಪರಿಶ್ರಮದ ಬದುಕು. ವಿಲಾಸಿ ಜೀವಿಗಳಾದ ಬ್ರಾಹ್ಮಣ, ಬಸಿಯಾಗಳಿಗೆ ಭೂಮಿ ಉಳುವುದು ನಿಷಿದ್ಧವಾಗಿತ್ತು. ದೇಹ ದಂಡನೆಯ ಕೆಲಸದಲ್ಲಿ ಅವರು ತೊಡಗಿಕೊಳ್ಳುವುದಿಲ್ಲ.

ಭತ್ತದ ಕೃಷಿ ಮಾಡುವುದಕ್ಕಾಗಿ ಗೌಡರು ಸಮತಟ್ಟಾದ ನೆಲವನ್ನು ಆಯ್ದುಕೊಂಡಿದ್ದಾರೆ. ಹಾರೆ, ಪಿಕ್ಕಾಸು ಬಳಸಿ ಗುಡ್ಡಗಳ ಏರು ತಗ್ಗಿನ ಮೇಲ್ಮೈಯನ್ನು ಕಡಿದು ಸಮತಟ್ಟು ಮಾಡುವುದು, ಪುಣಿ ಹಾಕಿ ನೀರು ನಿಲ್ಲಿಸುವುದು, ಮಳೆ ನೀರಿನ ಬಳಕೆ ಮಾಡುವುದು ಇವರಿಗೆ ತಿಳಿದಿತ್ತು.

ಭತ್ತ ಬೇಸಾಯದ ಹೊರತಾಗಿ ಗೌಡರು ತೋಟದ ಮತ್ತು ತೋಟಗಾರಿಕಾ ಬೆಳೆ ಬೆಳೆಸಲು ಗುಡ್ಡಗಳ ಸಂದುಗೊಂದುಗಳಲ್ಲಿ ಸ್ಥಳ ಆಯ್ದುಕೊಂಡರು. ದಟ್ಟ ಕಾಡುಗಳನ್ನು ಸ್ವಚ್ಛಗೊಳಿಸುತ್ತಾ ಬೇಸಾಯ ಆರಂಭಿಸಿದರು.

## ಕಲ್ಲು ಬರೆ, ಕೋಟೆ ಕಟ್ಟುವ ಗೌಡರು

ವಿಪರೀತ ಮಳೆ ಬೀಳುವ ಈ ಪ್ರದೇಶದಲ್ಲಿ ಮಳೆ ನೀರಿಗೆ ಕೊಚ್ಚಿ ಹೋಗುವ ಮಣ್ಣನ್ನು ಹಿಡಿದು ನಿಲ್ಲಿಸಲು ಕಲ್ಲುಬರೆ ಕಟ್ಟುವ ತಂತ್ರವನ್ನು ಗೌಡರು ಕಂಡುಕೊಂಡರು. ಗುಡ್ಡಗಳ ಇಳಿಜಾರಿನಲ್ಲಿ ತೋಟ, ಗದ್ದೆ ಮಾಡಿದಾಗ ಆಳೆತ್ತರ ಕಲ್ಲು ಬರೆ ಕಟ್ಟಿದ್ದಾರೆ. ಮೇಲ್ಪದರದಲ್ಲಿರುವ ಕಲ್ಲುಗಳು, ಹಾಗೆಯೇ ಬಿದ್ದಿರುವ ದುಂಡಿಕಲ್ಲುಗಳನ್ನೇ ಆಯ್ದು ಸಂಗ್ರಹಿಸಿ, ವಿವಿಧ ವಿಧಾನದಲ್ಲಿ ಗೋಡೆ ಕಟ್ಟುತ್ತಾರೆ. ಬಾವಿ, ಕೆರೆ, ಬೇಲಿ ದರೆಗಳಾಗಿ ಕಲ್ಲಿನ ಕಟ್ಟುಗಳನ್ನು ನಿಲ್ಲಿಸುವ ವಿದ್ಯೆ ಉನ್ನತ ತಾಂತ್ರಿಕ ಕೌಶಲ್ಯವನ್ನು ಹೊಂದಿದೆ. ಮನೆ, ಕಟ್ಟಡಗಳ ನಿರ್ಮಾಣ, ಮಣ್ಣಿನ ಗೋಡೆ ನಿರ್ಮಿಸುವುದು, ಅಗಳು ತೆಗೆಯುವುದು, ಗುಡ್ಡೆ ಕಡಿದು ತಟ್ಟು ಮಾಡುವುದು, ಅಲ್ಲಿ ಗದ್ದೆ, ತೋಟ ನಿರ್ಮಿಸುವುದು ಗೌಡರಿಗೆ ಕರಗತವಾಗಿದೆ. ನೂರಾರು ವರ್ಷಗಳ ಹಿಂದೆ ರಚಿಸಲಾಗಿರುವ ಇಂತಹ ರಚನೆಗಳು ಇಂದಿಗೂ ಸುಭದ್ರವಾಗಿದೆ. ಇಂತಹ 'ಸಿವಿಲ್ ಇಂಜಿನಿಯರಿಂಗ್' ತಂತ್ರಜ್ಞಾನವನ್ನು ಓದು ಬಾರದ ನಮ್ಮ ಹಿರಿಯರು ರೂಢಿಗೆ ತಂದಿದ್ದಾರೆ. ಇವರದ್ದು ಕೇವಲ ಚಿಂತನೆಯಲ್ಲ, ಅದರ ಜೊತೆಗೆ ಅನುಷ್ಠಾನ ಕೌಶಲ್ಯವೂ ಇದೆ.

## ನೀರಾವರಿ ತಂತ್ರಜ್ಞಾನ

ಈ ಪ್ರದೇಶದಲ್ಲಿ ಆರೆಂಟು ತಿಂಗಳ ದೀರ್ಘ ಸೆಕೆಗಾಲವಿದೆ. ಮಳೆ ಇಲ್ಲದಾಗ ಬೆಳೆಯಲಾಗುವ ಎಲ್ಲಾ ಸಸ್ಯಗಳಿಗೂ ನೀರಿನ ಅವಶ್ಯಕತೆ ಇರುತ್ತದೆ. ಅದು ಆ ಸಸ್ಯದ ಅವಶ್ಯಕತೆ ಮತ್ತು ಮಣ್ಣಿ

ನಲ್ಲಿರುವ ತೇವಾಂಶವನ್ನು ಆಧರಿಸಿರುತ್ತದೆ. ನೀರು ಮೇಲಿನಿಂದ ಬೀಳದಿದ್ದರೂ, ಬಿದ್ದ ನೀರು ಮಣ್ಣಿನಾಳದಲ್ಲಿರುತ್ತದೆ. ಅಂತಹ ಅಂತರ್ಜಲವನ್ನು ಶೋಧಿಸಿ, ಬಳಸುವುದು ಮತ್ತು ನೆಲದ ಮೇಲ್ಮೈಯಲ್ಲಿ ಹರಿದು ಬರುವ ನೀರನ್ನು ಸೂಕ್ತವಾಗಿ ಬಳಸುವುದೇ ನೀರಾವರಿ ವಿಧಾನ. ಮಳೆಗಾಲದ ಮಿಗತೆ ನೀರನ್ನು ನಿಯಂತ್ರಿಸುವ, 'ಗಝನಿ' ಪ್ರದೇಶದ ಮಿಗತೆ ನೀರನ್ನು ಬಸಿಯುವಂತೆ ಮಾಡುವುದು ಸೂಕ್ತ ತಂತ್ರಜ್ಞಾನವಾಗಿದ್ದು. ಆಯಾಯ ಪ್ರದೇಶದ ಸ್ಥಿತಿಗತಿಗಳಿಗನುಸಾರವಾಗಿ ಗೌಡರು ಸಮರ್ಪಕ ವಿಧಾನಗಳನ್ನು ವ್ಯವಸ್ಥೆಗೊಳಿಸಿದ್ದಾರೆ. ಅಂದರೆ ಉಕ್ಕುವ ನೀರನ್ನು ಇಂಗಿಸುವ, ತಗ್ಗಿನ ನೀರನ್ನು ಮೇಲೆತ್ತುವ ತಂತ್ರಗಾರಿಕೆ ಇವರಿಗೆ ಸಿದ್ಧಿಸಿತ್ತು.

## ನೀರಾವರಿ ಸಾಧನಗಳು

ಪ್ರಾಥಮಿಕವಾಗಿ ಮೂರು ಮುಖ್ಯ ಸಲಕರಣೆಗಳು ಗೌಡರಲ್ಲಿ ಹಿಂದಿನಿಂದಲೂ ಬಳಕೆಗೆ ಬಂದಿವೆ. ಹಾಳೆಕಿಲ್ಲಿ, ಕೈದಿಂಬೆ, ಚೊಂಟೆ ಮುಖ್ಯವಾದುವುಗಳು, ಮರದ ಪಾತ್ರೆಯಲ್ಲಿ ನೀರೆರಚುವುದು. ಅಡಿಕೆ ತೋಟದಲ್ಲಿ ಅಡಿಕೆ ಹಾಳೆಯನ್ನು ತಟ್ಟೆಯಂತೆ ಹೆಣೆದು ಅದರ ಇಕ್ಕೆಲಗಳಲ್ಲಿ ಹಿಡಿದು ನೀರೆರಚುವ ಕ್ರಮ. ಮರದ ದಂಬೆಯನ್ನು ಉದ್ದಕ್ಕೆ ಮಾಡಿ ನಿಂತುಕೊಂಡೆ ನೀರುಣಿಸುವುದೂ ನಂತರ ಬೆಳೆದುಬಂತು. ಜೊತೆಗೆ ಬೈನೆ ಮರದ ಹಾಳೆಯನ್ನೂ ಸಮರ್ಪಕವಾಗಿ ಬಳಸುವುದನ್ನು ರೂಢಿಗೆ ತಂದರು.

ಚೊಂಟೆ ಅಥವಾ ಏತ ಹಳೆಯ ನೀರೆತ್ತುವ ವಿಧಾನ. ಮರದ ಪಾತ್ರೆ (ಮರಾಯಿ, ಮರ್ಗಿಲು) ಯನ್ನು ಉದ್ದವಾದ ಬಿದಿರಿಗೆ ನೇತು ಹಾಕಿ, ಅಡ್ಡ ದಂಡೆಯೊಂದರಲ್ಲಿ ಮತ್ತೆ ತೂಗು ಹಾಕಿ, ಕಂಬಗಳ ಮೇಲೆ ಅನುಕೂಲವಾಗಿ ಜೋಡಿಸಿ, ದಂಡಿನ ಇನ್ನೊಂದು ತುದಿಗೆ ಹೊಂದುವ ಭಾರದ ಕಲ್ಲನ್ನಿರಿಸಿ ಆಳದಿಂದ ನೀರೆತ್ತುವುದನ್ನು 'ಚೊಂಟೆ' ಎಂದು ಗುರುತಿಸಲಾಗುತ್ತದೆ. ಇಂದು ಅವುಗಳನ್ನು ಚಿತ್ರಗಳಲ್ಲಿ ಮಾತ್ರ ಗುರುತಿಸುವುದು ಸಾಧ್ಯ. ಹೀಗೆ ಕಣ್ಮರೆಯಾಗಿರುವ ನೀರೆತ್ತುವ ಸಾಧನ ಹಿಂದೆ ಗೌಡರ ಬಹುದೊಡ್ಡ ಶಕ್ತಿಯಾಗಿತ್ತು. ಈ ಮೂಲಕ ಸುಮಾರು ೧೫ ಅಡಿ ಆಳದಿಂದ ನೀರೆತ್ತಲಾಗುತ್ತಿತ್ತು.

ಲ್ಯಾಟರೈಟ್ ಅಥವಾ ಮುರ ಮಣ್ಣಿನ ವಲಯದಲ್ಲಿ ಗೌಡರು ಕೃಷಿ ನಡೆಸುತ್ತಿರುವ ಕಾರಣ ನೀರಾವರಿ ವ್ಯವಸ್ಥೆ ಅವರಿಗೆ ಸವಾಲಾಗಿತ್ತು. ಲ್ಯಾಟರೈಟ್‌ಗೆ ನೀರನ್ನು ಹಿಡಿದಿಡುವ ಸಾಮರ್ಥ್ಯವಿಲ್ಲದಿರುವ ಕಾರಣ ದೀರ್ಘ ಬೇಸಗೆಯಲ್ಲಿ ನಿರಂತರ ನೀರುಣಿಸಬೇಕಾಗುತ್ತದೆ. ಅಂತರ್‌ಜಲ ಮೇಲ್ಮಟ್ಟದಲ್ಲಿರುವ ಕೆರೆ, ಕಾಲುವೆ, ಚೊಂಟೆಗಳಿಂದ ನೀರಾವರಿ ಮಾಡುವುದು ಸೂಕ್ತವಾಗಿ ಬೆಳೆದು ಬಂದಿದೆ.

## ಕೆರೆ ನಿರ್ಮಾಣ

ಒರತೆ ನೀರನ್ನು ಸಂಗ್ರಹಿಸುವ ವಿಧಾನ ಕೆರೆ ನಿರ್ಮಾಣಕ್ಕೆ ಮೂಲ. ಅಂತರ್ಜಲವು ಸಂಗ್ರಹಣೆ

ಯಾಗುವ ಈ ವಿಧಾನವನ್ನು ತಮ್ಮ ಅನುಕೂಲಕ್ಕಾಗಿ ಬಳಸಿಕೊಳ್ಳುವ ಕ್ರಮವನ್ನು ಗೌಡರು ರೂಪಿಸುವುದರಲ್ಲಿ ನಿಷ್ಣಾತರು. ಕಾಡಿನ ನಡುವಿನಿಂದ ಬಿದಿರು ದಂಬೆ, ಅಡಿಕೆ ದಂಬೆಗಳನ್ನು ಬಳಸಿ ಹರಿಸಿ ತಂದು ಸಂಗ್ರಹಿಸಿ ಕೃಷಿ ಮಾಡುತ್ತಾರೆ. ಇದೀಗ ಪೈಪುಗಳು ಈ ಕೆಲಸ ನಿರ್ವಹಿಸುತ್ತಿವೆ. ಆಳವಾಗಿ ಮಣ್ಣು ಅಗೆದು, ಕಲ್ಲು ಕಟ್ಟಿ ಕೆರೆ ನಿರ್ಮಾಣ ಮಾಡುತ್ತಾರೆ. ಅಂತರ್ಜಲ ಹುಡುಕುವ ಕಲೆಯೂ ಇವರಿಗೆ ತಿಳಿದಿತ್ತು.

ಸುರಂಗ ತೊಡುವ ಮೂಲಕ ಅಂತರ್ಜಲವನ್ನು ಹರಿದುಬರುವಂತೆ ಮಾಡುವುದು ಇವರಿಗೆ ತಿಳಿದಿತ್ತು. ಇದು ಬಹಳ ಹಳೆಯ ವಿಧಾನ. ಮಣ್ಣಿನ ಕೆಲಸದ ಕೌಶಲ್ಯ ತಿಳಿದಿದ್ದ ಗೌಡರು ಆಳಕ್ಕೆ ತೋಡಿ ಬಾವಿ ನಿರ್ಮಿಸಿದರೆ, ಅದನ್ನೇ ಉದ್ದಕ್ಕೆ ಕಡಿದು ಸುರಂಗ ರಚಿಸುತ್ತಾರೆ. ಈ ಮೂಲಕ ನೀರೆತ್ತುವ ಕ್ರಮದ ಉಳಿಕೆಯಾಗುತ್ತದೆ. ಬಾವಿ ತೋಡಿದ ಬಳಿಕ ಸುತ್ತಲಿನ ಮಣ್ಣು ಕುಸಿಯದಂತೆ ಕಲ್ಲು ಕಟ್ಟುತ್ತಾರೆ. ತಳದಲ್ಲಿ ಅಡಿಪಾಯ ತೆಗೆದು ಮರದ ಚೌಕವನ್ನು ಇರಿಸುತ್ತಾರೆ. ಈ ಚೌಕದ ಮೇಲೆ ಕಲ್ಲು ಕಟ್ಟಲಾಗುತ್ತದೆ. ಸಾಮಾನ್ಯವಾಗಿ ಪುಣೆಲ್, ನಾಣೆಲ್, ನೆಲ್ಲಿ ಮೊದಲಾದ ಮರಗಳನ್ನೇ ಬಳಸುತ್ತಾರೆ. ಯಾಕೆಂದರೆ ನೀರಲ್ಲೇ ಇರಬೇಕಾದ ಈ ಮರಗಳು ದುರ್ಬಲವಾಗುವುದಿಲ್ಲ.

**ಅಡ್ಡ ಹರಿವು:** ನೀರಾವರಿಗಾಗಿ ನೀರನ್ನು ಅಡ್ಡ ಹರಿಸುವುದು ಬಹಳ ಸರಳ ಹಾಗೂ ಅತ್ಯಂತ ಪುರಾತನ ತಂತ್ರಜ್ಞಾನ. ಬಂಟಮಲೆ, ಪೂಮಲೆ, ಸಂಪಾಜೆ, ಮುಂತಾದ ಇಳಿಜಾರು ಪ್ರದೇಶಗಳಲ್ಲಿ ಹರಿದು ಬರುವ ತೊರೆಗಳನ್ನು ಅಡ್ಡವಾಗಿ ತಿರುಗಿಸುವ ವಿಧಾನ. ಇದನ್ನು 'ಡೈವರ್ಶನಲ್ ಕೆನಾಲ್' ಎಂದು ಕರೆಯುತ್ತಾರೆ. ಹಿಮಾಲಯದ ತಪ್ಪಲಲ್ಲೂ ಇಂತಹ ವಿಧಾನಗಳಿವೆ. ಆದರೆ ಮಲೆನಾಡ ಗೌಡರೂ ಅನಾದಿಕಾಲದಿಂದಲೂ ಈ ವಿಧಾನವನ್ನು ಅನುಸರಿಸುತ್ತಿದ್ದಾರೆ. ನೀರು ಕಡಿಮೆ ಆದಾಗ ತೋಡಿಗೆ ಕಟ್ಟ ಹಾಕುತ್ತಾರೆ.

**ಕಟ್ಟ:** ಮಣ್ಣಿನ ಕಟ್ಟಗಳನ್ನು ತಾತ್ಕಾಲಿಕವಾಗಿ ನಿರ್ಮಿಸಿ, ನದಿಯ ಪಾತ್ರೆಯಲ್ಲಿ ನೀರು ಸಂಗ್ರಹವಾಗುವಂತೆ ಮಾಡುವುದು. ತೋಡುಗಳ ಇಕ್ಕೆಲಗಳಲ್ಲೂ ಸಮತಟ್ಟಾದ ಬೈಲುಗಳಿರುತ್ತವೆ. ಇಲ್ಲಿಯ ಬೇಸಾಯಕ್ಕೆ ನೀರುಣಿಸಲು ಗೌಡರು ಈ ವಿಧಾನವನ್ನು ರೂಢಿಸಿಕೊಂಡರು. ಈ ಜಲಾಶಯವು ಅಂತರ್ಜಲವನ್ನು ವೃದ್ಧಿಸುವುದಲ್ಲದೇ, ಹೊಳೆಯ ನೀರನ್ನು ಹೊಲಗಳಿಗೆ ಹರಿಯ ಬಿಡುತ್ತವೆ.

ಕಟ್ಟದ ತಾಂತ್ರಿಕ ವಿಚಾರಗಳು ವಿಶಿಷ್ಟವಾದದ್ದು. ಕಾವೇರಿ ನದಿಗೆ ಚೋಳರಸರು ಕಟ್ಟ ಹಾಕಿ ಒಂದು ಸಾವಿರ ವರ್ಷವಾಗಿದೆ. ಕಟ್ಟವನ್ನು ಬರೇ ಮಣ್ಣಿನಿಂದ ರಚಿಸಬಹುದು. ಕಲ್ಲಿನ ಗೋಡೆ ಕಟ್ಟಿ ಮೇಲ್ಭಾಗದಿಂದ ಮಣ್ಣು ತುಂಬಲಾಗುತ್ತದೆ. ಅಡ್ಡ ದಂಡೆ ಹಾಕಲು ಮರ ಬಳಸುವುದು ಉಂಟು. ಒಳಬದಿಯಿಂದ ಅಡಿಕೆ ಮರದ ಸಲಾಕೆಗಳನ್ನು ನಿಲ್ಲಿಸಿ, ಸೊಪ್ಪು ಹೊದಿಸಿ ಅದರ ಮೇಲೆ ಮಣ್ಣು ನಿಲ್ಲಿಸುತ್ತಾರೆ. ಇದೆಲ್ಲವೂ ನೀರು ಸೋಸಿ ಹೋಗದಂತೆ ಸಹಕರಿಸುತ್ತದೆ. ಕಟ್ಟಕ್ಕೆ ಬೇಕಾಗುವ ಎಲ್ಲಾ ಕಚ್ಚಾಸಾಮಾಗ್ರಿಗಳೂ ಆಸುಪಾಸಿನಲ್ಲೇ ದೊರೆಯುತ್ತವೆ. ಆದ ಕಾರಣ ಮಾನವ ಶ್ರಮದ ಹೊರತು ಖರ್ಚು ಕಡಿಮೆಯಾಗಿರುತ್ತದೆ. ವಿಶ್ವೇಶ್ವರಯ್ಯ ನಿರ್ಮಿಸಿದ್ದ ಕನ್ನಂಬಾಡಿ ಅಣೆಕಟ್ಟೆಗೆ

ಒಕ್ಕಲಿಗರ ಮಣ್ಣಿನ ಕಟ್ಟುಗಳೇ ಪ್ರೇರಣೆ ನೀಡದ್ದುವೆಂದರೂ ಆಶ್ಚರ್ಯವಿಲ್ಲ.

## ಕೃಷಿ ಬದುಕಿನ ಮನೋಲ್ಲಾಸಗಳು

ಕಂಬಳ, ಗದ್ದೆ ಗೋರಿ, ಕೆಸರು ಗದ್ದೆ ಓಟ ಬೇಸಾಯಗಾರ ಗೌಡರ ಕ್ರೀಡೆಗಳಾಗಿದ್ದುವು. ಕೋಣಗಳ ಓಟ, ನಿರಂತರ ಕ್ರಿಯೆ. ಕೆಸರು ತುಂಬಿದ ಗದ್ದೆಗಳಲ್ಲಿ ಓಡುವ ಜಾಣ್ಮೆ ಬೆಳೆಸಿಕೊಳ್ಳುವುದು ಅನಿವಾರ್ಯ. ಸಹಜವಾಗಿ ಕೃಷಿ ಬದುಕಿನಿಂದಲೇ ಮೂಡಿಬಂದ ಕ್ರೀಡೆಗಳಾಗಿವೆ. ಇಂದಿನಂತೆ ಯಾವ ಆಟಗಳೂ ನಿಜ ಬದುಕಿನಿಂದ ಪ್ರತ್ಯೇಕವಾಗಿರಲಿಲ್ಲ. ಬದುಕೇ ಒಂದು ಆಟ. ಯಾವ ಆಟಗಳಿಗೂ ಗೌಡರು ಪ್ರತ್ಯೇಕ ತರಬೇತು ವ್ಯವಸ್ಥೆ ಇರಗೊಳಿಸಿಲ್ಲ. ಆಟಗಳು ನೈಜ ಬದುಕಿನೊಂದಿಗೆ ಬೆಸೆದಿದ್ದವು.

ಆಟಗಳ ಪರೋಕ್ಷ ಹಾಗೂ ಪ್ರತ್ಯಕ್ಷ ಪ್ರಯೋಜನಗಳನ್ನು ರೈತರು ಸಾಮುದಾಯಿಕವಾಗಿ ಗಳಿಸಿಕೊಳ್ಳುತ್ತಿದ್ದರು. ಗದ್ದೆಗಳಲ್ಲಿ ಊರ ಜನರೆಲ್ಲಾ ಕಲೆತು ಸಂಭ್ರಮಿಸುತ್ತಾರೆ. ಇಂತಹ ಕೂಟಗಳಲ್ಲಿ ಬೇಂಡು, ವಾಲಗ, ಕೊಂಬು, ಕಹಳೆಗಳನ್ನು ಬಳಸುತ್ತಿದ್ದರು. ಮೇಲ್ಜಾತಿಯ ಬ್ರಾಹ್ಮಣರಿಗೆ ಇಲ್ಲಿ ಭಾಗವಹಿಸುವಿಕೆಯೇ ಇಲ್ಲ. ಆಧುನಿಕ ಆಟಗಳಲ್ಲಿ ಹೆಚ್ಚಾಗಿ ಅವರೇ ಕಂಡುಬರುತ್ತಾರೆ. ಸಿದ್ದವೇಷ ಗೌಡರ ಪ್ರಮುಖ ಜನಪದ ಕುಣಿತ. ಸುಗ್ಗಿಯ ಕಾಲದಲ್ಲಿ ಮನೆ ಮನೆ ಮುಂದೆ ಹಾಡಿ, ಕುಣಿದು, ಸಂಭ್ರಮಿಸುತ್ತಾರೆ. ಪುರುಷರ ವೇಷವೆಂತಲೂ ಗುರುತಿಸಲಾಗಿರುವ ಈ ಕುಣಿತಕ್ಕೆ ಸಾಂಸ್ಕೃತಿಕ ಸಾಮಾಜಿಕ ಮಹತ್ವವಿರುವುದಾಗಿ ಅಧ್ಯಯನಗಳು ಸೂಚಿಸುತ್ತವೆ. ಗೌಡರ ಆಂತರಿಕ ತುಮುಲಗಳು, ಸೈದ್ಧಾಂತಿಕ ಸಂಘರ್ಷಗಳನ್ನು ಅಭಿವ್ಯಕ್ತಗೊಳಿಸಿ, ಪುರೋಹಿತಶಾಹಿಯ ವಿರುದ್ಧ ಸಾಂಸ್ಕೃತಿಕವಾಗಿ ಹೂಡಿದ್ದ ಹೋರಾಟವೆಂಬ ಅಭಿಪ್ರಾಯವಿದೆ. ಅದೇನಿದ್ದರೂ ಗೌಡರು ಕೃಷಿಪ್ರಧಾನ ವ್ಯವಸ್ಥೆಯಲ್ಲಿ ಪ್ರಮುಖ ಶ್ರಮಜೀವಿ ವಲಯವಾಗಿ, ಕೃಷಿ ತಜ್ಞರಾಗಿ, ಪ್ರಯೋಗಶೀಲರಾಗಿ ಕಾಣಿಸಿಕೊಂಡಿದ್ದಾರೆ.

## ಗೌಡರ ಕೃಷಿ ಪರಿಸರ ಸಂವರ್ಧಕ

ಹಸಿರು ಸೊಪ್ಪು ಕೃಷಿಯಲ್ಲಿ ಹೇರಳವಾಗಿ ಬಳಕೆಯಾಗುತ್ತದೆ. ನಿತ್ಯದ-ಕೆಲಸದಲ್ಲಿ ಬೆಳಿಗ್ಗೆ ಸೊಪ್ಪು ಸಂಗ್ರಹಣೆ. ನಂತರ ಊಟ, ಆಮೇಲೆ ಸೌದೆ ತರುವುದು. ಇದು ರೂಢಿ. ಇದೀಗ ಎಲ್ಲವೂ ಬದಲಾಗಿದೆ. ಅಡಿ ಸೊಪ್ಪು ಹೆರೆಯಲು ಹರಿತವಾದ ಕತ್ತಿ ಬಳಸುತ್ತಾರೆ. ಅದನ್ನು ಕಲ್ಲಿನ ಪುಡಿಯೊಂದಿಗೆ ಮಸೆದು ಹಂತಗೊಳಿಸಿರುತ್ತಾರೆ. ತಾವೇ ಬೆಳೆಸಿಕೊಂಡ ಸರಳ ಯಂತ್ರಗಾರಿಕೆ ಇದು. ಹರಿತ ಕತ್ತಿ ಗಿಡಕ್ಕೆ ತೊಂದರೆ ಕೊಡುವುದಿಲ್ಲ. ಗೌಡರು ಎಷ್ಟು ಸೊಪ್ಪು ಕಡಿದರೂ ಮತ್ತೆ ಚಿಗುರಿ ವೃದ್ಧಿಸುತ್ತದೆ. ಎಲ್ಲದಕ್ಕೂ ಹೊತ್ತು ಗೊತ್ತು ಗೌಡರಿಗೆ ತಿಳಿದಿತ್ತು.

ಮರವೇರಿ ಅದರ ಗೆಲ್ಲು ಕಡಿದರೂ, ತುದಿಯ ನಾಲ್ಕಾರು ಗೆಲ್ಲುಗಳನ್ನು ಹಾಗೆಯೇ ಉಳಿಸುತ್ತಾರೆ. ಗೌಡರಿಗೆ ಸಸ್ಯ ವಿಜ್ಞಾನ ತಿಳಿದಿತ್ತೆನ್ನುವುದಕ್ಕೆ ಬೇರೆ ನಿದರ್ಶನ ಬೇಕಾಗಿಲ್ಲ. ಹೊತ್ತೇರುವ ಮೊದಲೇ ಮರ ಹತ್ತುವ ವಾಡಿಕೆ. ಏಕೆಂದರೆ ಮರ ಒಣಗಿದರೆ ಕಾಲು ಹಿಡಿಯುವುದಿಲ್ಲ. ಜಾರುವ ಅಪಾಯ

ಜಾಸ್ತಿ. ಇಂತಹ ನೂರಾರು ತಂತ್ರಶೀಲತೆ ಅನುಭವದಿಂದಲೇ ರೂಢಿಸಿಕೊಂಡಿದ್ದಾರೆ. ಗೌಡರ ಪ್ರತಿಯೊಂದು ನಂಬಿಕೆಗಳಲ್ಲೂ ವೈಜ್ಞಾನಿಕ ಚಿಂತನೆ ಇತ್ತು. ಗೌಡರ ಪರಂಪರಾಗತ ಕೃಷಿ ವಿಧಾನವು ಪರಿಸರ ಸಂವರ್ಧನೆಗೆ ಪೂರಕವಾಗಿತ್ತು.

## ಪಶುಪಾಲನೆ

ವನ್ಯಜೀವಿಗಳ ಬೇಟೆ ಗೌಡರಲ್ಲಿ ಜನಜನಿತವಾಗಿತ್ತು. ಒಂದನೆಯದಾಗಿ ಅದರಿಂದ ಬೆಳೆ ಹಾನಿ ನಿಯಂತ್ರಣವಾಗುತ್ತಿತ್ತು. ಎರಡನೆಯದಾಗಿ ಆಹಾರಕ್ಕಾಗಿ ಬೇಟೆಯಾಡುತ್ತಿದ್ದರು. ಆದರೂ ಪ್ರಾಣಿಗಳು ಮರಿ ಇಡುವ ಕಾಲ, ಮೊಟ್ಟೆ ಇಡುವ ಕಾಲಗಳಲ್ಲಿ ಬೇಟೆ ನಿಷಿದ್ಧವಾಗಿತ್ತು. ವನ್ಯ ಜೀವಿಗಳ ಸಂತಾನೋತ್ಪತ್ತಿಯನ್ನು ಗೌಡರು ಪರೋಕ್ಷವಾಗಿ ಪ್ರೋತ್ಸಾಹಿಸುತ್ತಿದ್ದರು.

ವನ್ಯ ಜೀವಿಗಳನ್ನು ನಾಡಿಗೆ ತಂದು ಪಾಲನೆ ಮಾಡುವ ಕಲೆ ಗೌಡರಿಗೆ ತಿಳಿದಿತ್ತು. ಸಾಕುಪ್ರಾಣಿಗಳನ್ನು ಎಂದೋ ಊರಿಗೆ ತಂದವರ ಪಾರಂಪರೆಯ ಈ ಜನವರ್ಗ, ದನ ಸಾಕುವುದು, ಕೋಳಿ ಸಾಕುವುದು, ಅವುಗಳನ್ನು ಮೊಟ್ಟೆ ಇರಿಸುವಂತೆ ಗೂಡು ಮಾಡಿ, ಮರಿ ಮಾಡಿ, ಕಾಲಕಾಲಕ್ಕೆ ಅವುಗಳಿಗೆ ಅವಶ್ಯಕ ಆರೈಕೆ, ಸಿದ್ಧತೆ ಮಾಡುವ ಮುಂಜಾಗ್ರತೆ ವಹಿಸುತ್ತಾರೆ. ಈ ಎಲ್ಲಾ ಕ್ರಮಗಳನ್ನು ತಿಳಿದವರಾಗಿದ್ದರು. ಹಸು ಕರುಹಾಕಿದ ಬಳಿಕ ಹೇಗೆ ಆರೈಕೆ ಮಾಡಬೇಕೆಂಬುದು ಇವರಿಗೆ ತಿಳಿದಿತ್ತು. ಇಂದು ಇಂತಹ ಕ್ರಮಗಳು ಜನರ ಜ್ಞಾನದಿಂದ ಮರೆಯಾಗುತ್ತಿವೆ. ಆಧುನಿಕ ಓದು, ಬದುಕು ಗೌಡರನ್ನು ಭಿನ್ನವಾಗಿ ರೂಪಿಸುತ್ತಿದೆ.

## ಬೆಳೆಗಳ ವಿಧಾನ

ರಾಗಿ, ಭತ್ತ, ಜೋಳ, ಸವಣೆ ಮೊದಲಾದ ಆಹಾರ ಪದಾರ್ಥಗಳನ್ನು ತಮಗಾಗಿಯೇ ಬೆಳೆಸುತ್ತಿದ್ದರು. ಕ್ರಮೇಣ ವಾಣಿಜ್ಯೀಕರಣಗೊಂಡಿರುವುದು ವಾಸ್ತವ. ಗೇರು, ಕರಿಮೆಣಸು, ಕೋಕೋ, ತೆಂಗು, ಬಾಳೆ, ರಬ್ಬರ್ ಇತ್ತೀಚೆಗೆ ತೀವ್ರವಾಗಿ ಆಕ್ರಮಿಸಿಕೊಂಡಿದೆ. ಸೊಪ್ಪು, ತರಕಾರಿ ಗೌಡರ ಪ್ರಮುಖ ಬೆಳೆಗಳು. ಹಿಂದೆ ಏಣೆಲು, ಸುಗ್ಗಿ, ಕೊಳಕೆ ಎಂಬ ಮೂರು ಬೆಳೆ ಬೆಳೆಯುವ ಉತ್ಕೃಷ್ಟ ಗದ್ದೆಗಳಿದ್ದವು. ಎರಡು ಬೆಳೆ ಸಾಮಾನ್ಯವಾಗಿತ್ತು. ಮಜಲು ಗದ್ದೆ, ಅಥವಾ ಬಾನಬೆಟ್ಟಿನ ಗದ್ದೆಗಳು ಮಳೆ ನೀರಿನಿಂದ ಮಾತ್ರ ಬೆಳೆಯುವಂತಹವುಗಳು.

# ಭಾಗ - ೨

## ಬದಲಾದ ಕೃಷಿ ಜಗತ್ತಿನಲ್ಲಿ ಗೌಡರ ಸ್ಥಿತಿಗತಿಗಳ ಅವಲೋಕನ

ಕೃಷಿ ಎಂದರೆ ವ್ಯವಸ್ಥಿತ ಆಹಾರ ಉತ್ಪಾದನಾ ವಿಧಾನ. ಇದನ್ನೇ 'ಬೇಸಾಯ', ವ್ಯವಸಾಯ ಮೊದಲಾದ ಪದಗಳಿಂದ ಗುರುತಿಸಲಾಗುತ್ತಿದೆ. ಮೂಲತಃ ಸಸ್ಯಗಳನ್ನು ನೆಟ್ಟು, ಸಾಕಿ ಸಲಹುವ ಕೆಲಸ. ಬೀಜ ಬಿತ್ತಿ, ಮೊಳಕೆ ಬರಿಸಿ, ಸಸಿ ಮಾಡಿ, ತಾವೇ ನೆಟ್ಟು, ಅದಕ್ಕೆ ನೀರು, ಗೊಬ್ಬರ ಕೊಟ್ಟು ಬೆಳೆಸುವ ಪ್ರಕ್ರಿಯೆ ವ್ಯವಸಾಯ ಎನಿಸಿಕೊಂಡಿದೆ. ಅಂದರೆ ಅವುಗಳು ಸ್ವತಂತ್ರವಾಗಿ, ತಮ್ಮಿಚ್ಛೆಗೆ ತಾವೇ ಹುಟ್ಟಿ ಬೆಳೆಯುವಿಕೆಯಲ್ಲ. ಸಸ್ಯಗಳು ಮಾನವ ಪ್ರಯತ್ನದಿಂದಲೇ ಬೆಳೆದುಕೊಂಡು ಬರುವಿಕೆ ಮಾತ್ರ ಬೇಸಾಯವೆನಿಸುತ್ತದೆ. ಇಂಗ್ಲಿಷಿನಲ್ಲಿ ಕೃಷಿಗೆ ಬಳಸಲಾಗುತ್ತಿರುವ ಪದ, 'ಅಗ್ರಿಕಲ್ಚರ್' ಎಂಬುದು 'ಅಗ್ರಿ' ಮತ್ತು 'ಕಲ್ಚರ್' ಎಂಬ ಎರಡು ಪದಗಳ ಜೋಡಣೆಯಾಗಿದೆ 'ಕಲ್ಚರ್' ಅಂದರೆ ಸಾಮಾನ್ಯ 'ಸಂಸ್ಕೃತಿ' ಪದಕ್ಕೆ ಇಂಗ್ಲಿಷ್‌ನಲ್ಲಿ ಬಳಸಲಾಗುವ ಪದ. ಅಂದರೆ ಗಿಡಗಳನ್ನು 'ಸಂಸ್ಕೃತೀಕರಿಸುವಿಕೆ' ಎಂಬ ಅರ್ಥವನ್ನೇ ಹೊಂದಿರುತ್ತದೆ. ಸಾಂಸ್ಕೃತೀಕರಣವು 'ಅಭಿವೃದ್ಧಿ ಪಡಿಸುವಿಕೆ' ಸುಧಾರಣೆಗೊಳಿಸುವಿಕೆ, ಉದ್ದೇಶಿತವಾಗಿ ರೂಪುಗೊಳಿಸುವಿಕೆ ಮುಂತಾದ ಪ್ರಕ್ರಿಯೆಯನ್ನು ಹೊಂದಿರುತ್ತದೆ. ಬೇಸಾಯದ ಅಂತಿಮ ಉದ್ದೇಶ ಮನುಷ್ಯನ ಇರುವಿಕೆಗೆ ಬೇಕಾದ ಆಹಾರ ಉತ್ಪಾದನೆಯೇ ಆಗಿದೆ. ಉಳಿದವೆಲ್ಲವೂ ಅದಕ್ಕೆ ಪೂರಕ ಅಂಶಗಳು.

ಇತಿಹಾಸದಲ್ಲಿ ಕೃಷಿ ಆರಂಭವಾಗಿರುವುದು ಅಂದರೆ ಮಾನವ ಆಹಾರ ಸಂಗ್ರಹಣಾ ಹಂತದಿಂದ ಆಹಾರ ಉತ್ಪಾದನಾ ಹಂತಕ್ಕೆ ತಿರುಗಿದಾಗ ಎಂಬುದಾಗಿ ಕೃಷಿ ವಿಜ್ಞಾನದ ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ. ಇದು ಮಾನವ ಇತಿಹಾಸದ ಆರಂಭದ ದಿನಗಳಲ್ಲಿ, ಅದನ್ನೇ 'ಸೆಟಲ್ಡ್ ಅಗ್ರಿಕಲ್ಚರ್' 'ನೆಲೆ ನಿಂತ ಬೇಸಾಯ' ಎಂಬುದಾಗಿ ಗುರುತಿಸಲಾಗುತ್ತದೆ. ಆಹಾರ ಸಂಗ್ರಾಹಕ ಮಾನವ ಒಂದೇ ಕಡೆ ನೆಲೆ ನಿಂತಿದ್ದಿರಲಿಲ್ಲ. 'ಊರು' ಎಂಬುದೇ ಇರಲಿಲ್ಲ! ಪ್ರದೇಶದಿಂದ ಪ್ರದೇಶಕ್ಕೆ ಅಲೆದಾಡುತ್ತಿದ್ದ. ಇದೆಲ್ಲಾ ಕಾಲ, ದೇಶ, ಪ್ರದೇಶಗಳಲ್ಲಿ ವಿಭಿನ್ನವಾಗಿ ಕಾಣಿಸಿಕೊಂಡಿದೆ ಎಂಬುದನ್ನು ನಮ್ಮ ಅಧ್ಯಯನಗಳು ಸ್ಪಷ್ಟಪಡಿಸುತ್ತವೆ. ಕೃಷಿ ಇತಿಹಾಸದ ಮಟ್ಟಿಗೆ ಇದೊಂದು ಪ್ರಮುಖ ಘಟ್ಟ. ಮಾನವಕುಲದ ಇತಿಹಾಸದಲ್ಲಿ ತೀವ್ರ ತಿರುವು, ಚಲನಶೀಲತೆ ಕಾಣಿಸಿಕೊಂಡಿತು. ಇದೊಂದು ಬಹುದೊಡ್ಡ ನೆಗೆತ. ಇಲ್ಲಿಂದ ಸಮಾಜ ವೇಗನಾಗಿ ಮುನ್ನಡೆದು ಬಂದಿರುವುದು ಇತಿಹಾಸದಲ್ಲಿ ಸ್ಪಷ್ಟವಾಗಿದೆ. ಕೃಷಿ ತಂತ್ರಜ್ಞಾನದಲ್ಲಿ ಆವಿಷ್ಕಾರವಾದವು. ಹೊಸ ಹೊಸ ಸಾಧನ ಸಲಕರಣೆ ರೂಢಿಗೆ ಬಂದವು. ಹೊಸ ಸಾಮಾಜಿಕ ವಲಯಗಳ ರೂಪುಗೊಂಡವು. ಇಲ್ಲಲ್ಲೋ ಇಂದು ಕಾಣುವ ಒಕ್ಕಲಿಗ ಸಮುದಾಯದ ಹುಟ್ಟೂ, ಆಗಿರಬೇಕೆನ್ನುವುದು ವ್ಯಕ್ತವಾಗುತ್ತದೆ. ಕಾಡಿನ ಸಸಿಯನ್ನು ಮಾನವ ಸಮುದಾಯದ ಹುಟ್ಟೂ, ಆಗಿರಬೇಕೆನ್ನುವುದು ವ್ಯಕ್ತವಾಗುತ್ತದೆ. ಕಾಡಿನ ಸಸಿಯನ್ನು ಮಾನವ ತಾನಿದ್ದಲ್ಲೇ ಊರಿ 'ಊರು' ಮಾಡಿದ್ದು, ರೈತ ಸಮುದಾಯವೇ ಊರುವುದಕ್ಕಾಗಿ ಮಣ್ಣು ಅಗೆದದ್ದು, ಬಾಡಿದಾಗ ನೀರು ಚಿಮುಕಿಸಿ ಶುಶ್ರೂಷೆ ನಡೆಸಿ, ಫಲಬಂದಾಗ ಕೊಯ್ದು ಕುಪ್ಪಳಿಸಿ ಹಾಡಿದ್ದು ಎಲ್ಲವೂ

ಈ ರೈತರಿಂದಲೇ. ಬೆಳೆ ಬಂದಾಗ ಊರಿಗೆ ಬರುವ ದೃಢಕಾಯರೇ ದೊರೆಗಳಾದದ್ದೂ ಈ ಹಂತದಲ್ಲೇ ಎಂಬುದನ್ನು ನಮ್ಮ ಇತಿಹಾಸಕಾರರು ಹೇಳುತ್ತಾರೆ. ರೈತ ದೇಶಕ್ಕಾಗಿ ಅನ್ನ ಬೆಳೆವ ಸಂತತಿಯವ. ರೈತ ಎಂದೂ ತಿರುಗಿ ತಿನ್ನುವವನಲ್ಲ, ಕಾಡಿನಿಂದ ಸಂಗ್ರಹಿಸಿ ತರುವವನಲ್ಲ. ರೈತ ಸ್ವತಃ ಉತ್ತು ಬಿತ್ತಿ ಬೆಳೆಯುವವ, ತನಗಾಗಿ ಮತ್ತು ಸಮಾಜಕ್ಕಾಗಿ ಉತ್ಪಾದಿಸುವವ. ರೈತ ಸ್ವಾಭಿಮಾನಿ. ಯಾಕೆಂದರೆ ಆತ ಬದುಕುತ್ತಿರುವುದು ಪರೋಪಕಾರಿ ಮತ್ತು ಸ್ವಾಭಿಮಾನಿ ಸಸ್ಯಗಳೊಂದಿಗೆ. ಈ ಹಿನ್ನಲೆಯಲ್ಲಿ ಒಕ್ಕಲಿಗ ಒಂದು ಸಮುದಾಯವಾಗಿ, ರೈತಾಪಿ ಜನರಾಗಿ, ಕೃಷಿಯನ್ನು ಕುಲ ಕಸುಬನ್ನಾಗಿಸಿಕೊಂಡು ಬಾಳಿ ಬಂದಿದ್ದಾರೆಂಬುದನ್ನು ಅವಲೋಕಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ಗೌಡರೆಂದರೆ ಕೃಷಿಕರು

ಭಾರತದಲ್ಲಿ ಕೃಷಿ ವಿಕಾಸ ಮತ್ತು ಸಾಮಾಜಿಕ ವಿಕಾಸ, ಬೆಳವಣಿಗೆಗಳ ಒಟ್ಟು ಹಿನ್ನಲೆಯಲ್ಲಿ ಭಾರತೀಯ ರೈತ ಸಮುದಾಯ ಅದರಲ್ಲೂ ಕರ್ನಾಟಕ ಪ್ರದೇಶದ ರೈತ ಜಾತಿ ಸಮುದಾಯವನ್ನು ಒಟ್ಟಾಗಿ ಅವಲೋಕಿಸಿದಾಗ ಒಕ್ಕಲಿಗರು ಎಷ್ಟರ ಮಟ್ಟಿಗೆ ಕೃಷಿ ಕಸುಬಿಗೆ ಹೊಂದಿಕೊಂಡವರೆಂಬುದು ವ್ಯಕ್ತವಾಗಬಲ್ಲುದು. ಭಾರತೀಯ ಜಾತಿಸಮಾಜವು ಸಂಕೀರ್ಣವಾದದ್ದು. ಹಿಂದುಳಿದ ಜಾತಿ ಪಂಗಡಗಳು ಪ್ರಮುಖ ರೈತ ವಲಯವನ್ನು ರೂಪಿಸಿರುವುದಾದರೂ ಈ ವರ್ಗದಲ್ಲೇ ಸುಮಾರು ೩೭೦೦ಕ್ಕಿಂತ ಹೆಚ್ಚು ಜಾತಿ ಪಂಗಡಗಳಿರುವುದಾಗಿ ಮಂಡಲ ಆಯೋಗವು ಪಟ್ಟಿ ಮಾಡಿದೆ. ಈ ಪೈಕಿ ಕರ್ನಾಟಕದ ಗೌಡರದ್ದೂ ಒಂದು ಜಾತಿ.

ಎರಡನೆಯದಾಗಿ ಗೌಡ ಜನಾಂಗದ ಗುಣ ಲಕ್ಷಣ, ಕಸುಬುದಾರಿಕೆ, ಇತರ ಆರ್ಥಿಕ ಚಟುವಟಿಕೆಗಳು, ಸಾಂಸ್ಕೃತಿಕ ಸ್ವರೂಪ, ಸಾಮಾಜಿಕ ರೀತಿ ರಿವಾಜು, ಕಟ್ಟುಪಾಡು, ನಂಬಿಕೆಗಳನ್ನು ಅವಲೋಕಿಸಿದಾಗ ಇವರು ಎಷ್ಟರಮಟ್ಟಿಗೆ ಕೃಷಿಯನ್ನೇ ಆಧರಿಸಿಕೊಂಡರೆಂಬುದು ವ್ಯಕ್ತವಾಗುತ್ತದೆ. ಕರ್ನಾಟಕ ಗೌಡರಿಗೆ ಕ್ಷತ್ರಿಯ ಸ್ಥಾನಮಾನ ಕಲ್ಪಿಸಿಕೊಂಡಿರುವ ಅಭಿಪ್ರಾಯಗಳು ಇದೆ. ಇದಲ್ಲದೇ ಇಪ್ಪತ್ತೊಂದನೇ ಶತಮಾನದಲ್ಲಿ ಗೌಡ ಜನಾಂಗದ ಕುಲಕಸುಬು ಕೃಷಿ ಎಂಬುದು ಹೆಚ್ಚು ಪರಿಶೋಧನೆಗೆ ಒಳಪಡುತ್ತದೆ. ಆಧುನಿಕ ಗೌಡ ತಾನು ರೈತ ಕುಟುಂಬದಿಂದ ಬಂದವನೆಂಬುದು, ಯಾ ಕೃಷಿ ಪರಂಪರೆ ನಮ್ಮದಾಗಿತ್ತು ಎಂಬುದನ್ನು ಸಮರ್ಥವಾಗಿ ಹೇಳಬಲ್ಲ.

ಅದೇನಿದ್ದರೂ ಗೌಡಜನಾಂಗವು ಕೃಷಿ ಮೂಲ ಕಸುಬಿನ ಸಮುದಾಯ. ಇಂದಿಗೂ ಬಹುತೇಕ ಜನರು ಕೃಷಿಯಲ್ಲೇ ತೊಡಗಿಸಿ ಕೊಂಡವರು. ತಾವು ರೈತರು ಎಂಬುದೇ ಸಮುದಾಯಿಕ ಗುರುತು ಐಡೆಂಟಿಟಿ ಎಂಬುದರಲ್ಲಿ ಎರಡು ಮಾತಿಲ್ಲ.

## ಗೌಡರ ಆರಂಭದ ಕೃಷಿ

ಗೌಡರು ಈ ಭೂಭಾಗದಲ್ಲಿ ಕೃಷಿ ಆರಂಭಿಸುವ ಹೊತ್ತಿಗೆ ಜಿಲ್ಲೆಯ ಕರಾವಳಿ ತೀರ ಮತ್ತು

ಮುಖ್ಯ ನದಿಗಳ ಬಯಲುಗಳಲ್ಲಿ ಸಮೃದ್ಧ ವ್ಯವಸಾಯವಿತ್ತೆಂಬುದಾಗಿ ಇತಿಹಾಸ ಅಧ್ಯಯನಗಳು ಸೂಚಿಸುತ್ತವೆ. ಭತ್ತ ಪ್ರಧಾನವಾದ ಪ್ರದೇಶಗಳು ಆರಂಭದ ಕೃಷಿ ವಲಯಗಳಾಗಿದ್ದುವು. ಗೌಡರು ಬಯಲು ಸೀಮೆಯಿಂದ ಇಲ್ಲಿಗೆ ಬರುವಾಗ ತಮ್ಮೊಂದಿಗೆ ರಾಗಿ ಬೀಜಗಳನ್ನು ತಂದು ಗುಡ್ಡಗಳ ಒಣ ಜಾಗಗಳಲ್ಲಿ ಕುಮೇರಿ ಕೃಷಿ ಆರಂಭಿಸಿದ್ದರು. ಅಡಿಕೆಯೊಂದಿಗೆ ಹೆಚ್ಚು ಆತ್ಮೀಯವಾಗಿ ಗುರುತಿಸಿಕೊಳ್ಳುವ ಈ ಸಮುದಾಯವು ಹೆಚ್ಚು ಬಲಿಷ್ಠವಾಗಲೂ ಅದೇ ಕಾರಣವಾಗಿರಬಹುದು.

ಕುಮೇರಿ ಬೇಸಾಯವು ಅಪ್ಪಟ ನೈಸರ್ಗಿಕ ಕೃಷಿ ವಿಧಾನ. ಎಲ್ಲಾ ಗುಡ್ಡಗಾಡಿನ ಜನರು, ಬುಡಕಟ್ಟುಗಳು ಕುಮೇರಿ ವಿಧಾನವನ್ನೇ ಅನುಸರಿಸಿಕೊಂಡವರು. ಅತ್ಯಂತ ಪ್ರಾಚೀನವಾದ, ಸರಳವಾದ ಉತ್ಪಾದನಾ ವಿಧಾನ. ತೀರಾ ಇತ್ತೀಚೆಗಿನವರೆಗೆ ಈ ಪದ್ಧತಿ ಈ ಪ್ರದೇಶದಲ್ಲಿ ಚಾಲ್ತಿಯಲ್ಲಿತ್ತು. ದಟ್ಟಕಾಡುಗಳನ್ನು ಕಡಿದು, ಸ್ವಚ್ಛಗೊಳಿಸಿ, ಭತ್ತ, ರಾಗಿ, ಜೋಳ, ನವಣೆ ಬೆಳೆಸುತ್ತಿದ್ದರು. ಕ್ರಮೇಣ ಕೇರಳ ಭಾಗದಿಂದ ವಲಸೆಯಾದ ಕ್ರೈಸ್ತರೊಂದಿಗೆ ಬಂದ ಮರಗೆಣಸನ್ನು ಗೌಡರು ಸ್ವೀಕರಿಸಿದ್ದಾರೆ. ಕುಮೇರಿ ಬೇಸಾಯದಲ್ಲಿ ಸರಳವಾದ ಸಾಧನ ಸಲಕರಣೆ ಬಳಸಲಾಗುತ್ತದೆ. ಬಿದಿರಿನ ಕೊಕ್ಕೆ, ಕಬ್ಬಿಣದ ಕೊಕ್ಕೆಗಳನ್ನು ಬಳಸಿ ನೆಲದ ಮೇಲ್ಮೈಯನ್ನು ಪರಡಿ ಬೀಜ ಬಿತ್ತುತ್ತಾರೆ. ಸಾಮಾನ್ಯವಾಗಿ ರಾಜಮಣಿ, ಕೊತ್ತುಮುರಿನೆಲ್ಲು, ರೆಕ್ಕೆಮೊದಲಾದ ಹೆಸರಿನ ಮೂಲದ ತಳಿಯನ್ನು ಬಳಸಲಾಗುತ್ತಿತ್ತು.  ಈಗ ಈ ವಿಧಾನವೂ ಕಣ್ಮರೆಯಾಗಿದೆ, ತಳಿಗಳೂ ಕಣ್ಮರೆಯಾಗಿವೆ. ಕಾಡು ಕಡಿಯುವುದಕ್ಕೆ ಕುಮೆರಿ ಮಾಡುವುದಕ್ಕೆ ಕಾಡುಗಳೇ ಇಲ್ಲ. ಆದರೆ, ಭಾರತದ ಈಶಾನ್ಯದ ಗುಡ್ಡಗಾಡು ಪ್ರದೇಶದ ಬುಡಕಟ್ಟು ಜನಾಂಗಗಳು ಇಂದಿಗೂ ಇಂತಹ ವಿಧಾನವನ್ನು ಅನುಸರಿಸುತ್ತಿದ್ದಾರೆ. ಅದಕ್ಕೆ 'ಜೂಮಿಂಗ್' ಅಥವಾ 'ಬರ್ನ್‌ಟ್ ಎಂಡ್ ಸ್ಲೈಸ್' ವಿಧಾನ ಎಂದು ಕರೆಯುತ್ತಾರೆ.

## ಗೌಡರ ಕ್ಷತ್ರಿಯ 'ಐಡೆಂಟಿಟಿ'

'ಊರಿಗೊಬ್ಬ ಗೌಡ, ದೇಶಕ್ಕೊಬ್ಬ ದೊರೆ' ಎಂಬ ಹಿರಿಯರ ಮಾತು ಬಹಳ ಅರ್ಥಪೂರ್ಣವಾದದ್ದು. ಊರಿಗೆ ಒಬ್ಬನೇ ಗೌಡ ಅಂದರೆ, ಗೌಡರೇ ಇರುವ ಊರಲ್ಲೂ ಅದು ನಿಜ. ಈ ಪದವು ಜಾತಿಸೂಚಕವಾಗಿರದೆ ಸ್ಥಾನಮಾನ, ಹುದ್ದೆಯೊಂದನ್ನು ಸೂಚಿಸುವ ಪದವಾಗಿದೆ. ದೇಶಕ್ಕೆ ದೊರೆ ಇರುವಂತೆ ಆ ಊರಿನ ಮಟ್ಟಿಗೆ ಗೌಡನೇ ದೊರೆಯ ಸ್ಥಾನಮಾನದಲ್ಲಿರುತ್ತಾನೆ. ದೊರೆಯ/ರಾಜನ ಕ್ಷತ್ರಿಯ ಸ್ಥಾನಮಾನಗಳನ್ನು ಊರ ಯಜಮಾನಿಗೆ ಸಂಬೋಧಿಸಲಾಗಿರುವುದು ವ್ಯಕ್ತವಾಗುತ್ತದೆ. - ಮಧ್ಯಕಾಲದ ಊಳಿಗಮಾನ್ಯ ವ್ಯವಸ್ಥೆ (ಫ್ಯೂಡಲಿಸಂ)ಯಲ್ಲಿ ಕರ್ನಾಟಕದ ಮಟ್ಟಿಗೆ ಆಯಾಯ ಪ್ರದೇಶಗಳಿಗನುಸಾರ ವಿಜಯನಗರ ಆಳ್ವಿಕೆ ಕಾಲದಿಂದಲೂ ಗೌಡರು ಯುದ್ಧ ವೀರರಾಗಿದ್ದು ಶಾಸನಗಳಲ್ಲಿ ಉಲ್ಲೇಖಿತವಾಗಿದೆ. ಸಾಮಂತರಾಗಿ, ಸೇನಾಧಿಕಾರಿಗಳಾಗಿ, ಸೈನಿಕರಾಗಿ, ಆಡಳಿತಗಾರರಾಗಿ, ಕಾರ್ಯ ನಿರ್ವಹಣೆ ಮಾಡಿರುವ ಅನೇಕ ನಿದರ್ಶನಗಳನ್ನು ನಾವು ಚರಿತ್ರೆಯಲ್ಲಿ ಕಾಣಬಹುದು. ಕರ್ನಾಟಕದ ವೀರಗಲ್ಲುಗಳನ್ನು ಗಮನಿಸಿದರೆ ಅವುಗಳನ್ನು ಬಹುತೇಕ ಒಕ್ಕಲಿಗ ಸಮುದಾಯಕ್ಕೆ ಸಂಬಂಧಿಸಿದವುಗಳು.

## ಗೌಡರ 'ಶೂದ್ರ ಐಡೆಂಟಿಟಿ'

ನಮ್ಮೆಲ್ಲಾ ಸಾಮಾಜಿಕ ಅಧ್ಯಯನಗಳು ಹೇಳುವಂತೆ ನಮ್ಮದು ಜಾತಿ ಸಮಾಜವಾಗಿದೆ. ಭಾರತೀಯ ಹಿಂದೂ ವೈದಿಕ ಸಾಮಾಜಿಕ ವ್ಯವಸ್ಥೆಯಲ್ಲಿ, ವಿವಿಧ ಸ್ತರಗಳ, ನೂರಾರು ಜಾತಿ ಪಂಗಡಗಳಿವೆ. ಮೂಲತಃ ಹಿಂದೂ ಶಾಸ್ತ್ರ ಸಿದ್ಧಾಂತಗಳ ಪ್ರಕಾರ 'ಸ್ವಯಂಭು' (ಪ್ರೈಮೀವಲ್ ಮ್ಯಾನ್)ವಿನ ಶಿರದಿಂದ ಬ್ರಾಹ್ಮಣ, ಭುಜದಿಂದ 'ಕ್ಷತ್ರಿಯ' ತೊಡೆಯಿಂದ 'ವೈಶ್ಯ' ಮತ್ತು ಪಾದದಿಂದ 'ಶೂದ್ರ'ರು ಜನಿಸಿದ್ದಾರೆ. ಬೌದ್ಧಿಕ ಕೆಲಸ ಬ್ರಾಹ್ಮಣರದ್ದು, ಹಾಗಾಗಿ ಬುದ್ಧಿಜೀವಿ ವಲಯ. ಸಾಹಿತಿ, ಪಂಡಿತ, ಆಚಾರ್ಯ, ವೈದ್ಯಕೀಯ, ತಾಂತ್ರಿಕ ಕ್ಷೇತ್ರ ಇವರಿಗೇ ಮೀಸಲು. ಆಡಳಿತ, ಕಾರುಬಾರು, ಯುದ್ಧ ವಿದ್ಯೆ ಮೊದಲಾದವು ತೋಳ್ಬಲದಿಂದ ಸಾಧಿಸುವಂತಹದ್ದಾಗಿದ್ದು, ಭುಜದಿಂದ ಹುಟ್ಟಿದ ಕ್ಷತ್ರಿಯರಿಗೆ ಅದು ಸೇರಿದ್ದು. ಹಣಕಾಸು ನಿರ್ವಹಣೆ, ಬ್ಯಾಂಕಿಂಗ್, ವ್ಯಾಪಾರ, ವ್ಯವಹಾರಗಳು ತೊಡೆಯನ್ನಾಧರಿಸಿ ಕುಳಿತಲ್ಲಿಂದಲೇ ನಿರ್ವಹಿಸುವಂತಹವುಗಳು ವೈಶ್ಯರಿಗೆ ಸೇರಿದ್ದು. ಉಳುವುದು, ಬಿತ್ತುವುದು, ಕೃಷಿಕೆಲಸ, ಉತ್ಪಾದಿಸುವ ಹೊಣೆಗಾರಿಕೆ ಶೂದ್ರರದ್ದು, ಎಂದರೆ ಪಾದವು ಮೇಲಿನ ಮೂರು ವರ್ಗವನ್ನು 'ಹೊರುವ' ಕೆಲಸ ನಿರ್ವಹಿಸತಕ್ಕದ್ದು.

ಈ ಮೇಲಿನ ಸಿದ್ಧಾಂತವು ಪ್ರಾಚೀನ ಉತ್ತರ ಭಾರತದಿಂದ ಬೆಳೆದು ಬಂದಿರುವುದರಿಂದ ಇಂದಿಗೂ ಉತ್ತರ ಭಾರತೀಯ ಸಮಾಜದಲ್ಲಿ ಈ ನಾಲ್ಕೂ ವರ್ಗಗಳನ್ನು ಪ್ರತ್ಯೇಕವಾಗಿ ಗುರುತಿಸಬಹುದಾಗಿದೆ. ಆದರೆ ದಕ್ಷಿಣ ಭಾರತದಲ್ಲಿ ಯಾರೂ ಕ್ಷತ್ರಿಯರೆಂಬುದು ಅಷ್ಟು ಸ್ಪಷ್ಟವಾಗುವುದಿಲ್ಲ. ಮೂಲತಃ ಪಶುಪಾಲನೆ ಮತ್ತು ಕೃಷಿ ಕ್ಷೇತ್ರದಲ್ಲಿ ತೊಡಗಿಕೊಂಡಿರುವ ಗೌಡ, ಬಂಟ ಮೊದಲಾದ ಕೃಷಿ ಸಮುದಾಯವೇ ಕ್ಷತ್ರಿಯರಿಗೆ ನಿರ್ದೇಶಿಸಲಾಗಿರುವ ವೃತ್ತಿಗಳಲ್ಲೂ ಕಾಣಿಸಿಕೊಂಡಿದ್ದಾರೆ. ಕೆಳದಿಯ ಅರಸರು ಒಕ್ಕಲಿಗರೆಂಬ ವಾದವನ್ನು ಮಂಡಿಸಲಾಗಿದೆ. ಮಧ್ಯಯುಗದ ಅಂತ್ಯಕ್ಕೆ ಕರಾವಳಿಯ ಬಂಟ ಸಮುದಾಯವು ಜೈನ ಅರಸೊತ್ತಿಗೆಯ ನಿಯಂತ್ರಣವನ್ನು ಹೊಂದಿದ್ದು, ತದನಂತರದಲ್ಲಿ ಗುತ್ತಿನ ಹಕ್ಕುಗಳನ್ನು ಆಕ್ರಮಿಸಿಕೊಂಡಿರುವ ನಿದರ್ಶನಗಳಿವೆ. ಅದೇನಿದ್ದರೂ, ಕರಾವಳಿ ಕರ್ನಾಟಕದ ಮಲೆನಾಡು ಪ್ರದೇಶದಲ್ಲಿ ಗೌಡ ಜನಾಂಗವೂ ಪರಂಪರಾಗತವಾಗಿ ಕೃಷಿ ಕಸುಬುದಾರಿಕೆಯನ್ನೇ ಅವಲಂಬಿಸಿಕೊಂಡು ಬಂದಿರುವುದು ಹೆಚ್ಚು ಸ್ಪಷ್ಟವಾಗುತ್ತದೆ.

## ಬದಲಾದ ಜಾತಿ -ವೃತ್ತಿ ಸಂಬಂಧಗಳು

ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆ ಆರಂಭವಾಗುವವರೆಗೂ ಜಾತಿ-ವೃತ್ತಿ ಸಂಬಂಧಗಳು ಭದ್ರವಾಗಿದ್ದುವು. ಬ್ರಿಟಿಷರು ಒದಗಿಸಿದ್ದ ಶಿಕ್ಷಣ ಗೌಡ ಜನಾಂಗ ಸೇರಿದಂತೆ ಎಲ್ಲಾ ಹಿಂದುಳಿದ ಜಾತಿ ಜನಾಂಗಗಳ ಸ್ಥಿತಿಗತಿಗಳನ್ನೇ ಬದಲಾಯಿಸಿತು. ಸ್ವಾತಂತ್ರ್ಯೋತ್ತರದ 'ಲಿಬರಲ್ ಡೆಮಾಕ್ರಸಿ' ಗೌಡರಿಗೆ ಆಧುನಿಕ ಶಿಕ್ಷಣ ಒದಗುವಂತೆ ಮಾಡಿದಾಗ ಸುಶಿಕ್ಷಿತರ ಹೊಸ ವರ್ಗ ಉದಯವಾಯಿತು. ಕೃಷಿ ಮೂಲ ಬದುಕಿನಿಂದ ಕೈಗಾರಿಕೆ ಆಧಾರಿತ ನಗರ ಕೇಂದ್ರಗಳಿಗೆ ವಲಸೆಯಾಗುವಂತೆ ಮಾಡಿತು. ಸರಕಾರಿ, ಖಾಸಗಿ ಉದ್ದಿಮೆಗಳಲ್ಲಿ ನೌಕರಿ, ಆಧುನಿಕ ವೈದ್ಯಕೀಯ, ತಾಂತ್ರಿಕ, ವೃತ್ತಿ ಶಿಕ್ಷಣ ಪಡೆದು

ಇತರ ಮೇಲ್ಜಾತಿಯರೊಂದಿಗೆ ಸಮರ್ಥ ಸ್ಪರ್ಧೆಯಲ್ಲಿದ್ದಾರೆ. ತಮ್ಮ ಕುಲಾಧಾರಿತ ಕೃಷಿ ಜಗತ್ತಿನಿಂದ ದೂರವಾಗುತ್ತಿದ್ದಾರೆ. ಅಂತೆಯೇ ಎಂದೂ ಕೃಷಿ ಕ್ಷೇತ್ರದಲ್ಲಿ ದೈಹಿಕವಾಗಿ ತೊಡಗಿಸಿಕೊಂಡಿರದ ಬ್ರಾಹ್ಮಣ ಬನಿಯಾ ಮಾರ್ವಾಡಿಗಳೂ ಕೃಷಿ ಕ್ಷೇತ್ರಕ್ಕಿಳಿದಿದ್ದಾರೆ. ಊಳಿಗದವರಾಗಿ, ಗೇಣಿದಾರರಾಗಿದ್ದ ಇತರ ಹಿಂದುಳಿದ ಜಾತಿ ಜನಾಂಗದವರು ಭೂ ಸುಧಾರಣೆಯ ನಂತರದಲ್ಲಿ ಪರ್ಗದಾರರಾಗಿ ಸ್ವತಂತ್ರ ಕೃಷಿ ವೃತ್ತಿಯವರಾಗಿದ್ದಾರೆ. ಇಂದು ಜಾತಿ-ವೃತ್ತಿಗಳಿಗೆ ನೇರ ಸಂಬಂಧ ಸ್ಪಷ್ಟವಾಗುತ್ತಿಲ್ಲ. ಆದರೂ ದೇಶದ ಶೇಕಡಾ ೭೦%ಕ್ಕೂ ಮಿಕ್ಕಿದ ಜನತೆಯ ಜೀವನಾಧಾರ ಕಸುಬು ವ್ಯವಸಾಯವೇ ಆಗಿದೆ.

ಸುಧಾರಿತ ಸಮಾಜದಲ್ಲಿ ಗೌಡರು ಪ್ರಾಬಲ್ಯತೆ ಹೊಂದಿರುವುದು ನಿಜ. ಗೌಡರು ವೈದ್ಯಕೀಯ, ತಾಂತ್ರಿಕ ಕ್ಷೇತ್ರದಲ್ಲಿ, ಸಹಕಾರಿ ವಲಯ, ರಾಜಕೀಯ ಆಡಳಿತಾತ್ಮಕ ವ್ಯವಸ್ಥೆಯಲ್ಲಿ, ಸಾಹಿತ್ಯ, ಕಲೆ, ಶಿಕ್ಷಣ, ಸಾಮುದಾಯಿಕ ಸಂಘಟನೆಗಳಲ್ಲೂ ತಮ್ಮ ಹಿಡಿತ ಸಾಧಿಸಿಕೊಂಡಿದ್ದಾರೆ. ಆದರೂ ಮೂಲತಃ ಕೃಷಿಕರಾಗಿಯೇ ಉಳಿದಿದ್ದಾರೆಂಬುದು ಗಮನಾರ್ಹ. ಬೇಸಾಯ ಮಾಡುವುದಕ್ಕೆ ಹೊಸ ತರಬೇತು ವ್ಯವಸ್ಥೆ ಬೇಕಾಗುವುದಿಲ್ಲ. ಸ್ವಯಂ ಪ್ರೇರಣೆಯಿಂದಲೋ ತಮಗರಿವಿಲ್ಲದಂತೆಯೋ ಗಿಡ ನೆಡುವ ಮತ್ತು ಬೆಳೆ ತೆಗೆಯುವುದನ್ನು ತಮ್ಮದೆಂದೇ ಭಾವಿಸಿಕೊಂಡಂತಿದೆ.

### ಪರಂಪರಾಗತ ಕೃಷಿ ವಿಜ್ಞಾನದಲ್ಲಿ ಗೌಡರ ಪಾಲಿದೆ

ಪ್ರಾಚೀನ ಭಾರತದ ಉತ್ಪಾದನೆಯನ್ನು 'ಶೂದ್ರರ ಉತ್ಪಾದನಾ ವಿಧಾನ' (ಶೂದ್ರಾ ಮೋಡ್ ಆಫ್ ಪ್ರೊಡಕ್ಷನ್) ಎಂಬುದಾಗಿ ಪ್ರಸಿದ್ಧ ಇತಿಹಾಸಕಾರ ಪ್ರೊ. ಆರ್. ಎಸ್. ಶರ್ಮಾ ವಿವರಿಸುತ್ತಾರೆ. ಕರ್ನಾಟಕದ ಗೌಡರೂ ಸೇರಿದಂತೆ ಸಮಸ್ತ ಭಾರತದ ಸಾವಿರಾರು ಹಿಂದುಳಿದ ಜಾತಿ ಜನಾಂಗಗಳು ಕೃಷಿ ವಿಜ್ಞಾನದ ವಿಕಾಸದಲ್ಲಿ ಮಹತ್ತರ ಪಾತ್ರ ವಹಿಸಿದ್ದಾರೆ. ಮಳೆಯಲ್ಲಿ ನೆನೆದು, ಬಿಸಿಲಲ್ಲಿ ಉರಿದು, ಹನಿನೀರು ಮತ್ತು ಬಿಸಿಲಿನ ಝಳದಲ್ಲಿ ಬದುಕು ರೂಪಿಸಿಕೊಂಡು ಗೌಡರು 'ಮಣ್ಣಿನ ಮಕ್ಕಳಾಗಿದ್ದಾರೆ.'

ಕೃಷಿ ವಿಜ್ಞಾನ ಇಂದು ನಿನ್ನೆಯದಲ್ಲ. ಅದು ಸಾವಿರಾರು ವರ್ಷಗಳ ನಿರಂತರ ಪ್ರಯೋಗಶೀಲತೆಯೊಂದಿಗೆ ಬೆಳೆದುಬಂದದ್ದು. ಒಮ್ಮೆಲೇ ಎಲ್ಲಾ ತಳಿಗಳು ಊರಿಗೆ ಬಂದಿಲ್ಲ. ಒಂದಾದ ನಂತರ ಮತ್ತೊಂದರಂತೆ ಜನರ ಅನಿವಾರ್ಯತೆ, ಅವಶ್ಯಕತೆಗಳನ್ನು ಪೂರೈಸಲು ನಾಡಿಗೆ ಬಂದಿವೆ. ಹೊಸದಾಗಿ ಹುಟ್ಟಿರುವುದು ಯಾವುದೂ ಇಲ್ಲ. ಈ ಭೂಮಿಯಲ್ಲಿದ್ದುದೇ ಆಗಿರುವ ಅವುಗಳನ್ನು ರೈತರು ಹುಡುಕಿ, ಬೆಳೆಸಿಕೊಂಡಿದ್ದಾರೆ. ಸಸ್ಯಗಳ ತಳಿಗಳಿರಲಿ, ಸಾಕು ಪ್ರಾಣಿಗಳೇ ಇರಲಿ ಅವುಗಳನ್ನು ಮನುಷ್ಯನೇ ಬೆಳೆಸಿರುವುದು. ತಂತ್ರಶಾಸ್ತ್ರದ ಬೆಳವಣಿಗೆಯೂ ಅಷ್ಟೇ. ಸಾಧನ ಸಲಕರಣೆಗಳನ್ನು ಸದಾ ಅವಕಶ್ಯಕತೆಗಳನ್ನು ಪೂರೈಸಲೆಂದು ಅನ್ವೇಷಣೆ ಮಾಡಲಾಗಿದೆ. ಎಲ್ಲಾ ಕೃಷಿ ಉಪಕರಣಗಳು ಆಯಾಯ ಪ್ರದೇಶದ ಮಣ್ಣು, ಮೇಲ್ಮೈಲಕ್ಷಣ, ನೀರು, ಹವೆಗೆ ಹೊಂದಿಕೊಂಡು ಜನ್ಮತಾಳಿವೆ. ಸೂಕ್ತವಾದುವುಗಳನ್ನೇ ಸದಾ ಅರಸುವ ಪ್ರಯತ್ನವನ್ನು ಹುಟ್ಟು ಕೃಷಿಕರಾಗಿರುವ ಗೌಡರು ಮಾಡಿದ್ದಾರೆ.

## ಸಾವಯವ ಕೃಷಿಯ ಮೂಲದಲ್ಲಿ ಗೌಡರು

ಇಂದು ನಾವು ಅತ್ಯಂತ ಪ್ರಗತಿಪರ, ಜೀವಪರ ಕೃಷಿ ವಿಧಾನವೆಂದು ಪ್ರಚಾರ ಪಡೆಯುತ್ತಿರುವ ಸಾವಯವ ಕೃಷಿ ಪದ್ಧತಿಯನ್ನು ಗೌಡರೇ ಹುಟ್ಟು ಹಾಕಿರುವುದು. ಗೌಡರು ಅದನ್ನು ಇತರರಿಂದ ಕಲಿಯಬೇಕಾಗಿಲ್ಲ. ತಮ್ಮ ಹಿರಿಯರು ಯಾವ ಕೃಷಿ ವಿಧಾನವನ್ನು ಪಾಲಿಸಿಕೊಂಡು ಬಂದಿದ್ದಾರೋ ಅದನ್ನೇ ಮುಂದುವರಿಸಿದರಾಯಿತು. ಸದ್ಯ ನಮ್ಮ ರೈತರ ಅವಶ್ಯಕತೆ ಎಂದರೆ ಬದಲಾದ ಪರಿಸ್ಥಿತಿಯಲ್ಲಿ ಪರಂಪರೆಯ ಕೃಷಿ ಪದ್ಧತಿ ಮತ್ತು ಆಧುನಿಕ ರಾಸಾಯನಿಕ ಕೃಷಿ ಪದ್ಧತಿಯ ಸೂತ್ರಗಳನ್ನು, ಅವುಗಳ ಪರಿಭಾಷೆಯನ್ನು ಅರ್ಥ ಮಾಡಿಕೊಳ್ಳುವುದು.

ಸಾವಯವ (ಆರ್ಗೇನಿಕ್) ಸುಸ್ಥಿರ (ಸಸ್ಟೆನೇಬಲ್) ಮೊದಲಾದವುಗಳು ಹೆಚ್ಚು ಕಡಿಮೆ ಒಂದೇ ವಿಚಾರವನ್ನು ತಮ್ಮ ಕಾರಣ, ಉದ್ದೇಶಗಳ ಮಟ್ಟಿಗೆ ವ್ಯಕ್ತಗೊಳಿಸುತ್ತವೆ. ಮೂಲತಃ ಆಧುನಿಕ ಅಪಾಂತರಕಾರಿ ಯಾಂತ್ರೀಕೃತ ಬೇಸಾಯ ಕ್ರಮದ ವಿರುದ್ಧವೇ ಆಗಿದೆ. ಯಾಂತ್ರೀಕೃತ ಬೇಸಾಯವನ್ನು ಪಂಚವಾರ್ಷಿಕ ಯೋಜನೆಗಳ ಮೂಲಕ ವೈಜ್ಞಾನಿಕ ಬೇಸಾಯ ವಿಧಾನವೆಂದು ಜಾರಿ ಮಾಡಿರುವುದರಿಂದಾಗಿ ಗೌಡರ ಪರಂಪರಾಗತ ಕೃಷಿ ವಿಧಾನಕ್ಕೆ ಕೊಡಲಿ ಏಟು ಬಿದ್ದಿದೆ. ಅಗಾಧವಾದ ಕೀಳರಿಮೆ, ಅಸಂತುಷ್ಟಿಯೊಂದಿಗೆ ನಮ್ಮ ಅದ್ಭುತ ಕೃಷಿ ಪರಂಪರೆ ಕುಸಿದು ಹೋಯಿತು. ಗೌಡರು ಕೃಷಿ ಕ್ಷೇತ್ರದಲ್ಲಿ ದುರ್ಬಲರಾದರು.

ವೈಜ್ಞಾನಿಕ ವಿಧಾನದ ಕೃಷಿ ಎಂಬ ಘೋಷಣೆಯೊಂದಿಗೆ ಬಂದ ಐರೋಪ್ಯ (ಜಪಾನ್ ಸೇರಿ) ಪದ್ಧತಿ ವಾಸ್ತವದಲ್ಲಿ ಅವೈಜ್ಞಾನಿಕವಾಗಿತ್ತು. ಯಾವುದೋ ದೇಶದ ಮಣ್ಣು, ಹವೆ, ತೇವಾಂಶ, ಬಿಸಿಲಿನೊಂದಿಗೆ ರೂಪಿಸಲ್ಪಟ್ಟ ಕೃಷಿ ವಿಧಾನ, ನಮ್ಮೂರಿನ ವಿಭಿನ್ನ ಪರಿಸರದಲ್ಲಿ ನಮ್ಮ ಕೃಷಿ ವಲಯವನ್ನು ಹಾಳುಗೆಡವಿದೆ ಎಂಬುದು ವಾಸ್ತವ. ವಿಷಪೂರಿತ ಗೊಬ್ಬರ, ಕೀಟನಾಶಕ, ತಳಿಗಳು, ನಮ್ಮ ಮಣ್ಣು, ನೀರು, ಗಾಳಿಯನ್ನು ಹಾಳುಗೆಡವಿ ಬೆಳೆ ನಾಶಮಾಡಿವೆ. ಕೀಟ, ಪ್ರಾಣಿ ಸಂಕುಲ, ಜೀವ ಸಂಕುಲಗಳ ವಿನಾಶಕ್ಕೆ ಕಾರಣವಾಗಿವೆ. ನೈಜ ಪರಿಸರದ ಮೇಲೆ ಆಗಿರುವ ದುಷ್ಪರಿಣಾಮಗಳಿಂದಾಗಿ ನಮ್ಮ ಪರಂಪರಾಗತ ಕೃಷಿ ಕುಸಿಯುವಂತಾಗಿದೆ. ವಾಸ್ತವದಲ್ಲಿ ಆಗಿರುವುದು ಎಂದರೆ ಅದನ್ನೇ ನಂಬಿ ಬಂದಿದ್ದ ಗೌಡ ಜನಾಂಗ ಅತಂತ್ರವಾದದ್ದು.

## ಗೌಡರ ಕೃಷಿ ಪರಂಪರೆಯ ವಿನಾಶಕ್ಕೆ ಕಾರಣಗಳು

ಗೌಡರ ಕೃಷಿ ಜಗತ್ತಿನ ಆಗುಹೋಗುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಗೌಡ ಜನಾಂಗವು ಕೃಷಿಯಲ್ಲಿ ದುರ್ಬಲರಾಗುತ್ತಿರುವುದು ಕಂಡುಬರುತ್ತದೆ. ಅಂತರಾಷ್ಟ್ರೀಯ ವಲಯದಲ್ಲೂ ಕೃಷಿ ಕ್ಷೇತ್ರ ದುರ್ಬಲವಾಗುತ್ತಿದೆ. ಕೈಗಾರಿಕೆ ಕೃಷಿಯ ಮೇಲೆ ನಿಯಂತ್ರಣ ಹೊಂದಿದೆ. ಬಹುರಾಷ್ಟ್ರೀಯ ಕಂಪೆನಿಗಳ ಹಿಡಿತದಲ್ಲಿ ನಮ್ಮ ಮಾರುಕಟ್ಟೆ ಹದಗೆಡುತ್ತಿದೆ. ಬಂಡವಾಳವೇ ಉತ್ಪಾದನೆಯನ್ನು ನಿಯಂತ್ರಿಸುತ್ತಿದೆ. ಗೌಡ ಕೃಷಿಕರ ಅಗತ್ಯದ ಗೊಬ್ಬರ ಕೀಟನಾಶಕ, ಯಂತ್ರ-ತಂತ್ರ ಸಲಕರಣೆ ಹಾಗೂ ಮೂಲಧನಕ್ಕಾಗಿ ನಮ್ಮ ರೈತರ ಬಹುಪಾಲು ಉತ್ಪಾದನೆ ಕೈತಪ್ಪಿ ಹೋಗಿದೆ. ಸಂಪಾದನೆ

ಹಾಗೂ ಉಳಿಕೆಯ ಪ್ರಮಾಣ ಕನಿಷ್ಠವಾಗುತ್ತಿದೆ. ನಮ್ಮ ರೈತರಿಗೆ ಉಳಿಗಾಲವಿಲ್ಲ ಎಂಬ ಸ್ಥಿತಿ ನಿರ್ಮಾಣವಾಗುತ್ತಿದೆ.

ಗೌಡರ ಕೃಷಿ ಪರಂಪರೆಯು ಸ್ವಾವಲಂಬಿಯಾಗಿತ್ತು, ಸುದೃಢವಾಗಿತ್ತು, ಸುಸ್ಥಿರವಾಗಿತ್ತು. ಯಾವುದೇ ಬಾಹ್ಯ ಒತ್ತಡವಿಲ್ಲದ ಉತ್ಪಾದನಾ ಕ್ರಮವನ್ನು ಗೌಡರು ರೂಢಿಸಿಕೊಂಡಿದ್ದುದರಿಂದಲೇ ಅವರು ಸುಖವಾಗಿದ್ದರು. ಎತ್ತು, ಬಿತ್ತು, ಗೊಬ್ಬರ, ನೀರು, ನೀರಾವರಿ, ಪ್ರಾಣಿ ಶಕ್ತಿ, ಮಾನವ ಶ್ರಮ ಹೀಗೇ ಉತ್ಪಾದನೆಗೆ ಬೇಕಾದ ಎಲ್ಲವೂ ಗೌಡರ ಮನೆಗಳಲ್ಲಿದ್ದವು. ಪ್ರಕೃತಿಯ ಪ್ರಶಾಂತ ವಾತಾವರಣ, ಸುಸ್ಥಿರ ಪರಿಸರ, ಸಮೃದ್ಧ ಕೃಷಿ ಕ್ಷೇತ್ರದಲ್ಲಿ ಸುಲಲಿತವಾದ ಉತ್ಪಾದನಾ ವ್ಯವಸ್ಥೆ ಗೌಡರದ್ದು. ರೋಗರಹಿತ ಬೆಳೆ, ರೋಗರಹಿತ ಜೀವನ. ಉತ್ತಮ ಬೆಳೆ, ಮಿಗತೆಯಾಗುವ ಉತ್ಪನ್ನ. ಯಾಂತ್ರಿಕ ಬೇಸಾಯ ವಿಧಾನವು ಹೊಲದೊಳಗೆ ಪ್ರವೇಶವಾದಂದಿನಿಂದ ಗೌಡರ ಒಂದೊಂದೇ ಜೀವಂತ ವಿಧಾನಗಳು ಅಪಮೌಲ್ಯಗೊಂಡವು. ಹೊಲ ಬದಲಾಯಿತು, ಹೊಸ ಬೆಳೆ ಬಂದು, ಊರೇ ಬದಲಾಯಿತು. ಆದರೆ ಜನರಿಗೆ ಒಳಿತಾಯಿತೇ ಎಂಬುದು ಇನ್ನೂ ಪ್ರಶ್ನೆಯಾಗಿಯೇ ಉಳಿದಿದೆ.

### ಆಧುನಿಕ ಕೃಷಿ ಮಾಹಿತಿ ವ್ಯವಸ್ಥೆ

ಒಕ್ಕಲಿಗ ರೈತ ಸಮುದಾಯಕ್ಕೆ ತನ್ನದೇ ಆದ ಕೃಷಿ ಮಾಹಿತಿ ಪರಂಪರೆ ಇತ್ತು. ಹಿರಿಯರಿಂದ ಕಿರಿಯರಿಗೆ ಆ ಮಾಹಿತಿಗಳು ವರ್ಗಾವಣೆಗೊಳ್ಳುತ್ತಲೇ ಬಂದಿದೆ. ಈ ಮಟ್ಟಿಗೆ ಯಾವುದೇ ವೃತ್ತಿ ಕಸುಬುಗಳ ಪರಂಪರೆಯೂ ನಿರಾಯಾಸವಾಗಿ ಹರಿದು ಬಂದಿವೆ. ಪ್ರಾಚೀನ ವೈದ್ಯ ಪದ್ಧತಿ, ಸಾಂಸ್ಕೃತಿಕ ಪ್ರಕಾರಗಳು, ವಾಸ್ತು, ತಂತ್ರಶಾಸ್ತ್ರ, ಜ್ಯೋತಿಷ್ಯ ಎಲ್ಲವೂ ಅಷ್ಟೇ. ರೈತರು ತಮ್ಮ ನೆಲ, ಹೊಲಗಳಲ್ಲಿ ಹೇಗೆ ಬೆಳೆ ತೆಗೆಯಬೇಕೆಂಬುದನ್ನು ತಮ್ಮಷ್ಟಕ್ಕೆ ಕಲಿಯುವ, ಪ್ರಯೋಗಿಸಿ ಕರಗತ ಮಾಡಿಕೊಳ್ಳುತ್ತಾರೆ. ದನ ಮೇಯಿಸುವ, ಪಶುಪಾಲನೆ, ಕೃಷಿ ಕಸುಬು ಚಟುವಟಿಕೆಗಳ ಮೂಲಕ ಹರಿದು ಬಂದದ್ದರಿಂದ, ಅವುಗಳ ಪರಿಣಾಮಗಳ ಬಗ್ಗೆ ಯಾವುದೇ ಆತಂಕ, ಅನುಮಾನಗಳಿದ್ದಿರಲಿಲ್ಲ. ಕೆಲವು ಆಕಾಲಿಕ ಸಂಗಾತಿಗಳಾದ, ಬೆಳೆಹಾನಿ, ಪ್ರಾಕೃತಿಕ ವಿಕೋಪಗಳನ್ನು ಹೊರತುಪಡಿಸಿ, ಬೆಳೆ ತೆಗೆಯುವ ಎಲ್ಲಾ ಗ್ಯಾರಂಟಿಗಳಿದ್ದುವು. ಆದರೆ ಇಂದು ಹಾಗಲ್ಲ. ಬೆಳೆ ಬೆಳೆಯುವುದು ರೈತನ ಕೈಯಲ್ಲಿಲ್ಲ.

ಪರಂಪರಾಗತ ಕೃಷಿ ವಿಜ್ಞಾನ ನಾಶವಾಗಿರುವುದಕ್ಕೆ ನಮ್ಮ ವಿಶ್ವವಿದ್ಯಾನಿಲಯ ಮತ್ತು ಕೃಷಿ ಸಂಶೋಧನಾ ಕೇಂದ್ರಗಳೇ ಮೊದಲ ಕಾರಣ. ಆಧುನಿಕ ಶಿಕ್ಷಣವು ಕೃಷಿ ಮಾಹಿತಿ ಸಂಶೋಧನೆ ಮಾಡಲಿಲ್ಲ. ಭಾರತೀಯ ಕೃಷಿ ವಿಜ್ಞಾನವನ್ನು ದಾಖಲಿಸಿ, ವೃದ್ಧಿಸುವ ಕೆಲಸ ಮಾಡಲಿಲ್ಲ, ನಮ್ಮ ಗೌಡ ಸಮುದಾಯದ ಯಾವ ಸೂಕ್ತ ಪರಂಪರೆಯನ್ನೂ ಗುರುತಿಸಿ ಗೌರವಿಸಿಲ್ಲ. ಬದಲಿಗೆ, ಜಪಾನು ಕೃಷಿ ಮಾದರಿ, ಅಮೆರಿಕಾದ, ರಷ್ಯಾದ ಕೃಷಿ ಮಾಹಿತಿಯೇ ಅಧಿಕ ಇಳುವರಿ ನೀಡುವಂತಹದ್ದು, ಪ್ರಪಂಚದಲ್ಲೇ ಅದು ಶ್ರೇಷ್ಠ ಎಂಬ ಭ್ರಮೆಯೊಂದಿಗೆ ಭಾರತೀಯ ರೈತರ ಮೇಲೆ ಹೇರಲಾಯಿತು. ಭಾರಿ ಬಂಡವಾಳ ಬಯಸುವ, ಕೈಗಾರಿಕೆಯನ್ನೇ ಅವಲಂಬಿಸಬೇಕಾಗಿರುವ ಉತ್ಪಾದನಾ ವಿಧಾನವನ್ನು

ನಮ್ಮ ರೈತರಿಗೆ ಬೋಧಿಸತೊಡಗಿದರು. ಸರಕಾರ ಪ್ರಚಾರ ಇಲಾಖೆಯ ಮೂಲಕ, ಕೃಷಿ ಇಲಾಖೆ ಸಂಶೋಧನೆ ಕೇಂದ್ರಗಳ ಮೂಲಕ, ಮಾಹಿತಿ ಮಾಧ್ಯಮಗಳ ಮೂಲಕ ಜನರಿಗೆ ಯಾಂತ್ರಿಕ ಕೃಷಿ ವಿಧಾನವನ್ನು ಸ್ವೀಕರಿಸುವಂತೆ ಒತ್ತಾಯ ಹೇರಿವೆ. ಇದು ಎಲ್ಲೂ ಯಶಸ್ವಿಯಾಗಲಿಲ್ಲ. ಪಂಜಾಬ್, ಹರ್‍ಯಾಣ, ಕರ್ನಾಟಕ, ಮಂಡ್ಯ, ಶಿವಮೊಗ್ಗ, ಹಾಸನ ಮೊದಲಾದ ಪ್ರದೇಶಗಳಲ್ಲಿ (ಒಕ್ಕಲಿಗರ ಪ್ರದೇಶ) ನೆಲ ಹದಗೆಟ್ಟಿತ್ತು. ನೀರು, ನೆಲ ವಿಷವಾಯಿತು. ಅಧಿಕ ಬಂಡವಾಳದ ಭಾರದಿಂದ ರೈತ ವರ್ಗ ಕುಸಿಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಇದೇ ಪ್ರಯೋಗಗಳಾದುವು. ಪರಿಣಾಮ ಇಲ್ಲೂ ಪ್ರತಿಕೂಲವಾಯಿತು.

ದ.ಕ. ಜಿಲ್ಲೆಯ ಮಲೆನಾಡ ಭಾಗವೆಂದರೆ, ಬೆಳ್ತಂಗಡಿ, ಸುಳ್ಯ ಮತ್ತು ಪುತ್ತೂರು ತಾಲೂಕುಗಳು. ಇದೇ ಪ್ರದೇಶದಲ್ಲಿ ಒಕ್ಕಲಿಗರ ಪ್ರಾಬಲ್ಯತೆ ಇರುವುದು. ಇಲ್ಲೆಲ್ಲಾ ವಾಣಿಜ್ಯ ಬೆಳೆಗಳನ್ನು ಅನುಸರಿಸಲಾಗಿದೆ. ಇಲ್ಲಿ ಇದೀಗ ಆಮದಾಗುತ್ತಿರುವ ಬೆಳೆಗಳು ನಮ್ಮ ರೈತರ ಅನುಭವ ಮಿತಿಯಿಂದ ಹೊರತಾದದ್ದು. ರಬ್ಬರ್, ವೆನಿಲ್ಲಾ, ಜಾಯಿಕಾಯಿ, ಲವಂಗ ಮೊದಲಾದ ಎಲ್ಲಾ ಬೆಳೆಗಳ ಮಾಹಿತಿ ನಮ್ಮಲ್ಲಿಲ್ಲ. ಸ್ವತಂತ್ರವಾಗಿ ರೈತಾಪಿ ಜನವರ್ಗ ಬೆಳೆ ತೆಗೆಯುವುದಕ್ಕಾಗಿ ಪರದಾಡುವ ಸ್ಥಿತಿಯಲ್ಲಿದ್ದಾರೆ. ಇಂತಹದ್ದೇ ಪ್ರಸಂಗವು 'ಹಸಿರು ಕ್ರಾಂತಿ' ಘೋಷಣೆಯ ಜೊತೆಗೆ ಬಂದ ಪಾಶ್ಚಿಮಾತ್ಯ ಬೇಸಾಯ ವಿಧಾನದ ಅನುಷ್ಠಾನದ ಹಂತದಲ್ಲಾಗಿತ್ತು. ನಮ್ಮ ಹಿರಿಯ ರೈತರೊಬ್ಬರು ಹೇಳುವಂತೆ, 'ಕೈಲಿದ್ದದ್ದನ್ನು ಬಿಟ್ಟು ಹಾರುವ ಹಕ್ಕಿಗೆ ಕೈ ಚಾಚಿದೆ' ಎಂದು ಪರಿಗಣಿಸಬೇಕಾಗಿದೆ. ನಮ್ಮ ರೈತರು ಇತ್ತ ಪರಂಪರೆಯ ಜ್ಞಾನವನ್ನು ಉಳಿಸಿಕೊಳ್ಳಲಾರದೇ, ಅತ್ತ ಆಧುನಿಕ ಎಂಬ ಪಾಶ್ಚಿಮಾತ್ಯ ವಿಧಾನವನ್ನೂ ಅನುಸರಿಸಲಾಗದೆ ಅತಂತ್ರರಾಗಿದ್ದಾರೆ.

ಆಧುನಿಕ ಕೃಷಿಗೆ ಆರಂಭದಲ್ಲಿ ಮಾರು ಹೋಗಿರುವುದೇ ನಮ್ಮ ಮೇಲ್ಜಾತಿಯ ಜನ. ಮುಖ್ಯವಾಗಿ ಬೇಸಾಯವನ್ನು ಎಂದೂ ಕಸುಬಾಗಿಸಿಕೊಳ್ಳದ ಬ್ರಾಹ್ಮಣ, ಬನಿಯಾ, ಜೈನ ಮಾರ್ವಾಡಿಗಳೇ ಕೃಷಿ ವಿಜ್ಞಾನಿಗಳಾದದ್ದು. ಅಕ್ಷರ ಜಗತ್ತನ್ನು ಸದಾ ಹಿಡಿತದಲ್ಲಿರಿಸಿಕೊಂಡಿದ್ದ ಇವರು, ವಿದೇಶೀ ಕೃಷಿ ಮಾಹಿತಿಯನ್ನು ವಿಶ್ವವಿದ್ಯಾನಿಲಯಗಳಲ್ಲಿ ಕಲಿತು, ಗ್ರಾಮೀಣ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸುವ ನೇತೃತ್ವ ವಹಿಸಿಕೊಂಡವರು. ಗೌಡರ ಮಕ್ಕಳು ಶಾಲಾ ಶಿಕ್ಷಣದಿಂದ ಹೊರಗುಳಿದಿದ್ದ ಕಾರಣ ಅವರು ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ಪ್ರವೇಶ ಪಡೆದುಕೊಳ್ಳಲಿಲ್ಲ. ಅದೇನಿದ್ದರೂ ಪರಂಪರಾಗತ ಕೃಷಿಕರನ್ನು ದಾರಿ ತಪ್ಪಿಸುವುದರಲ್ಲಿ ಈ ಸುಶಿಕ್ಷಿತರು ಯಶಸ್ವಿಯಾಗಿದ್ದಾರೆ.

## ಮತ್ತೆ ಸಾವಯವ

ರಾಸಾಯನಿಕ ಕೃಷಿ ವಿಫಲವಾಗುತ್ತಿರುವುದನ್ನು ಮನಗಂಡ ಕೃಷಿ ವಿಜ್ಞಾನ ಕೇಂದ್ರಗಳು ಸಾವಯವ, ಸುಸ್ಥಿರ ವಿಧಾನಗಳನ್ನು ಪ್ರೇರೇಪಿಸತೊಡಗಿವೆ. ಹೊಸ ಹೆಸರಿನ ಈ ವಿಧಾನವು ನಮ್ಮವರು ಮರೆಯತೊಡಗಿರುವುದನ್ನು ನೆನಪಿಸುತ್ತಿದೆ. ಈ ಬಗ್ಗೆ ಪ್ರಾಮಾಣಿಕವಾದ ಪ್ರಯತ್ನ ಮಾಡಿದವರೆಂದರೆ

ಚೇರ್ಕಾಡಿ ರಾಮಚಂದ್ರ ರಾಯರು, ಕುರುವಳ್ಳಿ ಪುರುಷೋತ್ತಮ, ಎ.ಪಿ. ಚಂದ್ರಶೇಖರ ಮೊದಲಾದವರು. ಚೇರ್ಕಾಡಿಯವರು ಪ್ರತಿಪಾದಿಸುವ ಸರ್ವೋದಯ ಕೃಷಿ ಪದ್ಧತಿ ಸೈದ್ಧಾಂತಿಕವಾಗಿ ಗಾಂಧಿವಾದಿ ಚಿಂತನೆಯನ್ನು ಸಮರ್ಥಿಸುವುದಾದರೂ, ಮೂಲಭೂತವಾಗಿ ಗೌಡರ ಕೃಷಿ ವಿಧಾನವೇ ಆಗಿದೆ. ಒಟ್ಟಾರೆಯಾಗಿ ಆಧುನಿಕ ಕೃಷಿಗೆ ತೀವ್ರವಾದ ಪ್ರತಿರೋಧಗಳು ವ್ಯಕ್ತವಾಗಿರುವುದು ಬುದ್ಧಿಜೀವಿ ವಲಯದಲ್ಲಿ. ಇಂದು ಸಾವಯವ ಪದ್ಧತಿ ಎಂದರೆ ಗೌಡರು ಎಂದೋ ಮರೆಯ ತೊಡಗಿರುವ ಕೃಷಿ ಪದ್ಧತಿಯನ್ನು ನೆನಪಿಸುವುದಷ್ಟೇ ಆಗಿರುತ್ತದೆ. ಪ್ರಕೃತಿ ಸಾವಯವದಂತಹ ಪ್ರಗತಿಪರ ಕೃಷಿ ಚಟುವಟಿಕೆಯ ನೇತೃತ್ವ ವಹಿಸಿದರು ಶೂದ್ರರಲ್ಲ. ಬದಲಿಗೆ ಕೃಷಿಯ ಯಾವ ಪರಂಪರೆಯನ್ನೂ ಸಾಮಾಜಿಕವಾಗಿ ಹೊಂದಿರದ ಬ್ರಾಹ್ಮಣರು.

### ಆಧುನಿಕ ಕೃಷಿ ವ್ಯವಸ್ಥೆಯ ನಿಯಂತ್ರಣ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೃಷಿ ಕ್ಷೇತ್ರದ ಸೈದ್ಧಾಂತಿಕ ನೇತೃತ್ವ ಹೊಂದಿದವರೂ ಬ್ರಾಹ್ಮಣರೇ ಆಗಿದ್ದಾರೆ. ನಿರಂತರ ಪ್ರಯೋಗಶೀಲತೆ, ಹೊಸ ಹೊಸ ಬೆಳೆಗಳನ್ನು ಪ್ರಯೋಗಿಸುವುದು, ಹೊಸ ತಂತ್ರಜ್ಞಾನವನ್ನು ಹುಟ್ಟುಹಾಕಿ ರೂಪಿಸಿಕೊಳ್ಳುವುದು, ಆಧುನಿಕ ಜಗತ್ತಿನಲ್ಲಿ ಸೂಕ್ತ ಮಾರುಕಟ್ಟೆ ನಿರ್ಮಿಸಿಕೊಳ್ಳುವ ಪ್ರಯತ್ನ ನಡೆಸುವುದು, ರೈತ ವೃತ್ತಿಗೆ ಪೂರಕ ಬ್ಯಾಂಕಿಂಗ್ ವ್ಯವಸ್ಥೆ ರೂಪಿಸುವುದು, ಕೃಷಿ ಉಪಕರಣ, ಸಾಧನ, ಸಲಕರಣೆಗಳನ್ನು ವಿತರಿಸುವ ವ್ಯವಹಾರ ಮೊದಲಾದ ಕೃಷಿ ವ್ಯವಸ್ಥೆಯ ನಾನಾ ಸ್ತರಗಳಲ್ಲಿ ನಮ್ಮವರು ಕಾಣಿಸಿಕೊಂಡಿಲ್ಲ. ಬದಲಾದ ವ್ಯವಸ್ಥೆಯಲ್ಲಿ ಗೌಡರ ಪಾಲು ತೀರಾ ಕಡಿಮೆ ಎನ್ನಬಹುದು ಅಥವಾ ಏನೂ ಇಲ್ಲ.

### ಸಹಕಾರಿ ವ್ಯವಸ್ಥೆಯಲ್ಲಿ ಗೌಡರು

ಆಧುನಿಕ ಕೃಷಿ ವ್ಯವಸ್ಥೆಗೆ ಪೂರಕ ಸಂಘಟನೆಯಾಗಿ ಕಳೆದ ಹಲವಾರು ದಶಕಗಳಿಂದ ಬೃಹತ್ ಸಹಕಾರಿ ಚಳುವಳಿಯೇ ನಮ್ಮ ಜಿಲ್ಲೆಯಲ್ಲಿ ನಡೆದಿದೆ. ಮೊಳಹಳ್ಳಿ ಶಿವರಾಯರಿಂದ ತೊಡಗಿ ಇಂದಿನವರೆಗೂ ಹಳ್ಳಿ ಹಳ್ಳಿಗಳಲ್ಲಿ ಸಹಕಾರಿ ಸಂಘಗಳು ಸ್ಥಾಪನೆಗೊಂಡಿವೆ. ಈ ಚಳುವಳಿಯ ನೇತೃತ್ವ ವಹಿಸಿದವರು ಬ್ರಾಹ್ಮಣರು. ಕ್ರಮೇಣ ಆಡಳಿತಾತ್ಮಕ ಸುಧಾರಣೆಗಳೊಂದಿಗೆ ಇತರ ಜಾತಿ ಜನಾಂಗದವರೂ ಪ್ರಾತಿನಿಧ್ಯ ಪಡೆದರು. ರಾಜಕೀಯವಾಗಿ ಗೌಡರು ಹಿಡಿತ ಸಾಧಿಸುವುದರೊಂದಿಗೆ ಸಹಕಾರಿ ಕ್ಷೇತ್ರದಲ್ಲಿ ಗೌಡ ಜನಾಂಗದ ರೈತರೂ ಅವಕಾಶ ಪಡೆದರು. ಕೃಷಿ ಉತ್ಪನ್ನ ಮಾರುಕಟ್ಟೆಗಳ ನಿಯಂತ್ರಣ, ರಾಜ್ಯ ಸಹಕಾರಿ ಜಾಲದಲ್ಲಿ, ಭೂ ಬ್ಯಾಂಕು, ಸಹಕಾರಿ ಸಂಘ, ಸಂಘಟನೆಗಳಲ್ಲಿ ಅಧಿಕಾರ ಸ್ಥಾಪಿಸುವಲ್ಲಿ ಸಫಲರಾಗಿದ್ದಾರೆ. ಇವುಗಳೆಲ್ಲಾ ರಾಜಕೀಯ ಪ್ರಾಬಲ್ಯತೆ ಹೊಂದುವ ಸೀಮಿತ ಉದ್ದೇಶಗಳ ಮಟ್ಟದಲ್ಲೇ ಉಳಿದಿವೆ. ಸಂಖ್ಯಾಬಲದ ಪ್ರಾತಿನಿಧ್ಯವಾಗಿ ಕಂಡುಬರುತ್ತದೆ. ಸಹಕಾರಿ ಮತ್ಸದ್ದಿತನವಾಗಲಿ, ಅಭಿವೃದ್ಧಿ ಮಾದರಿಯ ತಿಳುವಳಿಕೆಯಾಗಲಿ ಅಷ್ಟಾಗಿ ವ್ಯಕ್ತವಾಗುತ್ತಿಲ್ಲ. ಪ್ರಸಕ್ತ ಕೃಷಿ ಮಾರುಕಟ್ಟೆಯನ್ನು ಕೃಷಿಕರ ಪರವಾಗಿ ನಿಯಂತ್ರಿಸುವಲ್ಲಿ ಸಹಕಾರಿ ರಂಗ ವಿಫಲವಾಗಿದೆ.

ಬೆಲೆ ಕುಸಿದಿದೆ. ರೈತರು ಕಂಗಾಲಾಗಿದ್ದಾರೆ. ನಮ್ಮ ಸಹಕಾರಿ ಧುರೀಣರು ಇವುಗಳನ್ನು ಗಂಭೀರವಾಗಿ ಪರಿಗಣಿಸಿದಂತಿಲ್ಲ. ವಿವಿಧ ರಾಜಕೀಯ ವಲಯಗಳ ಪ್ರತಿನಿಧಿಗಳಂತೆ 'ತೋರಿಕೆಯ ಹೋರಾಟ' ನಡೆಸಲಾಗುತ್ತಿದೆ. ಆಧುನಿಕ ವ್ಯವಸಾಯ ಕ್ಷೇತ್ರಕ್ಕೆ ಪರ್ಯಾಯ ವ್ಯವಸ್ಥೆ ರೂಪಿಸುವ ಜವಾಬ್ದಾರಿ ನಮ್ಮ ಸಹಕಾರಿ ಧುರೀಣರಲ್ಲಿ ರೂಪುಗೊಳ್ಳಬೇಕಾಗಿದೆ. ಸಂಘಟಿತ ಹೋರಾಟದಿಂದ ರೈತಪರ ಚಳುವಳಿಗಳು ಬೆಳೆಯಬೇಕು. ಆಗ ಮಾತ್ರ ನಮ್ಮ ರೈತ ವಲಯದಲ್ಲಿ ಸಶಕ್ತತೆ ತುಂಬಬಹುದು.

ಸಹಕಾರಿ ರಂಗದ ವೈಫಲ್ಯಕ್ಕೆ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಹಣಕಾಸು ವ್ಯವಸ್ಥೆ ಕಾರಣವಿರಬಹುದು. ಬಹುರಾಷ್ಟ್ರೀಯ ಹಣಕಾಸು ಸಂಸ್ಥೆಗಳು, ಕೈಗಾರಿಕಾ ರಂಗದ ತೀವ್ರ ಹಿಡಿತ, ರಾಜಕೀಯ ಮತ್ತು ಆಡಳಿತಾತ್ಮಕ ವೈಫಲ್ಯಗಳೂ ಕಾರಣಗಳಾಗಿವೆ ಎಂಬುದನ್ನು ಅನೇಕ ಅಧ್ಯಯನಗಳು ವ್ಯಕ್ತಪಡಿಸಿವೆ. ಬಾಹ್ಯ ಒತ್ತಡಗಳು ಅದೆಷ್ಟೇ ಇದ್ದರೂ ಈ ಬಗ್ಗೆ ರೈತವಲಯದಲ್ಲಿ ಆಂತರಿಕ ಪ್ರತಿರೋಧಗಳು ವ್ಯಕ್ತವಾಗುತ್ತಿಲ್ಲ. ನಮ್ಮ ರೈತರನ್ನು ಸದಾ ಕಾಡುತ್ತಿರುವ ಇಂತಹ ಸಮಸ್ಯೆಗಳ ವಿರುದ್ಧ ಸೈದ್ಧಾಂತಿಕ ಒಳನೋಟ ಬೆಳೆಯುತ್ತಿಲ್ಲ. ರೈತ ವಲಯಕ್ಕೆ ಅಗತ್ಯದ ಮಾಹಿತಿ ನೀಡಿ ತಿಳುವಳಿಕೆ ಹೆಚ್ಚಿಸುವ, ಅವರ ಆತ್ಮಸ್ಥೈರ್ಯ ಹೆಚ್ಚಿಸುವ ಪ್ರಯತ್ನಗಳು ಕಂಡುಬರುತ್ತಿಲ್ಲ. ಇದೀಗ ಖಾಸಗೀಕರಣದ ತೀವ್ರ ದಾಳಿಯಿಂದಾಗಿ ನಮ್ಮ ಸಹಕಾರಿ ಕ್ಷೇತ್ರ ಮತ್ತಷ್ಟು ಸೊರಗಲಿದೆ.

ಜಾತಿ ಸಮುದಾಯದ ರೈತರ ಹಿತದೃಷ್ಟಿಯನ್ನೇ ಪ್ರಥಮ ಆದ್ಯತೆಯಲ್ಲಿರಿಸಿಕೊಂಡಿರುವ ಒಂದು ಪ್ರಯೋಗ ಸುಳ್ಯದಲ್ಲಿದೆ. ಸುಮಾರು ಐದು ವರ್ಷಗಳ ಹಿಂದೆ ಆರಂಭವಾದ ಸುಳ್ಯದ ವೆಂಕಟ್ರಮಣ ಕ್ರೆಡಿಟ್ ಕೋ ಅಪರೇಟಿವ್ ಬ್ಯಾಂಕ್, ರೈತರ ಹಿತರಕ್ಷಣೆ ಕಾಯ್ದುಕೊಳ್ಳುವ ಪ್ರಾಮಾಣಿಕ ಪ್ರಯತ್ನ ಮಾಡುತ್ತಿರುವುದು ಕಂಡುಬರುತ್ತದೆ. ಇಂತಹ ಪ್ರಯತ್ನಗಳು ಮುಂದುವರಿಯಬೇಕು, ತೀವ್ರಗೊಳ್ಳಬೇಕು, ಮತ್ತು ಎಲ್ಲಾ ಕಡೆ ಪಸರಿಸಬೇಕಾದ ಅನಿವಾರ್ಯತೆ ಇದೆ.



**ಕಲ್ಲೆಂಬಿ ಗೌಡರು ತಮ್ಮ ಕಂಬಳದ ಕೋಣಗಳೊಂದಿಗೆ**



ಗೌಡರ ಕೃಷಿ ತಂತ್ರಶಾಸ್ತ್ರ : ಸುಗ್ಗಿ ಬಿತ್ತನೆಗೆ ಇಟ್ಯೋವು ಸೊಪ್ಪು ಮುಚ್ಚಿ ಮೊಳಕೆ ಬರಿಸುವ ವಿಧಾನ



ಗೌಡರ ಕೃಷಿ ಸಾಧನ ಸಲಕರಣೆಗಳು



ಆಧುನೀಕರಣಗೊಂಡ ನೀರಾವರಿ ಕಟ್ಟ



ಗದ್ದೆಗೋರಿಯಾಗಿ ಸುಗ್ಗಿ ಬಿತ್ತನೆಗೆ ಕಾದಿರುವ ಗದ್ದೆ, ಕಂಬಳದ ಬಳಿಕ ನೆಟ್ಟ ಬಾಳೆ,
ಗದ್ದೆಯ ನಡುವಿನಲ್ಲಿ ಬರೆಯಲಾಗಿರುವ ಕೋಲೆ ಚಿತ್ರ.



ಮಿಗತೆ ನೀರು ಬಸಿಯುವ ನೀರು ಕಣಿ (ಉಜಿರ್ ಕಣಿ)



ಬೀಜ ಬಿತ್ತನೆಗೆ ಮುನ್ನ ಕಂಬಳದ ಮಾರನೇ ದಿನ
ಭೂಮಿಪೂಜೆ. ಜೋಡೆಲೆ ಮೇಲೆ ಅಕ್ಕಿರೊಟ್ಟಿ, ಒಣ
ತೆಂಗಿನಕಾಯಿ ಒಡೆದಿರಿಸಿ ಪ್ರಾರ್ಥಿಸುವುದು



ಗೌಡರ ಪರಂಪರೆಯ ಮನೆ



ಕೃಷಿ ಕುಟುಂಬದ ವಸತಿ ಸಂಕೀರ್ಣ - ಮನೆ, ಹಟ್ಟಿ, ಕೊಟ್ಟಿಗೆ, ತರಕಾರಿ ಚಪ್ಪರಗಳು



ಹೆರೆಮಣೆ, ಅರೆಯುವ ಕಲ್ಲು. ತಾವೇ ತಯಾರಿಸಿದ ಮುಚ್ಚುವ ಕುಕ್ಕೆ



ರಾಗಿ ಪ್ರದೇಶದ ಗೌಡರು ಇಂದೂ ರಾಗಿ ಕಲ್ಲು ಮತ್ತು ಔಷಧಿ ಅರೆಯುವ ಕಲ್ಲನ್ನು ತ್ಯಜಿಸಿಲ್ಲ.

# ದಕ್ಷಿಣ ಕನ್ನಡ ಜಿಲ್ಲೆಯ ಗೌಡರ ಐನ್ ಮನೆಗಳು

ಪೂವಪ್ಪ ಕಣಿಯೂರು

೧

ಒಂದೇ ಅಡುಗೆ ಮನೆಯನ್ನು ಹೊಂದಿರುವ, ಕುಟುಂಬಸ್ಥರು ಕೂಡು ಕುಟುಂಬವಾಗಿ ವಾಸ ಮಾಡುವ ಮನೆಯನ್ನು ಐನ್ ಮನೆಯೆನ್ನಬಹುದು. ವಿಭಕ್ತ ಕುಟುಂಬ ವ್ಯವಸ್ಥೆಯು ಕಲ್ಪನೆ ಬಂದ ಬಳಿಕ ಅವಿಭಕ್ತ ಕುಟುಂಬಗಳು ಕವಲುಗಳಾಗಿ ಒಡೆದುವು. ಸದಸ್ಯರ ಸಂಖ್ಯೆ ಮತ್ತು ಆಸ್ತಿಯ ವಿಸ್ತರಣೆಯೊಂದಿಗೆ ಕೂಡು ಕುಟುಂಬಗಳು ಕವಲುಗಳಾಗಿ ದೂರದ ಊರುಗಳಲ್ಲಿ ನೆಲೆ ನಿಲ್ಲುವುದು ಅನಿವಾರ್ಯವಾಯಿತು. ಆದರೂ ವರ್ಷಾವರ್ತದ ಮತ್ತು ಜೀವನಾವರ್ತದ ಪ್ರತಿಯೊಂದು ಹಬ್ಬ ಹರಿದಿನ, ಆಚರಣೆ ವಿಧಿ ವಿಧಾನಗಳಿಗೆ, ದೈವ - ದೇವರ ನಡಾವಳಿಗಳಿಗೆ, ತಮ್ಮ ಮೂಲಸ್ಥಾನಕ್ಕೆ ಕುಟುಂಬದ ಎಲ್ಲಾ ಸದಸ್ಯರು ಬರುತ್ತಾರೆ. ಹೀಗೆ ಮೂಲದಲ್ಲಿ ಒಂದೇ ಕುಟುಂಬವಾಗಿದ್ದು ಬಳಿಕ ಕವಲಾಗಿ ದೂರದೂರುಗಳಲ್ಲಿ ವಾಸಿಸುತ್ತಿದ್ದರೂ, ತಮ್ಮ ಬದುಕಿನ ಸಾಂಸ್ಕೃತಿಕ ನೆಲೆಗಳನ್ನು ಕಂಡುಕೊಳ್ಳಲು ತಮ್ಮ ಮೂಲಸ್ಥಾನಕ್ಕೆ ಬರುತ್ತಾರೆ. ಇಂತಹ ಮೂಲಸ್ಥಾನವನ್ನು ಜನಪದೀಯವಾಗಿ ಐನ್ ಮನೆಯೆಂದು ಅಥವಾ 'ತರವಾಡು' ಮನೆಯೆಂದು ಕರೆಯುತ್ತಾರೆ.

ಗೌಡರ ಪ್ರತಿಯೊಂದು ಐನ್ ಮನೆಗಳಿಗೆ ಅವುಗಳದ್ದೇ ಆದ ಹಿನ್ನೆಲೆ, ಪರಂಪರೆಗಳಿರುತ್ತವೆ. ಅವರ ಭೌತಿಕ ಬದುಕಿಗೆ ಮುಖ್ಯ ನೆಲೆಯಾಗಿರುವ ಮನೆಗಳ ರಚನಾ ವಿನ್ಯಾಸಗಳು, ಸಾಮಾನ್ಯ ಮನೆಗಳಿಗಿಂತ ಭಿನ್ನವಾಗಿರುತ್ತವೆ. ಇಂತಹ ಐನ್ ಮನೆತನಗಳ ಮನೆಗಳನ್ನು ನಾಲ್ಕು ಸೂತ್ರದ, ನಾಲ್ಕಂಕಣದ ಮನೆಗಳೆಂದು ಗುರುತಿಸುತ್ತಾರೆ. ಐನ್ ಮನೆತನಗಳಲ್ಲಿ ಈ ಮನೆಗಳನ್ನು ಹೊಂದಿರಬೇಕಾಗಿಲ್ಲ. ಕೆಲವು ಐನ್ ಮನೆತನಗಳು ಇಂತಹ ಮನೆಗಳನ್ನು ಹೊಂದಿರುತ್ತವೆ.

''ದಕ್ಷಿಣ ಕನ್ನಡ ಜಿಲ್ಲೆಯ ಗೌಡರ ಐನ್ ಮನೆಗಳು'' ಶೀರ್ಷಿಕೆಯ ಈ ಲೇಖನದಲ್ಲಿ, ಜನಾಂಗಿಕವಾಗಿ ಗೌಡ ಮನೆತನಗಳಿಗೆ ವಿಶಿಷ್ಟವಾಗಿರುವ ನಾಲ್ಕಂಕಣದ ಮನೆಗಳನ್ನು ಅನುಲಕ್ಷಿಸಿ ಚರ್ಚಿಸಲಾಗಿದೆ. ಹಾಗೆಯೇ ತುಳುನಾಡಿನ 'ಸುತ್ತು ಪಟ್ಟಿರೆ' ಮತ್ತು ಬಯಲು ಸೀಮೆಯ 'ತೊಟ್ಟಿ ಮನೆ'ಗಳ ರಚನಾ ವಿನ್ಯಾಸಗಳನ್ನೂ ಈ ನಾಲ್ಕಂಕಣದ ಮನೆಯೊಂದಿಗೆ ಹೋಲಿಸಿ, ಪರಸ್ಪರ ಇರುವ ಸಾಮ್ಯತೆ ಮತ್ತು ವ್ಯತ್ಯಾಸಗಳನ್ನು ಗುರುತಿಸಲಾಗಿದೆ. ಗೌಡರ ಐನ್‌ಮನೆಗಳು ಪ್ರತಿನಿಧಿಸುವ

ಸಾಮಾಜಿಕ, ರಾಜಕೀಯ ಆಡಳಿತಾತ್ಮಕ ಮತ್ತು ಧಾರ್ಮಿಕ ಸ್ಥಾನಮಾನಗಳನ್ನು ಕೂಡ ವಿವೇಚಿಸಲಾಗಿದೆ.

ದ.ಕ. ಜಿಲ್ಲಾ ವ್ಯಾಪ್ತಿಯ ಸುಳ್ಯ, ಪುತ್ತೂರು, ಬೆಳ್ತಂಗಡಿ ತಾಲೂಕುಗಳ ಗೌಡರ ಐನ್ ಮನೆಗಳನ್ನು ಕೇಂದ್ರವಾಗಿರಿಸಿಕೊಂಡು, ಕ್ಷೇತ್ರಕಾರ್ಯದ ಮೂಲಕ ಲಭ್ಯವಾದ ಮಾಹಿತಿಗಳನ್ನು ಆಧರಿಸಿ ಈ ಲೇಖನವನ್ನು ಸಿದ್ಧ ಮಾಡಲಾಗಿದೆ. ಕಾಲದ ಪರಿಮಿತಿಯೊಳಗೆ ತಯಾರು ಮಾಡಿದ ಕಾರಣದಿಂದಾಗಿ ಇದೊಂದು ಪರಿಪೂರ್ಣವಾದ ಅಧ್ಯಯನವಲ್ಲ. ದಕ್ಷಿಣ ಕನ್ನಡ ಗೌಡರ ಐನ್ ಮನೆತನಗಳೆಲ್ಲವನ್ನೂ ಇಲ್ಲಿ ನಮೂದಿಸುವುದು ಸಾಧ್ಯವಾಗಿಲ್ಲ. ತುಳುನಾಡಿನ ಗೌಡರ ಐನ್ ಮನೆಗಳ ಕುರಿತಾದ ವಿಸ್ತೃತ ಸಂಶೋಧನಾತ್ಮಕ ಅಧ್ಯಯನವು ಲೇಖನದ ವ್ಯಾಪ್ತಿಯನ್ನು ಮೀರಿದೆ ಎನ್ನುವುದು ಈ ಲೇಖನದ ಮಿತಿ ಕೂಡ.

ನಾಲ್ಕಂಕಣದ ಐನ್ ಮನೆಗಳು ಸಂಖ್ಯೆಯ ದೃಷ್ಟಿಯಿಂದ ಸುಳ್ಯ ಪರಿಸರದಲ್ಲಿ ಹೆಚ್ಚಾಗಿಯೂ, ಪುತ್ತೂರು ತಾಲೂಕಿನಲ್ಲಿ ವಿರಳವಾಗಿಯೂ, ಬೆಳ್ತಂಗಡಿ ತಾಲೂಕಿನಲ್ಲಿ ಇಲ್ಲವೇ ಇಲ್ಲ ಎನ್ನುವಷ್ಟು ವಿರಳವಾಗಿದೆ. ಆದರೆ ಬೆಳ್ತಂಗಡಿ ತಾಲೂಕಿನಲ್ಲಿ ಗೌಡರಿಗೆ 'ಸುತ್ತು ಪಟ್ಟಿರೆ' ಮನೆಗಳಿರುವುದು ಕಂಡುಬರುತ್ತದೆ. ಈ ಲೇಖನ ಬರಹಕ್ಕೆ ಸುಳ್ಯ ಪರಿಸರದ ಕುಂಚಡ್ಕ, ಕುಡೆಕಲ್ಲು, ಉಳುವಾರು, ದೇರಾಜೆ, ದೋಳ್ಪಾಡಿ, ಬಳ್ಪದ ಎಣ್ಣೆಮಜಲು, ಸಂಪಾಜೆ ಮನೆತನಗಳ ಮನೆಗಳನ್ನೂ, ಹಾಗೆಯೇ ಪುತ್ತೂರು ತಾಲೂಕಿನ ಪಡು ಬಲ್ನಾಡು ಕಟ್ಟೆಮನೆ, ವಿಟ್ಲದ ಕಂಬಳಬೆಟ್ಟು, ಅಮ್ಮೆ ಮನೆತನಗಳ ನಾಲ್ಕಂಕಣದ ಮನೆಗಳನ್ನೂ ಪರಿಗಣಿಸಲಾಗಿದೆ. ಗೌಡರ ನಾಲ್ಕಂಕಣದ ಐನ್ ಮನೆತನಗಳನ್ನು ಮಾತ್ರ ಪರಿಚಯಿಸುವುದು ಇಲ್ಲಿನ ಮುಖ್ಯ ಉದ್ದೇಶ. ಅಧ್ಯಯನದ ಉದ್ದೇಶಕ್ಕೊಂದು ಚೌಕಟ್ಟು ರೂಪಿಸುವ ಕಾರಣಕ್ಕಾಗಿ ಅನುಬಂಧದಲ್ಲಿ ಕೆಲವು ಮುಖ್ಯ ನಾಲ್ಕಂಕಣದ ಐನ್ ಮನೆತನಗಳ ಸ್ಥೂಲ ಪರಿಚಯವನ್ನು ಮಾಡಲಾಗಿದೆ. ಈ ಮನೆತನಗಳ ಪೂರ್ಣ ಪೂರ್ವಾಪರಗಳನ್ನು ದಾಖಲಿಸುವ ಪ್ರಯತ್ನ ಮಾಡಲಾಗಿಲ್ಲವಾದ ಕಾರಣ, ಆ ಮನೆತನಗಳವರ ಎಲ್ಲ ನಿರೀಕ್ಷೆಗಳು ಇಲ್ಲಿ ಈಡೇರಲಾರವು.

೨

ಜಾನಪದ ಅಧ್ಯಯನದಲ್ಲಿ ಭೌತಿಕ ಸಂಸ್ಕೃತಿಯು ಮುಖ್ಯವಾದ ಭಾಗವೇ ಕಟ್ಟಡಗಳ ರಚನೆ ಮತ್ತು ಅವುಗಳ ವಾಸ್ತುಶಿಲ್ಪ. ಜನಪದರ ಕಟ್ಟಡದ ನಿರ್ಮಾಣ ಮತ್ತು ಮರದ ಕೆತ್ತನೆಗಳ ವಿನ್ಯಾಸ 'ವಾಸ್ತುಶಿಲ್ಪ'ದಲ್ಲಿ ಸೇರುತ್ತದೆ. ಜನಪದ ಸಂಸ್ಕೃತಿಯೊಂದರ ಭೌತಿಕ ರಚನೆಗಳನ್ನು ತಿಳಿಯಬೇಕಾದಾಗ, ಆ ರಚನೆಗಳ ಘಟಕಗಳನ್ನು ಒಟ್ಟಾಗಿ ಪರಿಭಾವಿಸಬೇಕಾಗುತ್ತದೆ. ಆಗ ನಿರ್ಮಾಣವೊಂದರ ಭಿನ್ನ ಘಟಕಗಳು ಒಟ್ಟಾಗಿ ರೂಪಿಸುವ ಅಂತರ್ ಸಂಬಂಧವನ್ನು ಸಮಗ್ರವಾಗಿ ಅರ್ಥೈಸಲು ಸಾಧ್ಯ. ಜನಾಂಗವೊಂದರ ಇಲ್ಲವೆ ಪ್ರದೇಶವೊಂದರ ಭೌತಿಕ ಸಂಸ್ಕೃತಿಯನ್ನು ಅರ್ಥೈಸಲು ಈ ಬಗೆಯ ಅರಿವು ಮುಖ್ಯವಾಗುತ್ತದೆ.

ಪ್ರತಿಯೊಂದು ಜನಾಂಗಕ್ಕೂ ತನ್ನದೇ ಆದ ಜನಾಂಗ ದೃಷ್ಟಿ ಮತ್ತು ಲೋಕದೃಷ್ಟಿ ಇರುತ್ತದೆ. ಇದನ್ನು ಅನುಸರಿಸಿಕೊಂಡೇ ಜನಾಂಗವು ತನ್ನ ಭೌತಿಕ ಸಂಸ್ಕೃತಿಯನ್ನು ರೂಪಿಸಿಕೊಳ್ಳುತ್ತದೆ; ಹಾಗೆಯೇ ಮುಂದುವರಿಸುತ್ತದೆ. ಮುಖ್ಯವಾಗಿ ಇಲ್ಲಿ ಆ ಜನವರ್ಗ ಬದುಕುವ ಪ್ರದೇಶ, ಭೌಗೋಳಿಕ ಪರಿಸರ, ಸಸ್ಯವರ್ಗ ಮತ್ತು ಪ್ರಾಣಿವರ್ಗ, ಜನಾಂಗಗಳ ಜೀವನಾವರ್ತನ ಮತ್ತು ವಾರ್ಷಿಕಾವರ್ತನಗಳ ಗತಿಯಲ್ಲಿ ರೂಪುಗೊಳ್ಳುವ ಹುಟ್ಟು - ಮದುವೆ - ಸಾವು, ನಂಬಿಕೆ, ಆಚರಣೆ, ನಡಾವಳಿ ಮತ್ತು ಉತ್ಪಾದನಾ ವಿಧಾನಗಳಿಗೆ ಸಂಬಂಧಿಸಿದಂತೆ, ಕುಲಕಸುಬು ಇವೇ ಮುಂತಾದವು ಭೌತಿಕ ಸಂಸ್ಕೃತಿಯ ವಿನ್ಯಾಸಗಳನ್ನು ರೂಪಿಸುತ್ತವೆ.[೧]

ಮನೆಯೆಂಬುದು ಸಾಮಾನ್ಯ ಕಟ್ಟಡಗಳಿಗಿಂತ ಭಿನ್ನವಾದುದು. ಅದು ವಾಸಿಸಲು ಇರುವ ಜಾಗ ಮಾತ್ರವಲ್ಲ, ಅದು ಒಟ್ಟು ಬದುಕಿಗೆ ಅರ್ಥ ನೀಡುವ ನೆಲೆ. ಮನೆ ವಾಸಿಸುವವರ ಮನೋಧರ್ಮವನ್ನು ಅಭಿವ್ಯಕ್ತಪಡಿಸುವಂತಿರುತ್ತದೆ. ಕುಟುಂಬದ ಒಟ್ಟು ಸಾಂಸ್ಕೃತಿಕ ಸಂಕೀರ್ಣತೆಯನ್ನು ಹೊಂದಿ ಅದರ ನಿರ್ಮಾಣದ ಹಿಂದಿರುವ ಆಲೋಚನಾ ವಿಧಾನವನ್ನು ವ್ಯಕ್ತಪಡಿಸುತ್ತದೆ. ಸಾಮಾಜಿಕವಾಗಿ ರಾಜಕೀಯ - ಆಡಳಿತಾತ್ಮಕ, ಆರ್ಥಿಕವಾಗಿ, ಧಾರ್ಮಿಕವಾಗಿ ಪಡೆದುಕೊಂಡಿರುವ ಸ್ಥಾನಮಾನದ ನೆಲೆಗಟ್ಟುಗಳನ್ನು ಪ್ರತಿನಿಧಿಸುವಂತಿರುತ್ತದೆ.

ಮನುಷ್ಯರು ವಾಸಿಸುವ ಕಟ್ಟಡವನ್ನು ಮಾತ್ರ ಮನೆಯೆನ್ನಲಾಗದು. ಅವರ ಬದುಕಿಗೆ ಅನಿವಾರ್ಯ ಅಗತ್ಯಗಳಾಗಿರುವ ಕೊಟ್ಟಿಗೆ, ಹಟ್ಟಿಗಳು, ಭೂತಸ್ಥಾನ, ಮಾಡ, ಗುಡಿಗಳಿಂದೊಡಗೂಡಿದ ಒಟ್ಟು ಆವರಣ ಮನೆಯೆಂದು ಕರೆಯಿಸಿಕೊಳ್ಳುತ್ತದೆ. ಅಂಗಳದ ತುಳಸಿ ಕಟ್ಟೆಯಿಂದ ಜಗಲಿಗೆ, ಜಗಲಿಯಿಂದ ಅಡುಗೆ ಮನೆಗೆ, ಅಡುಗೆ ಮನೆಯಿಂದ ದೈವದ ಮನೆಗೆ, ಆಚರಣೆಗಳ ಹಿನ್ನೆಲೆಯಲ್ಲಿ ನೇರ ಸಂಬಂಧವೇರ್ಪಡುತ್ತದೆ. ಈ ಹಿನ್ನೆಲೆಯಲ್ಲಿ ಮನೆಯ ಆವರಣದ ಮಹತ್ವವೇನೆಂದು ಸ್ಪಷ್ಟವಾಗುತ್ತದೆ.

ಮನೆಯೊಂದನ್ನು ನಿರ್ಮಾಣ ಮಾಡುವ ಮೊದಲೇ ಯಾವ ರೀತಿ ಅದನ್ನು ನಿರ್ಮಾಣ ಮಾಡಬೇಕೆಂದು ನಿರ್ಧರಿಸುತ್ತಾರೆ. ಮನೆಯ ಯಾವ ದಿಕ್ಕಿನಲ್ಲಿ ಹಟ್ಟಿ ಇರಬೇಕು, ಬಾವಿ ಯಾವ ದಿಕ್ಕಿನಲ್ಲಿ ತೋಡಬೇಕು, ಕೊಟ್ಟಿಗೆಯನ್ನು ಯಾವ ಭಾಗದಲ್ಲಿ ಕಟ್ಟಿದರೆ ಉಪಯೋಗದ ದೃಷ್ಟಿಯಿಂದ ಅನುಕೂಲ, ಮನೆಯ ಬಾಗಿಲು ಯಾವ ದಿಕ್ಕಿಗಿರಬೇಕು, ಮನೆಯ 'ಕನ್ನಿಮೂಲೆ' ಆಗ್ನೇಯಕ್ಕೇ ಇರಬೇಕು, ಭೂತ - ದೇವರುಗಳ ಆರಾಧನಾ ನೆಲೆಗಳು ಯಾವ ಭಾಗದಲ್ಲಿರಬೇಕು ಎಂಬಿತ್ಯಾದಿ ನಿರ್ಣಯಗಳನ್ನು ತೆಗೆದುಕೊಳ್ಳುತ್ತಾರೆ. ಹೀಗೆ ಮನೆಯೊಂದನ್ನು ರೂಪಿಸಿಕೊಳ್ಳುವ ಜನಪದರು ಅದು ಸುಂದರವಾಗಿಯೂ, ಅತ್ಯಂತ ಕಲಾತ್ಮಕವಾಗಿರಬೇಕೆಂದು ಸಹಜವಾಗಿಯೇ ಕಲ್ಪಿಸಿಕೊಳ್ಳುತ್ತಾರೆ.

ಭೌಗೋಳಿಕವಾಗಿ ತುಳುನಾಡನ್ನು ಒಂದು ಸಾಂಸ್ಕೃತಿಕ ಘಟಕವೆಂದು ಪರಿಗಣಿಸಿ ಇಲ್ಲಿನ ಮನೆಗಳ ರಾಚನಿಕ ಸ್ವರೂಪಗಳನ್ನು ಗಮನಿಸಿದಾಗ ಭಿನ್ನ ರೂಪದ ಮನೆಗಳು ಕಂಡುಬರುತ್ತವೆ. ಕೋಣೆಗಳ ಸಂಖ್ಯಾ ದೃಷ್ಟಿಯಿಂದ ಮತ್ತು ರಚನಾ ವಿನ್ಯಾಸದಿಂದ ಒಂದು ಸೀಲಿನ ಮನೆಗಳು, ಎರಡು ಸೀಲಿನ ಮನೆಗಳು, ಸುತ್ತು ಪಡ್ಪಿರೆಯ ಗುತ್ತು ಮನೆಗಳು, ಗೌಡರ ನಾಲ್ಕಂಕಣದ ಜಪ್ ಮನೆಗಳೆಂದು

ವರ್ಗೀಕರಿಸಬಹುದು. ನಾಲ್ಕಂಕಣದ ಐನ್ ಮನೆಗಳು ಗೌಡ ಜನಾಂಗಕ್ಕೆ ಸೀಮಿತವಾಗಿವೆ. ಉಳಿದಂತೆ ಮಿಕ್ಕ ರೀತಿಯ ಮನೆಗಳು ಎಲ್ಲಾ ಜನಾಂಗಗಳಿಗೂ ಇರಬಹುದು. ಯಾವುದೇ ರೀತಿಯ ಮನೆಗಳ ನಿರ್ಮಾಣದಲ್ಲೂ, ಜಾತಿ, ವೃತ್ತಿ, ಧಾರ್ಮಿಕಾಂಶಗಳು, ಪ್ರಾಕೃತಿಕ ಸಂಗತಿಗಳು ದಟ್ಟವಾದ ಪ್ರಭಾವವನ್ನು ಬೀರುತ್ತವೆ.

೩

ಗೌಡರ ನಾಲ್ಕಂಕಣದ ಐನ್ ಮನೆಗಳನ್ನು ಗಮನಿಸಿದಾಗ ಅವುಗಳು ರಾಚನಿಕವಾಗಿ ತುಳುನಾಡಿನ ಗುತ್ತು - 'ಸುತ್ತು ಪಡ್ಸಿರೆ' ಮತ್ತು ಬಯಲುಸೀಮೆಯ 'ತೊಟ್ಟಿ ಮನೆ'ಗಳ ವಿನ್ಯಾಸಗಳನ್ನು ಹೊರ ನೋಟಕ್ಕೆ ಹೋಲುತ್ತವೆ. ಆದರೆ ಅವುಗಳೊಳಗೆ ಸ್ಪಷ್ಟವಾದ ವ್ಯತ್ಯಾಸಗಳಿವೆ. ಗೌಡರ ನಾಲ್ಕಂಕಣದ ಐನ್ ಮನೆಗಳ ವೈಶಿಷ್ಟ್ಯವನ್ನು ಹೇಳಬೇಕಾದರೆ 'ಸುತ್ತು ಪಡ್ಸಿರೆ' ಮತ್ತು 'ತೊಟ್ಟಿ ಮನೆ'ಗಳ ವಿನ್ಯಾಸಗಳನ್ನು ಸ್ಥೂಲವಾಗಿ ತಿಳಿದುಕೊಳ್ಳುವುದು ಅವಶ್ಯವೆನ್ನುವ ದೃಷ್ಟಿಯಿಂದ ಅವುಗಳನ್ನು ಇಲ್ಲಿ ಮೊದಲಿಗೆ ಪರಿಚಯಿಸಲಾಗಿದೆ.

## ಸುತ್ತು ಪಡ್ಸಿರೆ

ರೇಖಾಚಿತ್ರ ೧ರಲ್ಲಿ ತೋರಿಸಿರುವಂತೆ 'ಸುತ್ತು ಪಡ್ಸಿರೆ' ಮನೆಯ ಸಾಮಾನ್ಯ ರಚನೆ ಹೀಗೆ ಇರುತ್ತದೆ. ತುಳುನಾಡಿನ 'ಸುತ್ತು ಪಡ್ಸಿರೆ' ಮನೆಗಳು ಅರಮನೆಗಳ ಸರಳ ರೂಪದಂತಿದ್ದು, ನಾಲ್ಕು ದಿಕ್ಕುಗಳಿಗೂ ಮನೆಯು ವಿವಿಧ ಘಟಕಗಳಿಂದ ಆವೃತವಾಗಿ ಮಧ್ಯದಲ್ಲಿ ವಿಶಾಲವಾದ ಅಂಗಳವನ್ನು ಹೊಂದಿರುತ್ತದೆ. ಇದು ಈ ಮನೆಗಳ ಸಾಮಾನ್ಯ ಲಕ್ಷಣ. ಉಳಿದಂತೆ 'ಸುತ್ತು ಪಡ್ಸಿರೆ' ಮನೆಗಳಲ್ಲಿ ಭಿನ್ನತೆಗಳಿರುತ್ತವೆ. ಮನೆಗೆ ಇರುವ ಮುಖ್ಯ ದ್ವಾರವನ್ನು 'ಪಡ್ಸಿರೆ ಬಾಗಿಲು' ಎಂದು ಕರೆಯುತ್ತಾರೆ. ಇದು ಒಳ ಹೊರಗೆ ಹೋಗಿ ಬರಲು ಪ್ರಧಾನ ದ್ವಾರ. ಇದರ ಮೂಲಕ ನೇರ ಅಂಗಳಕ್ಕೆ ಪ್ರವೇಶವಾಗುತ್ತದೆ. ಎಡಭಾಗದಲ್ಲಿ ಜಗಲಿಯನ್ನು ಪ್ರವೇಶಿಸಿದಂತೆ ಊಟದ ಕೋಣೆ. ಇದನ್ನು ಹೊಂದಿಕೊಂಡಂತೆ ಅಡುಗೆ ಮನೆ. ಅಡುಗೆ ಮನೆಯ ಪಕ್ಕದಲ್ಲಿ ಜಗಲಿಯಿಂದಲೇ ಮಾಳಿಗೆಗೆ ಹೋಗುವ ದಾರಿ. ದಕ್ಷಿಣದ ಕಡೆಯಿಂದ ಬಲಕ್ಕೆ ತಿರುಗಿದರೆ ಕೋಣೆಗಳು, ಕೋಣೆಗಳ ಮಧ್ಯದಲ್ಲಿ ದಕ್ಷಿಣಕ್ಕೆ ಹೊರಬಾಗಿಲು ಇರುತ್ತದೆ. ಕೋಣೆಗಳನ್ನು ಹೊಂದಿಕೊಂಡಂತೆ ಪೂರ್ವಾಭಿಮುಖವಾಗಿ ಮನೆಯ ಪ್ರಧಾನ ಚಾವಡಿ ಇರುತ್ತದೆ. ಚಾವಡಿಯ ಪಕ್ಕದಲ್ಲಿ ಭೂತದ ಚಾವಡಿ ಇರುತ್ತದೆ. ಮುಖ್ಯ ಚಾವಡಿಯಿಂದ ಭೂತದ ಚಾವಡಿಗೆ ಬಾಗಿಲು ಇರುತ್ತದೆ. ಇದು ಭೂತದ ಭಂಡಾರ ಇರುವ ಸ್ಥಾನ. ಅಂಗಳದಿಂದ ಜಗಲಿಗೆ ತಾಗಿದಂತೆ ಅರ್ಧ ಗೋಡೆ - ಅದಕ್ಕೆ ಮರದ ದರಿಯ ಕಿಟಕಿಗಳು. ಅಂಗಳದಿಂದ ಸುಮಾರು ಮೂರು ಅಡಿಯಷ್ಟು ಎತ್ತರದಲ್ಲಿರುವ ಚಾವಡಿಯಿಂದಲೇ ಮನೆಯ ನಿಜವಾದ ಆರಂಭ.

ಭೂತದ ಕೋಣೆ
ಚಾವಡಿ
ಮಾಳಿಗೆಗೆ
ಹೊರಗೆ ಬಾಗಿಲು
ಕೋಣೆ - ೩
ಜಗಲಿ
ಹೊರಗೆ ಬಾಗಿಲು
ಕೋಣೆ - ೨
ಹೊರಗೆ ಬಾಗಿಲು
ವಿಸ್ತಾರವಾದ ಅಂಗಳ
ಕೃಷಿ ಸಂಬಂಧಿ ಕೆಲಸ ಕಾರ್ಯಗಳ ಕೊಟ್ಟಿಗೆ
ಜಗಲಿ
1 ಬಾವಿ
ಕೋಣೆ - ೧
ಜಗಲಿ
ಸ್ನಾನದ ಮನೆ
ಮಾಳಿಗೆಗೆ
ಅಡುಗೆ ಕೋಣೆ
ಊಟದ ಕೋಣೆ
ದಾಸ್ತಾನು ಕೋಣೆ
ಪ
ದ
ಉ
ಪೂ

ರೇಖಾಚಿತ್ರ - ೧ ಸುತ್ತು ಪಟ್ಟಿರೆ ಮನೆಯ ಸಾಮಾನ್ಯ ರಚನೆ

ಚಾವಡಿ ಜಗಲಿ ಹತ್ತುವ ಮುನ್ನವೇ 'ಚಾವಡಿ ಮೊಂಟಮೆ' (ಮೊಗಸಾಲೆ) ಇರುತ್ತದೆ. ಜಗಲಿ ಮತ್ತು ಚಾವಡಿಯ ಮಧ್ಯೆ ಸುಮಾರು ಅರ್ಧದಿಂದ ಒಂದು ಅಡಿಯಷ್ಟು ಎತ್ತರದ ಚಿಟ್ಟೆಯ ಮೇಲೆ ಮರದ ಹಲಗೆಯನ್ನು ಹಾಸಿರುತ್ತದೆ. ಇದರ ಮೇಲೆ ಸುಮಾರು ನಾಲ್ಕು 'ಬೋದಿಗೆ'ಯ ಕಂಬಗಳಿರುತ್ತವೆ. ಈ ಕಂಬಗಳು ಕೆತ್ತನೆಯ ಕೆಲಸದಿಂದ (ಕಾಷ್ಠ ಶಿಲ್ಪ) ಕೂಡಿರುತ್ತದೆ. ಚಾವಡಿಯಲ್ಲಿ ತೂಗುಯ್ಯಾಲೆ ಇದ್ದು ಇದರಲ್ಲಿ ಭೂತದ ಮೊಗ, ಕಡ್ತಲೆ ಇತ್ಯಾದಿ ಪರಿಕರಗಳನ್ನು ಇಟ್ಟಿರುತ್ತದೆ. ಚಾವಡಿಯೇ ಮನೆಯ ಪ್ರಧಾನ ಕಾರ್ಯಸ್ಥಾನ. ವರ್ಗ ಮತ್ತು ವರ್ಣ ವ್ಯವಸ್ಥೆಯ ಪಳೆಯುಳಿಕೆಯಾಗಿ ಎಲ್ಲಾ ವರ್ಗದ ಜನರು ಈ ಚಾವಡಿಗೆ ಹತ್ತುವಂತಿಲ್ಲ. ಊರಿನ ನ್ಯಾಯ ತೀರ್ಮಾನದ ಈ ಚಾವಡಿಯಲ್ಲಿ ದೈವದ ಹೆಸರಿನಲ್ಲಿ ನಡೆಯುತ್ತದೆ. ಚಾವಡಿಯಿಂದ ಮಾಳಿಗೆಗೆ ಹೋಗುವ ದಾರಿ ಇರುತ್ತದೆ. ಚಾವಡಿಯನ್ನು ಹೊಂದಿಕೊಂಡಂತೆ ಪಶ್ಚಿಮದ ಕಡೆ ಹೊರಬಾಗಿಲು ಇರುತ್ತದೆ. ಮನೆಯ ಉತ್ತರ ಭಾಗದ ಘಟಕಗಳು ಕೃಷಿ ಸಂಬಂಧಿ ಕೆಲಸ ಕಾರ್ಯಗಳಿಗೆ ಕೊಟ್ಟಿಗೆಯಾಗಿರುತ್ತವೆ. ಪಡ್ಚಿರೆ ಬಾಗಿಲಿನ ಬಲ ಪಕ್ಕದಲ್ಲಿ ದಾಸ್ತಾನು ಕೋಣೆ ಇರುತ್ತದೆ. ಇವುಗಳಿಗೆ ಅಂಗಳದಿಂದಲೇ ನೇರ ಪ್ರವೇಶವಿರುತ್ತದೆ. ಜಗಲಿ ಇರುವುದಿಲ್ಲ. ಅಂಗಳದಲ್ಲಿ ಬಾವಿ ಇದ್ದು ಸ್ನಾನದ ಮನೆ, ಜಾನುವಾರುಗಳ ಹಟ್ಟಿಗಳು ಹೊರಭಾಗದಲ್ಲಿರುತ್ತವೆ.

## ತೊಟ್ಟಿ ಮನೆ

ಬಯಲು ಸೀಮೆಯ 'ತೊಟ್ಟಿ ಮನೆ'ಗಳು ಸುತ್ತು ಪಡ್ಚಿರೆ ಮನೆಗಳಂತೆ ನಾಲ್ಕು ದಿಕ್ಕುಗಳಿಂದಲೂ ಆವೃತವಾಗಿ ಮಧ್ಯದಲ್ಲಿ ಸಣ್ಣ ಅಂಗಳದಂತಿರುತ್ತದೆ. ಇದನ್ನು ಬಯಲು ಸೀಮೆ ಜನಪದರು 'ತೊಟ್ಟಿ'ಯೆಂದು ಕರೆದು ಮನೆಯನ್ನು ಆ ಹೆಸರಿನಿಂದಲೇ ಕರೆಯುತ್ತಾರೆ. ಸುತ್ತು ಪಡ್ಚಿರೆಯ ಗಾತ್ರ ಮತ್ತು ಘಟಕಗಳ ವಿನ್ಯಾಸಗಳು ತೊಟ್ಟಿ ಮನೆಗಳಿಗಿರುವುದಿಲ್ಲ. ತೊಟ್ಟಿ ಮನೆಗೆ ಮುಂಭಾಗದಲ್ಲಿ ಮಾತ್ರ ಪ್ರವೇಶ ದ್ವಾರವಿರುತ್ತದೆ. ಅದರ ಮೂಲಕವೇ ತೊಟ್ಟಿಗೆ ಪ್ರವೇಶ. ಈ ದ್ವಾರದ ಹೊರ ಮುಖದ ಎಡಭಾಗದಲ್ಲಿ ಜಗಲಿ ಇದ್ದು, ಜಾನುವಾರುಗಳ ಮೇವನ್ನು ಶೇಖರಿಸಿಡಲು ಉಪಯೋಗವಾಗುತ್ತದೆ. ಬಲಪಕ್ಕದಲ್ಲಿರುವ ಸ್ಥಳವನ್ನು ಪಡಸಾಲೆಯೆನ್ನುತ್ತಾರೆ. ಮನೆಯ ಒಳಭಾಗದ ತೊಟ್ಟಿಯ ಎಡಭಾಗದಲ್ಲಿ ಜಾನುವಾರುಗಳನ್ನು ಕಟ್ಟುತ್ತಾರೆ. ಬಲಭಾಗದಲ್ಲಿ ಕೋಣೆಗಳಿರುತ್ತವೆ. ದ್ವಾರಕ್ಕೆ ಅಭಿಮುಖವಾಗಿ 'ನಡುಮನೆ' (ಚಾವಡಿ) ಇರುತ್ತದೆ. ಇದನ್ನು ಹೊಂದಿಕೊಂಡಂತೆ ಅಡುಗೆ ಮನೆ, ಊಟದ ಮನೆಗಳಿರುತ್ತವೆ. ನಡುಮನೆಯ ಮೇಲ್ಭಾಗದಲ್ಲಿ ಮಾಳಿಗೆ ಇರುತ್ತದೆ. ಅದಕ್ಕೆ ನಡುಮನೆಯಿಂದ ಮೆಟ್ಟಿಲು ದಾರಿ ಇರುತ್ತದೆ. ಮನೆ ಮಾಡಿನ ನಾಲ್ಕು ಮೂಲೆಗಳಿಂದಲೂ ತೊಟ್ಟಿಗೆ ಬೀಳುವ ನೀರು ಒಳ ಸುರಂಗದ ಮೂಲಕ ಹೊರ ಹೋಗುತ್ತದೆ. ಜಾನುವಾರುಗಳಲ್ಲಿ ದೈವತ್ವವನ್ನು ಕಾಣುವ ಜನಪದರು, ನಡುಮನೆಗೆ ಅವುಗಳು ಕಾಣುವಂತೆ ಕಟ್ಟುತ್ತಾರೆ. ಮನುಷ್ಯ ಮತ್ತು ಪ್ರಾಣಿ ವರ್ಗಕ್ಕಿರುವ ಸಾವಯವ ಸಾಂಸ್ಕೃತಿಕ ಆಪ್ತತೆಯನ್ನು ಈ ಮೂಲಕ ಪ್ರತಿನಿಧೀಕರಿಸುತ್ತಾರೆ.




ರೇಖಾಚಿತ್ರ ೨. ಗೌಡರ ಹಳೆಮನೆಯ ಒಂದು ಸಾಮಾನ್ಯ ರಚನೆ

ಕೋಣೆ - ೩
ವಿಷ್ಣುಮೂರ್ತಿ
ಉಳ್ಳಾಕುಲು

ಹೊರ ದಾರಿ

ಕತ್ತಲೆ ಕೋಣೆ - ೪

ಕೋಣೆ - ೫
ಪಾಷಾಣ
ಮೂರ್ತಿ

ಕಿಸ್ಕಿ
ಕಂಬ

ಲಕ್ಷ್ಮಿ ದ್ವಿಪ
ಅಡುಗೆ ಮನೆ ಅಥವಾ
ತೊಂಬರ

ಹೊರ ದಾರಿ

ಕೋಣೆ - ೨
ಧರ್ಮ ದೈವ -
ರುದ್ರ -
ಚಾಮುಂಡಿ

ಒಳಾಂಕಣ

ಒಳಾಂಕಣ

ಅಂಕಣ

ಒಳಾಂಕಣ

ಒಳಾಂಕಣ

ಊಟದ ಕೋಣೆ
ಅಥವಾ
ಉಂಬೋಳಗೆ

ಕೋಣೆ - ೧
ಕುಲದೈವ- ಮಹಾ
ಲಕ್ಷ್ಮಿ ಮನೆದೈವ
- ಮುಡಿಪು

ಚಾವಡಿ - ಕಾರ್ಯಸ್ಥಾನ

ಸರಕಿನ ಕೋಣೆ
ಅಥವಾ
ವ್ಯವಹಾರ ಕೋಣೆ

ಜಗಲಿ

ನ್ಯಾಯ ಕಟ್ಟೆ




ರೇಖಾಚಿತ್ರ - ೩ ಗೌಡರ ಐನ್ ಮನೆಯ ಸಾಮಾನ್ಯ ರಚನೆ

ಕಂಬಗಳ ಸಂಖ್ಯೆಯ ಮೇಲೆ ಈ ತೊಟ್ಟಿ ಮನೆಗಳ ಗಾತ್ರ ಮತ್ತು ಅವುಗಳ ಸ್ಥಾನಮಾನಗಳನ್ನು ಪರಿಗಣಿಸುತ್ತಾರೆ. ಮನೆಯ ವಿಸ್ತಾರವನ್ನು ಕಂಬಗಳ ಲೆಕ್ಕದಲ್ಲಿ ನಾಲ್ಕು, ಎಂಟು, ಹನ್ನೆರಡು, ಹದಿನಾರು ಕಂಬಗಳ ಮನೆಗಳೆಂದು ಗುರುತಿಸುತ್ತಾರೆ. ನಾಲ್ಕು ಕಂಬಗಳ ಮನೆ ಸಾಮಾನ್ಯ ಮನೆಗಳಾದರೆ, ಹನ್ನೆರಡು, ಹದಿನಾರು ಕಂಬದ ಮನೆಗಳು ಊರಿನ ಮುಖ್ಯಸ್ಥರ, ಪಟೇಲರ ಮನೆಗಳನ್ನು ಪ್ರತಿನಿಧಿಸುತ್ತವೆ. ತೊಟ್ಟಿ ಮನೆಗಳು ಉಪಯೋಗದ ದೃಷ್ಟಿ, ಗಾಳಿ ಬೆಳಕುಗಳ ವ್ಯವಸ್ಥೆ ಗಳಿಗಾಗಿ ಮುಖ್ಯವಾಗಿವೆ. ತುಳುನಾಡಿನ ಮನೆಗಳಂತೆ ಆರಾಧನಾ ಆವರಣವನ್ನು ಹೊಂದಿರುವುದಿಲ್ಲ. ಪ್ರಾದೇಶಿಕವಾದ ಭಿನ್ನತೆಗಳು ಸಹಜವಾಗಿ ಗೋಚರಿಸುತ್ತವೆ.

## ಐನ್ ಮನೆ

ಗೌಡರ ನಾಲ್ಕಂಕಣದ ಐನ್ ಮನೆಗಳು ಗುತ್ತು ಮನೆಗಳೆಂದು, ಗೌರವದ ಮನೆತನಗಳೆಂದು ಗುರುತಿಸಿಕೊಂಡಿವೆ. ಎರಡು, ಮೂರು ಊರುಗಳನ್ನು ಹೊಂದಿಕೊಂಡಂತೆ ಮುಖ್ಯ ಮನೆಗಳಾಗಿ ಇವು ಕಂಡುಬರುತ್ತವೆ.

ಸುಮಾರು ಮೂರು ಅಡಿಗಳಷ್ಟು ಎತ್ತರದ ತಳಪಾಯ (ಪಂಚಾಂಗ)ದಲ್ಲಿ ಮನೆ ರಚನೆಯಾಗುತ್ತದೆ. ನಾಲ್ಕಂಕಣದ ಮನೆಗಳ ಮುಖ್ಯ ಬಾಗಿಲು ಪೂರ್ವ ದಿಕ್ಕಿಗೆ ಇರುವುದು ವಿಶೇಷವಾಗಿ ಕಂಡುಬರುತ್ತದೆ. ಅಂಗಳದಿಂದ ಜಗಲಿಯನ್ನೇರಲು ಮೂರು ಮೆಟ್ಟಿಲುಗಳಿರುತ್ತವೆ. ಕೆಲವು ಮನೆಗಳಲ್ಲಿ ಮೆಟ್ಟಿಲು ಹತ್ತುವ ಮೊದಲು ಮೊಗಸಾಲೆ ಇರುತ್ತದೆ. ಸುಮಾರು ಮೂರು ಅಡಿ ಅಗಲದ ಜಗಲಿಯಿಂದ ನಾಲ್ಕಂಕಣದ ಐನ್‌ಮನೆಯ ಆರಂಭವಾಗುತ್ತದೆ. ಜಗಲಿ ಗೌಡರ ವಾಸ್ತುವಿನ ಮೂಲ ಘಟಕಗಳಲ್ಲಿ ಒಂದಾಗಿದೆ. ಈ ಜಗಲಿ ಸಂಸ್ಕೃತಿಯ ಅಂತರಂಗ ಮತ್ತು ಬಹಿರಂಗಗಳ ಮಧ್ಯದ, ಅವೆರಡರ ಸಂಬಂಧ ಕಲ್ಪಿಸಲು ಸಹಾಯಕವಾಗುವ ಸ್ಥಳ (ಡಾ. ಬಿಳಿಮಲೆ ೧೯೯೦, ಪುಟ ೧೦೪, **ಕರಾವಳಿ ಜಾನಪದ**). ಜಗಲಿಗೂ ಚಾವಡಿಗೂ ಮಧ್ಯೆ ಸುಮಾರು ಅರ್ಧ ಅಡಿಯಿಂದ ಒಂದು ಅಡಿಯಷ್ಟು ಎತ್ತರದ ತಿಟ್ಟೆ ಇರುತ್ತದೆ. ಇದನ್ನು ಮರದ ಹಲಗೆಯಿಂದ ಹಾಸಿ, ಅದರ ಮೇಲೆ ಕೆತ್ತನೆ ಕೆಲಸದ (ಕಾಷ್ಠ ಶಿಲ್ಪ) 'ಬೋದಿಗೆಯ ಕಂಬ'ಗಳಿರುತ್ತವೆ. ಒಟ್ಟಾಗಿ ಈ ಸ್ಥಳ ಭಾಗವನ್ನು ಸುಳ್ಯ ಪರಿಸರದ ಅರೆಭಾಷಿಕ ಗೌಡರು 'ಐಮರ'ವೆಂದೂ ತುಳು ಭಾಷಿಕ ಗೌಡರು 'ಬಾಜಿರ'ವೆಂದೂ ಕರೆಯುತ್ತಾರೆ. ಇದು ಮನೆಗೆ ಬಂದು ಹೋಗುವವರಿಗೆ ಕುಳಿತುಕೊಳ್ಳಲು ಆಸನವಾಗಿಯೂ ಉಪಯೋಗವಾಗುತ್ತದೆ. ಜಗಲಿಯ ಬಲಭಾಗದಲ್ಲಿ 'ನ್ಯಾಯ ಕಟ್ಟೆ' ಇರುತ್ತದೆ. ಇಲ್ಲಿ ಊರಿನ ನ್ಯಾಯ ತೀರ್ಮಾನಗಳನ್ನು ದೈವದ ಪ್ರತಿನಿಧಿಯಾಗಿ ಮನೆಯ 'ಕರ್ತ' (ಯಜಮಾನ) ಮಾಡುತ್ತಾನೆ. ಈ ಕಟ್ಟೆಯನ್ನು ಮನೆಯ ಯಜಮಾನ ಮಾತ್ರ ಉಪಯೋಗಿಸಬಹುದು. ಮನೆಯ ಎಡಭಾಗದ, ಪೂರ್ವಾಗ್ನೇಯ ಭಾಗದಲ್ಲಿ ಧರ್ಮದೈವದ 'ಮಾಡ'ವಿರುತ್ತದೆ. ಇದಕ್ಕೆ ಜಗಲಿಯಿಂದ ಬಾಗಿಲಿರುತ್ತದೆ.

ಜಗಲಿ ಮತ್ತು ಐಮರವನ್ನು ಹೊಂದಿಕೊಂಡು ಮನೆಯ ಮುಖ್ಯ ಘಟಕ ಚಾವಡಿ ಇದೆ. ಐನ್ ಮನೆಯ ಪ್ರಧಾನ ಕಾರ್ಯಸ್ಥಾನ ಚಾವಡಿ. ಚಾವಡಿಯ ಗೋಡೆಗೆ, ದೈವ ದೇವರುಗಳ, ಹಿರಿಯರ

ಛಾಯಚಿತ್ರಗಳನ್ನು ನೇತು ಹಾಕಿರುತ್ತಾರೆ. ಅಲಂಕಾರದ ಕೆತ್ತನೆಯ ವಿನ್ಯಾಸಗಳಿರುತ್ತವೆ. ಪೀಠೋಪಕರಣ ಗಳಿರುತ್ತವೆ. ಚಾವಡಿ ಮೇಲ್ಭಾಗದಲ್ಲಿ ಮಾಳಿಗೆ ಇದ್ದರೆ ಜಗಲಿಯಿಂದಲೇ ಮೇಲೇರಲು ದಾರಿ ಯಿರುತ್ತದೆ. 'ನ್ಯಾಯ ಕಟ್ಟೆ' ಇಲ್ಲದ ಮನೆಯಲ್ಲಿ ನ್ಯಾಯ ತೀರ್ಮಾನಗಳು ಈ ಚಾವಡಿಯಲ್ಲಿಯೇ ನಡೆಯುತ್ತವೆ. ಸೂತಕದ ಜನರು ಈ ಚಾವಡಿಯನ್ನು ಪ್ರವೇಶಿಸುವಂತಿಲ್ಲ.

ಚಾವಡಿಯಿಂದ ಒಳಾಂಗಣಕ್ಕೆ, ಗಾತ್ರದಲ್ಲಿ ಕಿರಿದಾದ ಮತ್ತು ಅತ್ಯಂತ ಸೂಕ್ಷ್ಮವಾದ ಕಲಾತ್ಮಕ ಕೆತ್ತನೆಯ ಬಾಗಿಲು ಇರುತ್ತದೆ. ಇದು ಚಾವಡಿಯ ಬಲಭಾಗದ ಕೊನೆಯನ್ನು ಹೊಂದಿಕೊಂಡಂತೆ ಇರುತ್ತದೆ. ಒಳಾಂಕಣಕ್ಕೆ ಹೊಂದಿಕೊಂಡ ಚಾವಡಿಯ ಗೋಡೆಯಲ್ಲಿ ಕಿಟಕಿಗಳಿರುತ್ತವೆ. ಅವು ಒಳಾಂಕಣದಲ್ಲಿ ನಡೆಯುವ ಯಾವ ಚಟುವಟಿಕೆಗಳೂ ಕಾಣದಂತೆ ಸದಾ ಮುಚ್ಚಿರುತ್ತವೆ. ಚಾವಡಿಯ ತಳಮಟ್ಟ ಮನೆಯ ಉಳಿದ ಎಲ್ಲಾ ಘಟಕಗಳ ತಳಮಟ್ಟವನ್ನು ಸಮಾನವಾಗಿ ಕಾಯ್ದುಕೊಂಡಂತೆ ರಚನೆಯಾಗಿರುತ್ತದೆ. ಚಾವಡಿಯಿಂದ ಅರ್ಧ ಅಡಿಯಷ್ಟು ಕೆಳಗೆ ಒಳಾಂಕಣವಿರುತ್ತದೆ. ಇದು ಸುಮಾರು ನಾಲ್ಕರಿಂದ ಆರು ಅಡಿಗಳಷ್ಟು ಅಗಲದ ಜಗಲಿಯಾಗಿದ್ದು, ಇದನ್ನು ಒಳಾಂಕಣವೆಂದು ಕರೆಯುತ್ತಾರೆ.

ಚಾವಡಿಯಿಂದ ಒಳಾಂಕಣಕ್ಕೆ ಬಂದು ಬಲ ಭಾಗದ ಕಡೆ ತಿರುಗಿದರೆ ಕುಲ ದೈವದ ಕೋಣೆ ಇರುತ್ತದೆ. ಇಲ್ಲಿ 'ಮುಡಿಪು' ಇರುತ್ತದೆ. ಹರಿ ಸೇವೆ ಇತ್ಯಾದಿ ಕುಲದೇವರ ಆರಾಧನೆ ನಡೆಯುತ್ತದೆ. ಇದರ ಪಕ್ಕದಲ್ಲಿ ಇರುವ ಕೋಣೆಯಲ್ಲಿ ಇತರ ದೈವಗಳಾದ ಉಲ್ಲಾಕುಳು, ವಿಷ್ಣುಮೂರ್ತಿ ದೈವಗಳ ಭಂಡಾರವಿರುತ್ತದೆ. (ಕೆಲವು ಮನೆಗಳಲ್ಲಿ ದೈವಗಳ 'ಮಾಡ'ಗಳು ಮನೆಯ ಹೊರಭಾಗದ ಆವರಣದಲ್ಲಿ ಇರುತ್ತವೆ). ಈ ಕೋಣೆಯ ಪಕ್ಕದಲ್ಲಿ ಪಶ್ಚಿಮದ ಕಡೆಗೆ ಹೊರಬಾಗಿಲು ಇರುತ್ತದೆ. ಬಾಗಿಲಿನ ಪಕ್ಕದಲ್ಲಿ ಕತ್ತಲೆ ಕೋಣೆ ಇರುತ್ತದೆ. ಈ ಕೋಣೆಗೆ ಕಿಟಕಿಗಳಿರುವುದಿಲ್ಲ. ಮನೆಯಲ್ಲಿ ಹೆಚ್ಚು ಗೌಪ್ಯವಾಗಿರುವ ಕೋಣೆ ಇದಾಗಿರುತ್ತದೆ. ಮನೆಗಳಲ್ಲಿ ಇಂತಹ ಕತ್ತಲೆ ಇರುವ, ಎಲ್ಲರಿಗೂ ಪ್ರವೇಶ ಇಲ್ಲದ ಈ ಕೋಣೆಗಳನ್ನು ಮನೆಯ ನಗ ನಾಣ್ಯಗಳನ್ನು, ದಾಖಲೆ ಪತ್ರಗಳನ್ನು ಇಡಲು ಉಪಯೋಗಿಸುತ್ತಾರೆ. ಕತ್ತಲೆ ಕೋಣೆಯನ್ನು ಹೊಂದಿಕೊಂಡು ಪಾಷಾಣ ಮೂರ್ತಿ (ಕಲ್ಲುರ್ಟಿ) ದೈವದ ಕೋಣೆ ಇರುತ್ತದೆ. ಇಲ್ಲಿ ಈ ದೈವದ ಬೆತ್ತ ಇತ್ಯಾದಿ ಪರಿಕರಗಳಿರುತ್ತವೆ. ಕೆಲ ಮನೆಗಳಲ್ಲೂ ಈ ದೈವಕ್ಕೆ ಅಡುಗೆ ಮನೆಯಲ್ಲಿ ನೆಲೆ ಇರುತ್ತದೆ. ಪಾಷಾಣ ಮೂರ್ತಿಗೆ ಮನೆಯೊಳಗೆ 'ಅಗೆಲು' ಕೊಡುವ ಕ್ರಮವಿಲ್ಲ. ಮನೆಯ ಹೊರಗೆ ಕೊಡುವ ಕ್ರಮ. ಮನೆಯ ವಾಯುವ್ಯ ಭಾಗದಲ್ಲಿ ಅಡುಗೆ ಮನೆ ಇರುತ್ತದೆ. ಇದು ಆಗ್ನೇಯ ಭಾಗದಲ್ಲಿ ನಿರ್ದಿಷ್ಟಗೊಳಿಸಿರುವ 'ಕನ್ನಿ ಮೂಲೆ'ಗೆ ಸರಿ ವಿರುದ್ಧ ದಿಕ್ಕಿನಲ್ಲಿರುತ್ತದೆ. 'ಕನ್ನಿ ಮೂಲೆ'ಯಿಂದಲೇ ಮನೆಯ ತಳಪಾಯದ ಲೆಕ್ಕಾಚಾರ ಆರಂಭವಾಗುವುದು. ವಾಸ್ತುದೃಷ್ಟಿಯಿಂದ ಕನ್ನಿಮೂಲೆ ಮನೆಯ ಮೂಲ ಘಟಕವಾಗಿ ಕಾರ್ಯನಿರ್ವಹಿಸುತ್ತದೆ.

ಗೌಡರ ಮನೆಗಳಲ್ಲಿ ಅತ್ಯಂತ ಹೆಚ್ಚು ಕ್ರಿಯಾತ್ಮಕ ಘಟಕಗಳೆಂದರೆ ಜಗಲಿ ಮತ್ತು ಅಡುಗೆ ಮನೆ. ಇವೆರಡು ಇಲ್ಲದೆ ಗೌಡರ ಯಾವ ಕ್ರಿಯಾಚರಣೆಗಳು ನಡೆಯುವುದಿಲ್ಲ. ಅಡುಗೆ ಮನೆಯ ಒಂದು ಪಕ್ಕದಲ್ಲಿ ಲಕ್ಷ್ಮೀ ದೀಪ ಇರುತ್ತದೆ. ಇದು ಮನೆಯ ನಂದಾದೀಪ. ಅಡುಗೆ ಮನೆಯಲ್ಲಿ

ಪೂರ್ವಾಭಿಮುಖವಾಗಿ ಮರದ ಚಿಕ್ಕ ಕಂಬವೊಂದನ್ನು ಹುಗಿದಿಡುತ್ತಾರೆ. ಇದನ್ನು 'ಕನ್ನಿ ಕಂಬ' ಎನ್ನುತ್ತಾರೆ. ಜೀವನಾವರ್ತನದ ಮತ್ತು ವಾರ್ಷಿಕಾವರ್ತನದ ಆಚರಣೆಗಳೆಲ್ಲವೂ ಈ 'ಕನ್ನಿ ಕಂಬ'ದ ಕೆಳಗೆ ನಡೆಯುತ್ತವೆ. ಗುರು ಕಾರ್ನೂರರಿಗೆ (ಗುರು ಕಾರ್ಣವ) ಆರಾಧನೆ ಇಲ್ಲಿಯೇ ನಡೆಯುತ್ತದೆ. ಈ ಕಾರಗಳಿಂದಾಗಿ ಇಡೀ ಗೌಡ ಸಂಸ್ಕೃತಿಯ ಕೇಂದ್ರ ಬಿಂದು 'ಕನ್ನಿ ಕಂಬ' ಇರುವ ಅಡುಗೆ ಮನೆ. 'ಕನ್ನಿ ಕಂಬ' ಸುಳ್ಯ ಪರಿಸರದ ಅರೆಭಾಷಿಕ ಗೌಡರ ಐನ್ ಮನೆಗಳಲ್ಲಿ ಸರ್ವೇ ಸಾಮಾನ್ಯವಾಗಿದ್ದರೆ, ತುಳು ಭಾಷಿಕ ಗೌಡರಲ್ಲಿ ವಿರಳವಾಗಿದೆ. ಉದಾಹರಣೆಗಾಗಿ ಪಡುಬಲ್ನಾಡ ಕಟ್ಟೆಮನೆಯ ಐನ್ ಮನೆಯಲ್ಲಿ ಇಲ್ಲ. ತುಳುಭಾಷಿಕ ಗೌಡರಲ್ಲಿ 'ಕನ್ನಿ ಕಂಬ' ಇಲ್ಲವಿದ್ದರೂ ಅವರ ಎಲ್ಲಾ ಕ್ರಿಯಾಚರಣೆಗಳ ಕೇಂದ್ರ ಬಿಂದು ಅಡುಗೆ ಮನೆಯೇ ಆಗಿರುತ್ತದೆ.

ಅಡುಗೆ ಕೋಣೆಯ ಪಕ್ಕದಲ್ಲೇ ಉತ್ತರ ಭಾಗಕ್ಕೆ ಹೊರಗೆ ಹೋಗುವ ಬಾಗಿಲು ಇರುತ್ತದೆ. ಈ ಹೊರ ಬಾಗಿಲನ್ನು ಹೊಂದಿಕೊಂಡು ವಿಶಾಲವಾದ ಊಟದ ಮನೆ (ಉಂಜೊಳಗೆ). ಈ ಊಟದ ಮನೆಯ ಪಕ್ಕದಲ್ಲಿ ಕೋಣೆಯೊಂದು ಇದೆ. ಇದಕ್ಕೆ ಊಟದ ಮನೆಯಿಂದ ಬಾಗಿಲು. ಇದನ್ನು ಸರಕಿನ ಕೋಣೆ ಅಥವಾ ವ್ಯವಹಾರದ ಕೋಣೆಯೆಂದು ಕರೆಯುತ್ತಾರೆ. ಗೌಪ್ಯತೆಯ ದೃಷ್ಟಿಯಿಂದ ಇದು ಕೂಡ ಕತ್ತಲೆ ಕೋಣೆಯಾಗಿದೆ. ಇಡೀ ಮನೆಗೆ ಸಣ್ಣದಾದ ಕಿಟಕಿಗಳಿರುತ್ತವೆ. ಮನೆ ಬಾಗಿಲು, ದಾರಂದಗಳು ಕಿರಿದಾಗಿದ್ದು, ಒಳಪ್ರವೇಶ ಮಾಡಬೇಕಾದರೆ ಬಾಗಿ ಹೋಗಬೇಕಾಗುತ್ತದೆ. ಮನೆ ದೈವ - ದೇವಸ್ಥಾನಕ್ಕೆ ಸಮಾನ. ಇಂತಹ ಮನೆಯನ್ನು ಬಾಗಿ ಪ್ರವೇಶಿಸುವುದು ಅಹಂಕಾರ ನಿರಸನದ ಸ್ಥಿತಿ ಎನ್ನುವ ಜನಪದರ ದೃಷ್ಟಿ ಇಲ್ಲಿ ವ್ಯಕ್ತವಾಗುತ್ತದೆ.

ಒಳಾಂಕಣದಿಂದ ಸುಮಾರು ಎರಡರಿಂದ ನಾಲ್ಕು ಅಡಿಗಳಷ್ಟು ಆಳದಲ್ಲಿ ಅಂಕಣವಿರುತ್ತದೆ. ಇದು ತೊಟ್ಟಿಯಂತಿದ್ದು, ಚೌಕಾಕಾರದಲ್ಲಿರುತ್ತದೆ. ಕೆಲವು ಮನೆಗಳಲ್ಲಿ ಆಯತಾಕಾರದಲ್ಲಿಯೂ ಇರುತ್ತದೆ. ಈ ಅಂಕಣದ ನಾಲ್ಕು ಮೂಲೆಗಳಲ್ಲೂ 'ಜೋದಿಗೆ' ಕಂಬಗಳಿರುತ್ತವೆ. ಜೋದಿಗೆ ಕಂಬಗಳ ಮೇಲ್ಭಾಗದಿಂದಲೇ ಮನೆಯ 'ಮಾಡು' ಹೊಂದಿಕೊಂಡಿರುತ್ತದೆ. ನಾಲ್ಕು ಮೂಲೆಗಳಿಂದಲೂ ಮನೆ ಮಾಡಿನ ನೀರು ಈ ತೊಟ್ಟಿಗೆ ಹರಿದು ಬೀಳುತ್ತದೆ. ಬಿದ್ದ ನೀರು ಕೊಳವೆಯ ಮೂಲಕ ಈಶಾನ್ಯ ದಿಕ್ಕಿಗೆ ಹೊರಹೋಗುವ ವ್ಯವಸ್ಥೆ ಇರುತ್ತದೆ.

ಇಲ್ಲಿ ಪರಿಚಯಿಸಿದ ಬಗೆಯ ಮನೆಗಳನ್ನು ಸುಳ್ಯ ಪರಿಸರದ ಅರೆಭಾಷಿಕ ಗೌಡರು 'ನಾಲ್ಕು ಸೂತ್ರದ ಮನೆ', 'ನಾಲ್ಕಂಕಣದ ಮನೆ', 'ಐನ್ ಮನೆ' ಎಂದು ಕರೆದರೆ, ತುಳು ಭಾಷಿಕ ಗೌಡರು 'ಉಳಮುಂದಿಲ್' ಮನೆಯೆಂದು ಕರೆಯುತ್ತಾರೆ. ಇದೇ ಬಗೆಯ ರಚನೆ ಒಂದಕ್ಕೊಂದು ಹೊಂದಿಕೊಂಡು ಇದ್ದರೆ 'ಎಂಟು ಸೂತ್ರ'ದ ಮನೆಯೆಂದು ಕರೆಯುತ್ತಾರೆ. ಇದು ಮುಖ್ಯ ಮನೆಯ ಹಿಂಭಾಗಕ್ಕಿದ್ದು, ಮುಖ್ಯ ಮನೆಯ ಯಥಾವತ್ತಾದ ಘಟಕಗಳನ್ನು ಹೊಂದಿರುತ್ತದೆ. ಅದರ ಘಟಕಗಳಲ್ಲಿ ದೈವ ದೇವರ ಸ್ಥಾನಗಳಿರುವುದಿಲ್ಲ. ಅವುಗಳಲ್ಲಿ ಮನೆ ಮಂದಿ ವಾಸಿಸುತ್ತಾರೆ. ಈ ಎಂಟು ಸೂತ್ರದ ಮನೆಯಲ್ಲೂ ಅಡುಗೆ ಕೋಣೆ ಒಂದೇ ಇರುತ್ತದೆ. ಈ ಮೂಲಕ 'ಕೂಡುಂಬ' ವ್ಯವಸ್ಥೆಯನ್ನು ಮುಂದುವರಿಸುತ್ತಾರೆ.

ತುಳುನಾಡಿನ ಪಡ್ಸಿರೆ ಮನೆ ಮತ್ತು ಬಯಲು ಸೀಮೆಯ ತೊಟ್ಟಿ ಮನೆಗಳ ರಚನೆಗಳೊಂದಿಗೆ ಗೌಡರ ನಾಲ್ಕಂಕಣದ ಐನ್ ಮನೆಗಳ ಸ್ವರೂಪವನ್ನು ಹೋಲಿಸಿದಾಗ ಕೆಲವೊಂದು ಹೋಲಿಕೆಗಳು ಮತ್ತು ವ್ಯತ್ಯಾಸಗಳಿರುವುದು ಕಂಡುಬರುತ್ತದೆ. ಗುತ್ತು, ಬೂಡುಗಳೆಂದು ಕರೆಸಿಕೊಳ್ಳುವ 'ಸುತ್ತು ಪಡ್ಸಿರೆ' ಮನೆಗಳು ವೃತ್ತಿ ಮತ್ತು ರಾಜಕೀಯ ಆಡಳಿತವನ್ನು ಹೊಂದಿಕೊಂಡಂತೆ ಮುಖ್ಯವಾಗುತ್ತವೆ. ಈ ಮನೆಗಳಿಗೆ ಐತಿಹಾಸಿಕವಾದ ರಾಜಕೀಯ ಹಿನ್ನಲೆಗಳಿರುತ್ತವೆ. ಜನಾಂಗಿಕವಾಗಿ ಈ ಮನೆಗಳು ಬಂಟ ಮತ್ತು ಜೈನ ಮನೆತಗಳಿಗೆ ಸೇರಿವೆ. ಇತರ ಜನಾಂಗಗಳಿಗೂ ಈ ಬಗೆಯ ಮನೆಗಳು ಇರಬಹುದಾದರೂ, ಅವು ಆಸ್ತಿಯ ವರ್ಗಾವಣೆಯೊಂದಿಗೆ ಬಂದವುಗಳಾಗಿರುತ್ತವೆ. ತುಳುನಾಡನ್ನು ಆಳಿದ ಸಾಮಂತ ಬಂಟ, ಜೈನ ಬಲ್ಲಾಳರ ಕಾಲದಿಂದ, ಬಂಟ, ಜೈನ ಜನಾಂಗದವರು ಅಧಿಕಾರ ಮತ್ತು ಆಸ್ತಿಯ ಒಡೆತನವನ್ನು ಅನುಭೋಗಿಸಿದವರು. ಅರಸರ ಪ್ರತಿನಿಧಿಗಳಾಗಿ ಊರು - ಗ್ರಾಮಗಳ ಅಧಿಕಾರ ನಡೆಸಿಕೊಂಡು ಬಂದ ಹಿನ್ನೆಲೆಯಲ್ಲಿ, ಸಾಮಾಜಿಕ, ಧಾರ್ಮಿಕ ವ್ಯವಸ್ಥೆಯ ಮೇಲೂ ಹಿಡಿತ ಸಾಧಿಸುವುದು ಅವರಿಗೆ ಸುಲಭವಾಯಿತು. ಸಾಮಾಜಿಕ, ಧಾರ್ಮಿಕ, ಆಡಳಿತಾತ್ಮಕ ಅಧಿಕಾರದ ಸ್ಥಾನಮಾನಗಳಿಗೆ ಹೊಂದಿಸಿಕೊಂಡಂತೆ ಗುತ್ತಿನ ಸುತ್ತು ಪಡ್ಸಿರೆ ಮನೆಗಳು ಸಾಮಾನ್ಯ ಮನೆಗಳಿಗಿಂತ ಭಿನ್ನವಾಗಿರುವುದು ಸಹಜವಾಗಿದೆ. ಈ ಮನೆಗಳ ರಾಚನಿಕ ವಿನ್ಯಾಸ ಶ್ರೇಣೀಕೃತ ಸಮಾಜ ವ್ಯವಸ್ಥೆಯನ್ನು ಪ್ರತಿನಿಧಿಸುವಂತಿದೆ. ಸುತ್ತಂಕಣದ ಸುತ್ತು ಪಡ್ಸಿರೆ ಮನೆಯ ವಿಶಾಲವಾದ ಚಾವಡಿ, ಕೆತ್ತನೆಯ ಕಂಬಗಳು, ಉಯ್ಯಾಲೆಯಲ್ಲಿರುವ ಭೂತದ ಮೊಗ, ಕಡ್ತಲೆ ಇವೆಲ್ಲವೂ ಮನೆಗೊಂದು ಭವ್ಯತೆಯನ್ನು ರೂಪಿಸುವಲ್ಲಿ ಸಮರ್ಥವಾಗುತ್ತವೆ. ಅಧಿಕಾರಶಾಹಿ ಶಕ್ತಿಗಳಾಗಿ ಈ ಮನೆತನದವರು ಮುಂದುವರಿಯುವುದಕ್ಕೆ ಪೂರಕವಾಗುತ್ತವೆ. ಸುತ್ತು ಪಡ್ಸಿರೆಯ ಚಾವಡಿಯಲ್ಲಿ ತೀರ್ಮಾನಕಕ್ಕೆ ಬರುವ ವಿವಾದಗಳು, ಮನೆಯ ಯಜಮಾನ, ದೈವದ ಪ್ರತಿನಿಧಿ ಎನ್ನುವ ನೆಲೆಗಟ್ಟಿನಲ್ಲಿ ಮುಕ್ತಾಯ ವಾಗುತ್ತವೆ. ಈ ಹಿನ್ನೆಲೆಯಲ್ಲಿ ಪಡ್ಸಿರೆ ಮನೆಯ ಚಾವಡಿ ರಾಚನಿಕವಾಗಿ ಮತ್ತು ಕ್ರಿಯಾತ್ಮಕವಾಗಿ ಗೌಡರ ನಾಲ್ಕಂಕಣದ ಐನ್ ಮನೆಯ ಚಾವಡಿಗೆ ಸಮಾನವಾಗಿದೆ. ಉಳಿದಂತೆ ಎರಡೂ ಮನೆಗಳು ಭಿನ್ನವಾಗುತ್ತವೆ. ಜಾತಿ, ವೃತ್ತಿ, ಪ್ರಾದೇಶಿಕತೆ ಈ ವ್ಯತ್ಯಾಸಗಳಿಗೆ ಕಾರಣಗಳಾಗಿವೆ. ಸುತ್ತು ಪಡ್ಸಿರೆ ಮನೆಗೆ ಇರುತ್ತಿದ್ದ ಭೂ ಒಡೆತನ ಮತ್ತು ಒಕ್ಕಲುತನದ ಪ್ರಮಾಣ ಐನ್ ಮನೆತನಗಳಿಗಿಲ್ಲ. ಸಾಮಾಜಿಕವಾಗಿ, ಧಾರ್ಮಿಕವಾಗಿ ನಿರ್ವಹಿಸುವ ಜವಾಬ್ದಾರಿ ಮತ್ತು ಕರ್ತವ್ಯಗಳಲ್ಲಿ ಐನ್ ಮನೆಯ ಗೌಡರು ಗುತ್ತು, ಬೂಡಿನ ಮನೆಯವರೊಂದಿಗೆ ಸರಿಸಮಾನರು.

ಬಯಲು ಸೀಮೆಯ ತೊಟ್ಟಿ ಮನೆಗಳ ರಚನೆ ಹೊರನೋಟಕ್ಕೆ ಅರಮನೆಗಳ ತೀರ ಸರಳ ರೂಪದಂತೆ ಕಾಣುತ್ತವೆ. ಈ ಮನೆಗಳು ಮುಖ್ಯವಾಗಿ ವೃತ್ತಿಯನ್ನು ಹೊಂದಿಕೊಂಡಂತೆ ರಚನೆ ಯಾಗುವ ಮನೆಗಳು. ಈ ಮನೆಗಳಲ್ಲಿ 'ತೊಟ್ಟಿ'ಯೆ ಸಂಕುಚಿತಗೊಂಡು ಗೌಡರ ನಾಲ್ಕಂಕಣದ ಮನೆಯ ಅಂಕಣ ರಚನೆಯಾದಂತೆ ಕಂಡುಬರುತ್ತದೆ. ಉಳಿದಂತೆ ತೊಟ್ಟಿಮನೆಗಳ ಮತ್ತು

ನಾಲ್ಕಂಕಣದ ಮನೆಗಳು ರಾಚನಿಕವಾಗಿ ತೀರ ಭಿನ್ನವಾಗಿ ಗೋಚರಿಸುತ್ತವೆ. ಆದರೆ ತುಳುನಾಡಿನ ಗೌಡರ ಮೂಲದ ಕುರಿತಾದ ಐತಿಹಾಸಿಕ ಸಂಗತಿಗಳನ್ನು ಗಮನಿಸಿದಾಗ, ಗೌಡರ ನಾಲ್ಕಂಕಣದ ಐನ್ ಮನೆಯ ರಚನೆಯಲ್ಲಿ ತೊಟ್ಟಿ ಮನೆಗಳ ಪ್ರಭಾವ ಇರುವುದನ್ನು ಕಡೆಗಣಿಸಲಾಗದು.

ವಿದ್ವಾಂಸರು ಅಭಿಪ್ರಾಯಪಡುವಂತೆ ಗೌಡರು ತುಳುನಾಡಿನ ಮೂಲ ನಿವಾಸಿಗಳಲ್ಲ. ಹಾಸನದ ಐಗೂರು ಸೀಮೆಯಿಂದ ಬಂದವರು. ಬಯಲು ಸೀಮೆಯಿಂದ ವಲಸೆ ಬಂದ ಗೌಡರು ತಮ್ಮೊಂದಿಗೆ 'ತೊಟ್ಟಿ ಮನೆ'ಯ ರಚನಾ ವಿನ್ಯಾಸವನ್ನು ತಂದಿರಬಹುದು. ಹಾಗೆ ತಂದ ಮನೆಯ ವಿನ್ಯಾಸವನ್ನು ಪ್ರಾದೇಶಿಕತೆ ಮತ್ತು ಪರಿಸರದ ಅನುಗುಣಕ್ಕೆ ಹೊಂದಿಸಿಕೊಂಡಿರುವ ಸಾಧ್ಯತೆ ಇದೆ. ಕಾಲಾನುಕ್ರಮದಲ್ಲಿ ಭೌಗೋಳಿಕತೆ ಮತ್ತು ಪರಿಸರ ರೂಪಿಸುವ ಸಾಂಸ್ಕೃತಿಕ ಬದುಕಿನ ಅಗತ್ಯತೆಗೆ ವಾಸದ ಮನೆ ನಿರ್ಮಾಣವು ಹೊಸ ರೂಪ ಪಡೆದುಕೊಳ್ಳುವುದು ಅನಿವಾರ್ಯ. ಈ ವಿಷಯಕ್ಕೆ ಪೂರಕವಾಗಿ, ನಾಲ್ಕಂಕಣದ ಮನೆಗಳು ಬಹುಸಂಖ್ಯೆಯಲ್ಲಿ ಕಂಡುಬರುವುದು ಮಡಿಕೇರಿಯನ್ನು ಹೊಂದಿಕೊಂಡಿರುವ ಸುಳ್ಯ ಪರಿಸರದಲ್ಲಿ. ಕೊಡಗಿನಲ್ಲಿ ಈ ಬಗೆಯ ಮನೆಗಳು ಬಹುಸಂಖ್ಯೆಯಲ್ಲಿವೆ. ಸುಳ್ಯದಿಂದ ಬೆಳ್ತಂಗಡಿ, ಪುತ್ತೂರು, ಕರಾವಳಿ ಕಡೆ ಬಂದಂತೆ ಈ ಮನೆಗಳು ವಿರಳವಾಗುತ್ತವೆ. ಬೆಳ್ತಂಗಡಿ ಪರಿಸರದಲ್ಲಿ ಗೌಡರಿಗೆ ನಾಲ್ಕಂಕಣದ ಮನೆಗಳ ಬದಲು 'ಸುತ್ತು ಪಟ್ಟಿರೆ' ಮನೆಗಳಿರುತ್ತವೆ.

ಚಿಕವೀರ ರಾಜೇಂದ್ರನ ಕಾಲದಲ್ಲಿ ಸುಳ್ಯವು ಕೊಡಗರಸರ ಆಳ್ವಿಕೆಗೆ ಒಳಪಟ್ಟಿತು. ಮಾಹಿತಿಗಳನ್ನು ನೀಡಿದ ಜನರು ವಿವರಿಸುವಂತೆ ನಾಲ್ಕಂಕಣದ ಮನೆಗಳನ್ನು ನಿರ್ಮಾಣ ಆಡಬೇಕಾದರೆ, ಅರಸರ ಒಪ್ಪಿಗೆ ಪಡೆಯಬೇಕಾಗುತ್ತಿತ್ತು. ಅಲ್ಲದೆ ಜವಾಬ್ದಾರಿಯುತವಾಗಿ, ಮಹತ್ತರ ಸಾಧನೆ ಮಾಡಿದ ವ್ಯಕ್ತಿಯ ಮನೆತನದವರಿಗೆ ಮಾತ್ರ ಒಪ್ಪಿಗೆ ಸಿಗುತ್ತಿತ್ತು. ಕೊಡಗರಸರ ಕಾಲದಲ್ಲಿ ಸುಳ್ಯ ಪರಿಸರದ ಗೌಡ ಮನೆತನದ ಗೌಡರ ಪ್ರಭುತ್ವದಲ್ಲಿ ಅಧಿಕಾರ ಪದವಿಗಳನ್ನು ಪಡೆದಿದ್ದರು. ಈಗಿರುವ ಐನ್ ಮನೆತನಗಳ ಕವಲುಗಳ ಗೌಡರು ಕೊಡಗಿನ ಬೇರೆ ಬೇರೆ ಭಾಗಗಳಲ್ಲಿ ನೆಲೆಸಿದ್ದಾರೆ. ಇಂದಿಗೂ ಅವರು ತಮ್ಮ 'ಥರವಾಡ್' ಮನೆಗಳ ಹೆಸರಿನಿಂದಲೇ ಗುರುತಿಸಿಕೊಳ್ಳುತ್ತಾರೆ. ಈ ಎಲ್ಲಾ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಬಯಲು ಸೀಮೆಯನ್ನು ಹೊಂದಿಕೊಂಡಿರುವ ಕೊಡಗಿನ ಮೂಲಕವೂ ತೊಟ್ಟಿ ಮನೆಯ ವಿನ್ಯಾಸ ಸುಳ್ಯ ಪರಿಸರದ ಗೌಡರ ನಾಲ್ಕಂಕಣದ ಮನೆಯ ನಿರ್ಮಾಣದಲ್ಲಿ ಪ್ರಭಾವ ಬೀರಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಒಟ್ಟಿನಲ್ಲಿ ಭೌಗೋಳಿಕತೆ ಮತ್ತು ಅಧಿಕಾರ ಸ್ಥಾನಗಳು ಗೌಡರ ನಾಲ್ಕಂಕಣದ ಮನೆಗಳ ನಿರ್ಮಾಣದ ಹಿಂದೆ ಕೆಲಸ ಮಾಡಿದೆ.

ತುಳುನಾಡಿನಲ್ಲಿ ವಾಸಿಸುವವರೆಲ್ಲರ ಮನೆಗು ಗುತ್ತು, ಸುತ್ತು ಪಟ್ಟಿರೆ ಮನೆಗಳಲ್ಲ, ಅಂತೆಯೇ ಗೌಡ ಜನಾಂಗದವರೆಲ್ಲರೂ ನಾಲ್ಕಂಕಣದ ಮನೆಯವರಲ್ಲ. ಗೌಡರ ಸಾಮಾನ್ಯ ಮನೆಗಳಿಗೂ, ಈ ನಾಲ್ಕಂಕಣದ ಮನೆಗಳಿಗೂ ಇರುವ ವ್ಯತ್ಯಾಸವನ್ನು ರೇಖಾಚಿತ್ರ ೨ ಮತ್ತು ರೇಖಾಚಿತ್ರ ೩ರಲ್ಲಿ ಗಮನಿಸಬಹುದು. ಹಾಗೆಯೇ ರೇಖಾಚಿತ್ರ ೧ರಲ್ಲಿನ ಪಟ್ಟಿರೆ ಮನೆಯ ಸಾಮಾನ್ಯ ರಚನೆಯನ್ನು ಮತ್ತು ತೊಟ್ಟಿ ಮನೆಯ ವಿವರಗಳನ್ನು ನಾಲ್ಕಂಕಣದ ರಚನಾ, ವಿವರಗಳೊಂದಿಗೆ ತುಲನಾತ್ಮಕವಾಗಿ

ನೋಡಿದಾಗ, ಬಾಹ್ಯವಾಗಿ ಅವುಗಳಿಗಿರುವ ಹೋಲಿಕೆ ಮತ್ತು ವ್ಯತ್ಯಾಸಗಳು ಸ್ಪಷ್ಟವಾಗುತ್ತವೆ. ಆಂತರಿಕವಾಗಿ ಸಾಮ್ಯತೆಗಿಂತ ಭಿನ್ನತೆಯೇ ಹೆಚ್ಚಾಗಿ ನಾಲ್ಕಂಕಣದ ಮನೆಗಳು ವೈಶಿಷ್ಟ್ಯಪೂರ್ಣ ವಾಗಿವೆ.

ಮನುಷ್ಯನ ವಾಸದ ಕಟ್ಟಡಗಳನ್ನು ಒಟ್ಟಾರೆಯಾಗಿ ಗಮನಿಸಿದರೆ, ಶ್ರೇಣೀಕೃತ ವ್ಯವಸ್ಥೆಯಿರುವ ಸಮಾಜವೊಂದರ ಚಿತ್ರಣ ಎದುರು ನಿಲ್ಲುತ್ತದೆ. ಅಧಿಕಾರಶಾಹಿ ವ್ಯವಸ್ಥೆಯನ್ನು ಅನಾವರ ಗೊಳಿಸುತ್ತದೆ. ವ್ಯವಸ್ಥೆಯ ಮೇಲ್ತುದಿಯಲ್ಲಿ ಸಾರ್ವಭೌಮರ ಭವ್ಯರಮನೆಗಳು, ಸಾಮಂತ ಪಾಳೆಗಾರರ ಅರಮನೆಗಳು, ಸೀಮೆ, ಮಾಗಣೆ, ಬೂಡುಗಳ ಅಧಿಕಾಸ್ಥರ ಸುತ್ತು ಪಟ್ಟಿರೆ ಮನೆಗಳು, ಹಾಗೆ ಗೌಡರ ನಾಲ್ಕಂಕಣದ ಮನೆಗಳು ಕ್ರಮವಾಗಿ ಕೆಳ ಹಂತಗಳಲ್ಲಿ, ಇನ್ನೂ ತಳದಲ್ಲಿ ಸಾಮಾನ್ಯರ ಮನೆಗಳು ಇರುತ್ತವೆ. ರಾಚನಿಕವಾಗಿ ಈ ಎಲ್ಲಾ ಮನೆಗಳ ಒಳಾಂಕಣಗಳನ್ನು ಗಮನಿಸಿದರೆ ಒಂದು ಬಗೆಯ ಅಂತರ್ ಸಂಬಂಧವಿರುವುದು ಗೋಚರಿಸುತ್ತದೆ. ಆಯಾಯ ಮನೆಗಳು ಅಧಿಕಾರ ಸ್ಥಾನಗಳ ನೆಲೆಯಲ್ಲಿ ಒಳಾಂಕಣಗಳು ಮೇಲ್ತುದಿಯಿಂದ ಕೆಳ ತುದಿಗೆ ಕಿರಿದಾಗುತ್ತ ಬರುತ್ತವೆ. ಸಾಮಾನ್ಯನ ಮನೆಗೆ ಅಂಕಣವೇ ಇರುವುದಿಲ್ಲ.

೫

ರಚನೆಯ ದೃಷ್ಟಿಯಿಂದ ಗೌಡರ ನಾಲ್ಕಂಕಣದ ಐನ್ ಮನೆಗಳು ತನ್ನೊಳಗಿನ ಸಾಂಸ್ಕೃತಿಕ ಸಂಕೀರ್ಣತೆಯನ್ನು ಹೊಂದಿಕೊಂಡಂತೆ ನಿರ್ಮಾಣಗೊಂಡಿವೆ. ಐನ್ ಮನೆಯೆಂದರೆ ಕುಲದೈವ, ಮನೆದೈವ, ಧರ್ಮದೈವ, ಸತ್ತು ಕುಳಿಗಳಾದ ಹಿರಿಯರ (ಗುರು ಕಾರ್ನೂರರು) ಸ್ಥಾನಗಳಿಂದೊಡಗೂಡಿ ಕುಟುಂಬದ ಕರ್ತನ (ಯಜಮಾನ) ನಿರ್ದೇಶನದಲ್ಲಿ ಕುಟುಂಬಸ್ಥರು ವಾಸಿಸುವ ಮನೆ. ಹೀಗೆ ಐದು ಅಂಶಗಳಿಂದ ಕೂಡಿದ ಮನೆ ಐನ್ ಮನೆಯಾಗುತ್ತದೆ. ಇಷ್ಟೆಲ್ಲವನ್ನು ಹೊಂದಿರುವ ಮನೆ ಎಲ್ಲಾ ವಿಧದಲ್ಲಿಯೂ ಗೌಡರ ಸಾಮಾನ್ಯ ಮನೆಗಳಿಗಿಂತ ಭಿನ್ನ ಮತ್ತು ವೈಶಿಷ್ಟ್ಯಪೂರ್ಣವಾಗಿರುತ್ತದೆ.

ದೈವಾರಾಧನೆ, ಭೂತಾರಾಧನೆ, ಜೀವನಾವರ್ತನದ ಮತ್ತು ವಾರ್ಷಿಕಾವರ್ತನದ ಸಮಸ್ತ ಸಾಂಸ್ಕೃತಿಕ ಆಚರಣೆಗಳು ಕುಟುಂಬದ ಸಮಸ್ತರ ಒಗ್ಗೂಡುವಿಕೆಯಿಂದ ಈ ಐನ್ ಮನೆಗಳಲ್ಲಿ ನಡೆಯುತ್ತವೆ. ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಸಮಸ್ತರು ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿದ್ದರೂ ಎಲ್ಲರಿಗೂ ಒಂದೇ ಅಡುಗೆ ಮನೆಯಿದ್ದು 'ಕೂಡುಂಬ ವ್ಯವಸ್ಥೆ' ಇತ್ತು. ನಾಲ್ಕಂಕಣದ ಐನ್ ಮನೆಗಳಲ್ಲಿ ಪ್ರತ್ಯೇಕವಾಗಿ ಮಲಗುವ ಕೋಣೆಗಳಿಲ್ಲ. ಈ ಮನೆಯ ಕೋಣೆ ಗಳೆಲ್ಲವೂ ದೈವ - ದೇವರುಗಳ ಸ್ಥಾನಗಳಿಂದ ಗುರುತಿಸಲ್ಪಡುತ್ತವೆ. ಈ ಕೋಣೆಗಳಲ್ಲಿ ಆಯಾಯ ದೈವಗಳ ಪರಿಕರಗಳಿರುತ್ತವೆ. ಹೀಗಿದ್ದರೂ ಈ ದೈವಗಳು ಮನೆಯ ಒಳಗಡೆ ಆರಾಧನೆಗೊಳ್ಳದೆ ಮನೆಯ ಹೊರ ಆವರಣದಲ್ಲಿ ಆರಾಧನೆಗೊಳ್ಳುತ್ತವೆ. ಕೆಲವು ಮನೆತನಗಳ ಮನೆಯ ಆವರಣದೊಳಗೆ ಭೂತ - ದೈವಗಳಿಗೆ ಪ್ರತ್ಯೇಕ ಗುಡಿ ಮಾಡಗಳಿರುವುದುಂಟು. ನಾಲ್ಕಂಕಣದ ಐನ್ ಮನೆಯಲ್ಲಿ

ಅತ್ಯಂತ ಹೆಚ್ಚು. ಕಾರ್ಯ ಚಟುವಟಿಕೆಗಳಿಗೆ ಉಪಯೋಗವಾಗುವ ಘಟಕವೆಂದರೆ ಒಳಾಂಕಣ.

ನಾಲ್ಕಂಕಣದ ಐನ್ ಮನೆಯ ತಳಪಾಯ (ಪಂಚಾಂಗ)ದ ಹೊರಭಾಗ ಎತ್ತರವಾಗಿದ್ದು, ಒಳಭಾಗಕ್ಕೆ ಸರಿದಂತೆ, ತಗ್ಗುತ್ತಾ ಹೋಗುತ್ತದೆ. ಚಾವಡಿಯಿಂದ ಒಳಾಂಕಣ ಕೆಳ ಹಂತದಲ್ಲಿ, ಒಳಾಂಕಣದಿಂದ ಅಂಕಣ ಇನ್ನೂ ಕೆಳ ಹಂತದಲ್ಲಿರುತ್ತದೆ. ಇದು 'ತಾವರೆ' ಹೂವಿನ ದಳಗಳು ಒಂದರಿಂದ ಇನ್ನೊಂದು ಒಳಭಾಗಕ್ಕೆ ಸರಿದು ಕಿರಿದಾಗಿ ರೂಪುಗೊಳ್ಳುವ ಆಕೃತಿಯನ್ನು ಹೋಲು ವಂತಿರುತ್ತದೆ. ಚೌಕಾಕಾರದಲ್ಲಿ ಆವೃತವಾಗಿರುವ ನಾಲ್ಕಂಕಣದ ಮನೆಯ ಈ ರೀತಿಯ ರಚನೆ ಬಗ್ಗೆ 'ಸಮೃದ್ಧಿ ಕೂಡಿ ಬರುತ್ತದೆ' ಎಂಬ ನಂಬಿಕೆಯನ್ನು ಗೌಡರು ಹೊಂದಿದ್ದಾರೆ. ಅಂಕಣದಲ್ಲಿ ಬೀಳುವ ನೀರು ಈಶಾನ್ಯ ಭಾಗದಲ್ಲಿ ಹರಿಯುವಂತೆ ಈಶಾನ್ಯ ಭಾಗದಲ್ಲೇ ಮನೆ ಬಾವಿಯನ್ನು ತೋಡಬೇಕು, ಮನೆಯ ಪ್ರಧಾನ ಬಾಗಿಲು ಪೂರ್ವಾಭಿಮುಖವಾಗಿಯೇ ಇರಬೇಕೆನ್ನುವ ದೃಷ್ಟಿ ಮುಖ್ಯವಾಗಿದೆ. ಸಾಮಾನ್ಯ ಮನೆಗಳಲ್ಲಿ ಅಡುಗೆ ಮನೆ ಪೂರ್ವ ಆಗ್ನೇಯದಲ್ಲಿದ್ದರೆ, ಈ ಮನೆಗಳಲ್ಲಿ ಪೂರ್ವ ಆಗ್ನೇಯದ ಸರಿ ವಿರುದ್ಧ ದಿಕ್ಕಿನ ಪಶ್ಚಿಮ ವಾಯುವ್ಯದಲ್ಲಿರುತ್ತದೆ. ಪೂರ್ವ ಆಗ್ನೇಯ ಭಾಗದ ಕೋಣೆಯಲ್ಲಿ ಧರ್ಮದೈವದ ಸ್ಥಾನವಿರುತ್ತದೆ. ಇದಕ್ಕಾಗಿ ಅಗ್ನಿ ಮತ್ತು ವಾಯುವಿಗೆ ಇರುವ ಅನ್ಯೋನ್ಯ ಸಂಬಂಧವನ್ನು ಅನುಲಕ್ಷಿಸಿ ವಾಯವ್ಯದಲ್ಲಿ ಅಡುಗೆ ಕೋಣೆಯನ್ನು ಹೊಂದಿಸಿ ಕೊಂಡಿದ್ದಾರೆ. ದಕ್ಷಿಣ ದಿಕ್ಕನ್ನು ಬಿಟ್ಟಂತೆ ಉಳಿದ ಮೂರು ದಿಕ್ಕುಗಳಲ್ಲಿ ಹೊರ ಬಾಗಿಲುಗಳಿವೆ. ಈ ಎಲ್ಲಾ ಲಕ್ಷಣ ವೈಶಿಷ್ಟ್ಯಗಳಿಂದ ನಾಲ್ಕಂಕಣದ ಮನೆಗಳು 'ವಾಸ್ತು'ವನ್ನು ಅನುಸರಿಸಿಯೇ ನಿರ್ಮಾಣಗೊಂಡಿರುವುದು ಸ್ಪಷ್ಟವಾಗುತ್ತದೆ.

ವರ್ತಮಾನದಲ್ಲಿ ಈ ನಾಲ್ಕಂಕಣದ ಐನ್ ಮನೆಗಳು ವಿಭಕ್ತ ಕುಟುಂಬಗಳಾಗಿ, ತಮ್ಮ ಕೌಟುಂಬಿಕ ವ್ಯವಸ್ಥೆಯಲ್ಲಿ ಶೈಥಿಲ್ಯ ಕಂಡಿವೆ. ಹಿರಿಯ 'ಕುತ್ತಿ'ಗೆ ಐನ್ ಮನೆಯ ಉಸ್ತುವಾರಿ ತಲಾಂತರದಿಂದ ನಡೆದು ಬರುತ್ತಿತ್ತು. (ಕುತ್ತಿಯೆಂದರೆ ಒಬ್ಬ ತಂದೆಯ ವಿಭಾಗ). ಬಹುತೇಕ ನಾಲ್ಕಂಕಣದ ಮನೆಗಳಲ್ಲಿ ಕುಟುಂಬಸ್ಥರು ವಾಸವಾಗಿಲ್ಲ. ಆದರೂ ಈ ಮನೆಗಳನ್ನು ದೈವ ದೇವರ ನೆಲೆಯೆಂಬಂತೆ ರಕ್ಷಿಸಿಕೊಂಡು ಬರುತ್ತಿದ್ದಾರೆ. ಕುಂಚಡ್ಕ, ಉಳುವಾರು ಮನೆಗಳು ಬಿದ್ದು ಹಾಳಾಗಿದ್ದವು. ಆದರೆ ಈಗ ಆ ಮನೆತನಗಳ ಸದಸ್ಯರು, ಆ ಮನೆಗಳನ್ನು ಹೊಸದಾಗಿ ನಿರ್ಮಾಣ ಮಾಡಿ ಊರ್ಜಿತಗೊಳಿಸಿದ್ದಾರೆ. ಕುಟುಂಬ ಸದಸ್ಯರಿಂದಲೇ ರಚನೆಯಾದ ಸಮಿತಿಗಳ ಮೂಲಕ ಮೂಲ ಮನೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ದೈವ - ದೇವರ ನಿತ್ಯ ನೈಮಿತ್ತಾದಿ ಕಾರ್ಯಗಳನ್ನು ಕುಟುಂಬದಲ್ಲಿ ಬದುಕಿರುವ ಹಿರಿಯ ವ್ಯಕ್ತಿಗಳ ನಾಯಕತ್ವದಲ್ಲಿ ನಡೆಸುತ್ತಾರೆ. ನಾಲ್ಕಂಕಣದ ಮನೆಗಳನ್ನು ವಿಭಾಗ ಮಾಡುವ ಕ್ರಮವಿಲ್ಲ. ಮತ್ತು ಮನೆ ಒಬ್ಬನ ಆಸ್ತಿಯೆನ್ನುವ ಹಕ್ಕು ಬಾಧ್ಯತೆಗಳಿಗೆ ಗೌಣಸ್ಥಾನ. ವಿಭಕ್ತ ಕುಟುಂಬಗಳಾಗಿ ಈ ಮನೆತನಗಳಿಂದ ಹೊರಹೋಗಿ ಸ್ವಂತ ಆಸ್ತಿಗಳಲ್ಲಿ ನೆಲೆ ನಿಂತವರು ಈ ಮೂಲಸ್ಥಾನಗಳಲ್ಲಿ ನಡೆಯುವ ಪ್ರತಿಯೊಂದು ವಿಶೇಷಗಳಿಗೂ ಒಗ್ಗೂಡುತ್ತಾರೆ. ಆ ಮೂಲಕ ಗೌಡರ ಪರಂಪರೆಯ ಕಟ್ಟುಕಟ್ಟಳೆಯನ್ನು ಮುಂದುವರಿಸುತ್ತಾರೆ.

೬

ರಾಚನಿಕವಾಗಿ ಗೌಡರ ಐನ್‌ಮನೆಗಳು ವೈಶಿಷ್ಟ್ಯಪೂರ್ಣವಾಗಿರುವಂತೆ, ಐತಿಹಾಸಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ - ಆಡಳಿತಾತ್ಮಕವಾಗಿಯೂ ಮಹತ್ವವನ್ನು ಪಡೆದಿವೆ.

ಐತಿಹಾಸಿಕವಾಗಿ, ಗೌಡರು ತುಳುನಾಡಿನ ಮೂಲನಿವಾಸಿಗಳಲ್ಲ. ಇವರು ಹಾಸನದ ಐಗೂರು ಸೀಮೆಯಿಂದ ಬಂಗಾಡಿ, ಶಿರಾಡಿ, ಸುಬ್ರಹ್ಮಣ್ಯಗಳ ಮೂಲಕ ಇಳಿದು, ಈಗಿನ ದ.ಕ. ಜಿಲ್ಲೆಯ ಸುಳ್ಯ, ಪುತ್ತೂರು, ಬೆಳ್ತಂಗಡಿ, ಬಂಟ್ವಾಳ, ಕಾಸರಗೋಡಿನ ಪೂರ್ವಭಾಗ ಮತ್ತು ಕೊಡಗಿನ ಕರಿಕೆ, ಭಾಗಮಂಡಲಗಳಲ್ಲಿ ನೆಲೆ ನಿಂತವರು. ಸಂತಾನ ಬೆಳೆದಂತೆ ಹತ್ತು ಕುಟುಂಬ ಹದಿನೆಂಟು ಗೋತ್ರಗಳಾಗಿ ತಳವೂರಿದವರು.

ಗಂಗವಾಡಿಯಿಂದ ಆಳಿದ ಕರ್ನಾಟಕದ ಪ್ರಖ್ಯಾತ ರಾಜವಂಶ ಗಂಗರದ್ದು. ಮೂಲದಲ್ಲಿ ಇವರು ಒಕ್ಕಲಿಗರಾಗಿದ್ದರು. ಈ ಗಂಗರು ರಾಜಕೀಯವಾಗಿ ನಿಷ್ಕ್ರಿಯರಾದ ತರುವಾಯ ತಮ್ಮ ಮೂಲ ಕಸುಬಾದ ಒಕ್ಕಲುತನಕ್ಕೆ ಮುಖ ಮಾಡುವುದು ಅನಿವಾರ್ಯವಾಗಿತ್ತು. ಇವರು ಮುಂದೆ ಗಂಗಡಿಕಾರರೆಂದು ಹಾಸನ ಪರಿಸರದಲ್ಲಿ ವಿಸ್ತರಿಸಿಕೊಂಡರು. ಹೀಗೆ ವಿಸ್ತರಿಸಿಕೊಂಡ ಗಂಗಡಿಕಾರ ಒಕ್ಕಲಿಗ ಗೌಡರು ತುಳುನಾಡಿಗೂ ಭಿನ್ನ ಕಾರಣಗಳಿಗಾಗಿ ವಿಸ್ತರಿಸಿಕೊಂಡರು. ಗೌಡರು ತುಳುನಾಡಿಗೆ ಸೀಮೋಲ್ಲಂಘನ ಮಾಡಿರಬಹುದಾದ ಕಾಲದ ಬಗ್ಗೆ ಡಾ. ಪುರುಷೋತ್ತಮ ಬಿಳಿಮಲೆಯವರು ಅಭಿಪ್ರಾಯಪಡುವಂತೆ ಅದು ಕ್ರಿ. ಶ. ೧೪೦೦ - ೧೬೦೦ರ ಮಧ್ಯದ ಕಾಲಘಟ್ಟದಲ್ಲಿ ನಡೆದಿದೆ.[೨]

ಮೌಖಿಕ ಜಾನಪದ ವಿದ್ವಾಂಸರಾದ ಡಿ. ಜಿ. ನಡ್ಕರು ಗೌಡ ಜನಾಂಗದ ಐತಿಹಾಸಿಕ ಅವಲೋಕನ ಮಾಡುವಾಗ, ಕೆಳದಿ ಅರಸರು ಗೌಡರಾಗಿದ್ದರೆಂದು ವಾದಿಸಿ, ಜಾತಿ ಸಂಬಂಧಿಗಳಾದ ಗೌಡರನ್ನು ಅಧಿಕಾರ ಸ್ಥಾನಗಳಿಗಾಗಿ ಕಳುಹಿಸಿದ್ದರ ಕಾರಣಗಳಿಗಾಗಿ ತುಳುನಾಡಿಗೆ ಗೌಡರು ಬರುವಂತಾಯಿ ತೆನ್ನುತ್ತಾರೆ. ಕಾಲವನ್ನು ನಿರ್ಧರಿಸುವಾಗ ಅವರು ಕೆಳದಿ ಅರಸರಲ್ಲಿ ಪ್ರಖ್ಯಾತನಾದ ಸದಾಶಿವರಾಯನ ಕಾಲದಲ್ಲಿ (ಕ್ರಿ. ಶ. ೧೫೧೪ - ೪೬) ಈ ಪ್ರಕ್ರಿಯೆ ನಡೆದಿದೆ ಎನ್ನುತ್ತಾರೆ. ಸಾಕ್ಷಿಯಾಗಿ ಸುಳ್ಯ ತಾಲೂಕಿನ ಬಳ್ಪದ ತ್ರಿಶೂಲಿ ದೇವಸ್ಥಾನದ ಬಳಿಯ ಶಿಲಾ ಶಾಸನದ ಉಲ್ಲೇಖವನ್ನು ನೀಡುತ್ತಾರೆ. ತುಳುನಾಡಿನಲ್ಲಿ ಭೂತಾರಾಧನೆಯನ್ನು ಪ್ರಸಿದ್ಧಿಗೆ ಕೆಳದಿ ನಾಯಕರು ತಂದರು. ಈ ಕಾರ್ಯದಲ್ಲಿ ಸಕ್ರಿಯ ಪಾತ್ರ ವಹಿಸಿದವರು ಗೌಡ ಮನೆತನದ ಜನರು. ಆಗ ಆರಾಧನೆಗೊಳಪಟ್ಟ ಪ್ರಧಾನ ದೈವ ಗಳು ಅರಸು ದೈವಗಳಾಗಿವೆ. ಇದಕ್ಕೆ ಆಧಾರವಾಗಿ ಉಳ್ಳಾಕುಲು ದೈವಗಳನ್ನು ಉದಾಹರಿಸುತ್ತಾರೆ[೩]. ಈ ಹಿನ್ನೆಲೆಯಲ್ಲಿ ಗೌಡರ ನಾಲ್ಕಂಕಣದ ಐನ್ ಮನೆತನಗಳಲ್ಲಿ, ಉಳ್ಳಾಕುಲು ದೈವಗಳು ಇಂದು ಕೂಡ ಪ್ರಧಾನವಾಗಿ ಆರಾಧನೆಯಾಗುತ್ತಿರುವ ಅಂಶವನ್ನು ಗಮನಿಸಬಹುದು. ಉಳ್ಳಾಕುಲು ಪಾಡ್ದನವಲ್ಲಿನ ವಿವರಗಳು ಮತ್ತು ಐತಿಹ್ಯ ಪ್ರಕಾರ ಆರಂಭದಲ್ಲಿ ಈ ದೈವಗಳು ನೆಲೆಯಾದದ್ದು, ಘಟ್ಟದಿಂದ ಸುಬ್ರಹ್ಮಣ್ಯದ ಮೂಲಕ ಇಳಿದು ಬಂದು, ಎಣ್ಮೂರಿನ ಬಳಿಯ ಗೌಡರ ಮನೆಯಲ್ಲಿ. ಆರಂಭದಲ್ಲಿ ಬಂದು ನೆಲೆಯಾದ ಸ್ಥಳ ಈಗ 'ಆರಂಬಿ' ಎಂದೇ ಕರೆಯಿಸಿಕೊಳ್ಳುತ್ತವೆ. ಈ ಮೇಲಿನ

ಅಭಿಪ್ರಾಯಗಳು ಗೌಡರ ಮೂಲ ಮತ್ತು ತುಳುನಾಡಿಗೆ ಅವರು ವಲಸೆ ಬಂದಿರಬಹುದಾದ ಕಾಲದ ಕುರಿತಾದ ಚರ್ಚೆಗೆ ಖಚಿತತೆಯನ್ನು ಕೊಡುತ್ತವೆ.

ಮೂಲತಃ ಗೌಡರು ಕೃಷಿಗಾರರು. ಒಕ್ಕಲು ಮಾಡುವುದು ಕಸುಬು. ''ಘಟ್ಟದ ಮೇಲಿಂದ ಬಂದ ಈ ಒಕ್ಕಲಿಗ ಗೌಡರು ತುಳುನಾಡಿನಲ್ಲಿ ಗೌಡ ಜಾತಿವಾಚಕವನ್ನು ಉಳಿಸಿಕೊಂಡು ಒಕ್ಕಲಿಗ ಪೂರ್ವ ವಿಶೇಷಣವನ್ನು ಬಿಟ್ಟಿದ್ದಾರೆ'' (ಎಂ. ಶಿವಣ್ಣ ನೆಲಮನೆ, ೧೯೯೬, ವೀಳ್ಯ). ದಟ್ಟ ಕಾಡು ಗಳಿಂದ ಕೂಡಿದ್ದ ಸುಳ್ಯ ಪರಿಸರದ ಕಡೆ ನೆಲೆ ನಿಂತ ಗೌಡರು ಸ್ವತಂತ್ರವಾದ ಗೌಡ ಕನ್ನಡವನ್ನು ಸೃಷ್ಟಿಸಿಕೊಂಡರು. ತರುವಾಯದಲ್ಲಿ ಈ ಗೌಡರು ಕಾಸರಗೋಡು ಕೊಡಗು ಪ್ರದೇಶಗಳಿಗೂ ವಿಸ್ತರಿಸಿ ಕೊಂಡರು. ವರ್ಗ - ಪಟ್ಟಾ ಭೂಮಿಗಳ ಒಡೆಯರಾಗಿ ಆರ್ಥಿಕವಾಗಿಯೂ ಗಟ್ಟಿಯಾಗಿ ನೆಲೆಯಾದರು. ಬಂಗಾಡಿ, ಶಿರಾಡಿಗಳ ಮೂಲಕ ಅಚ್ಚ ತುಳುನಾಡಿಗೆ ಇಳಿದ ಗೌಡರು, ಮೊದಲೇ ಇಲ್ಲಿ ನೆಲೆಯಾಗಿದ್ದ ಸಮುದಾಯಗಳ ಭಾಷೆಯಾದ ತುಳುವಿಗೆ ಒಗ್ಗಿಕೊಂಡರು. ಆಸ್ತಿ ಭೂಮಿಗಳ ಒಡೆಯರಾಗಿದ್ದ ಜೈನ, ಬಂಟ ಮೊದಲಾದ ಮೇಲ್ವರ್ಗದವರ ಗೇಣಿ ಒಕ್ಕಲುಗಳಾದರು. ಆರ್ಥಿಕವಾಗಿ, ಸಾಮಾಜಿಕ ವಾಗಿ, ಅಧಿಕಾರ ಶಕ್ತಿಗಳಾಗಿ ಗುರುತಿಸಿಕೊಳ್ಳಲು ವಿಫಲರಾದರು. ಭೂಸುಧಾರಣೆ ಕಾಯ್ದೆ ಅನುಷ್ಠಾನ ವಾಗುವಲ್ಲಿ ವರೆಗೆ ಈ ಸ್ಥಿತಿಯಿಂದ ಹೊರಬರಲು ಬಹುಸಂಖ್ಯೆಯ ತುಳುಭಾಷಿಕ ಗೌಡರು ಕಾಯ ಬೇಕಾಯಿತು. ತುಳುಭಾಷಿಕ ಗೌಡರಲ್ಲಿ ನಾಲ್ಕಂಕಣದ ಮನೆಗಳು ವಿರಳವಾಗಿರುವುದಕ್ಕೆ ಇದು ಮುಖ್ಯ ಕಾರಣವಾಗಿದೆ. ಅರೆಭಾಷಿಕ ಗೌಡರ ಐನ್ ಮನೆತನಗಳು ಸಮಾಜದೊಂದಿಗೆ ಹೊಂದಿರುವ ಸಂಬಂಧಗಳೊಂದಿಗೆ, ತುಳುಭಾಷಿಕ ಗೌಡರ ಮನೆತನಗಳು ಸರಿಸಮಾನವಾಗಿ ನಿಲ್ಲುವಲ್ಲಿ ವಿಫಲವಾಗಿವೆ. ಈಗ ಬದಲಾದ ಕಾಲದಲ್ಲಿ ಈ ವ್ಯತ್ಯಾಸ ಕಾಣದೇ ಇರಬಹುದಾದರೂ ಐತಿಹಾಸಿಕ ವಾಗಿ ಈ ವ್ಯತ್ಯಾಸ ಇದ್ದೇ ಇತ್ತು.

ಮೌಖಿಕ ಆಧಾರದ ಮೇಲೆ ಹೇಳುವುದಾದರೆ, ಗೌಡರ ಐನ್ ಮನೆಗಳಿಗೆ ಸುಮಾರು ೧೦೦ ರಿಂದ ೨೫೦ ವರ್ಷಗಳ ಇತಿಹಾಸವಿದೆ. ಜನಪದರ ಭೌತಿಕ ಬದುಕಿನ ವಾಸ್ತವಗಳಿಗೆ ಸಂಬಂಧಿಸಿದಂತೆ ಯಾವುದೇ ಇತಿಹಾಸ ಕೃತಿಗಳಲ್ಲಿ ದಾಖಲೆಗಳು ಸಿಗುವುದಿಲ್ಲ. ಅಷ್ಟರ ಮಟ್ಟಿಗೆ ಇತಿಹಾಸದಿಂದ ಜನಪದರು ದೂರ ಉಳಿದಿದ್ದಾರೆ. ಇತಿಹಾಸದಿಂದ ಜನಪದರು ಅವಗಣನೆಗೊಳಗಾದ ಕುರಿತು ಡಾ. ಬಿ.ಎ. ವಿವೇಕ ರೈಯವರು ಹೊಂದುವ ಅಭಿಪ್ರಾಯ ಅರ್ಥಪೂರ್ಣವಾಗಿದೆ.

''ಇತಿಹಾಸ ಗ್ರಂಥಗಳಲ್ಲಿ ಸಾಮಾನ್ಯವಾಗಿ ನಮಗೆ ದೊರಕುವುದು ಬರೆಹ ಬಲ್ಲವರ ಜೀವನ ವೃತ್ತಾಂತ ಸೂತ್ರ. ಶಾಸನಗಳ ರಚನೆಗಳಂತೂ ಬಹುಪಾಲು ಆಳುವವರ ಅಧಿಕಾರಸ್ಥರ ನಿರ್ದೇಶನದಲ್ಲಿ ನಿರ್ಮಿತವಾದವುಗಳಾದ್ದರಿಂದ ಅವುಗಳಲ್ಲಿ ನಮಗೆ ಸಿಗುವುದು ರಾಜರುಗಳ ವೈಭವ. ಅವರು ನಡೆಸಿದ ಯುದ್ಧಗಳು, ಅವರ ನಡುವಿನ ಪರಸ್ಪರ ಒಪ್ಪಂದಗಳು, ಅವರು ಕೊಟ್ಟ ದಾನಗಳ ಪ್ರಶಂಸೆ. ಅವರಿಗಾಗಿ ಹೋರಾಡಿ ತಮ್ಮ ಪ್ರಾಣವನ್ನರ್ಪಿಸಿದ ವೀರ ಯೋಧರ ಉಲ್ಲೇಖ. ಅವರ ವೈಭವ ಪ್ರತೀಕಗಳಾದ ದೇವಾಲಯಗಳು ಮತ್ತು ಮಠಗಳು ಹಾಗೂ ಆಳುವವರ ಸಂಸ್ಕೃತಿಯುಳ್ಳ ಆರ್ಥಿಕ ವ್ಯವಸ್ಥೆಯ ಚಿತ್ರಣ'' (೧೯೮೫, ಅನ್ವಯಿಕ ಜಾನಪದ ಪುಟ ಸಂ. ೬೫). ಇತಿಹಾಸದಲ್ಲಿ ದಾಖಲಾಗದೆ

ಇರುವ ಗೌಡರ ಐನ್‌ಮನೆಗಳಿಗೂ ಈ ಮಾತು ಅನ್ವಯಿಸುತ್ತದೆ.

ಸಾಮಾಜಿಕವಾಗಿ ಗೌಡರ ಐನ್‌ಮನೆಗಳು ಗೌಡ ಸಮಾಜದ ಕಟ್ಟಳೆಗಳ ಮೇಲುಸ್ತುವಾರಿಯನ್ನು ನೋಡಿಕೊಳ್ಳುವ ಜವಾಬ್ದಾರಿಯನ್ನು ನಿರ್ವಹಿಸುತ್ತವೆ. ಊರು, ಗ್ರಾಮಗಳಲ್ಲಿ ಜರಗುವ ಜಾತ್ರೆ, ದೈವಗಳ ನೇಮ, ಕೋಲ ಉತ್ಸವಾದಿ ಆರಾಧನಾ ಸಂದರ್ಭಗಳಲ್ಲಿ ವಿಶೇಷ ಮನ್ನಣೆ ಪಡೆಯುತ್ತವೆ. ಸ್ವತಃ ತಾವೇ ನಾಯಕತ್ವ ವಹಿಸಿ ಇಂತಹ ಕಾರ್ಯಗಳನ್ನು ಗ್ರಾಮಗಳಲ್ಲಿ ನಡೆಸುತ್ತಾರೆ. ದೈವಗಳ ಪ್ರಸಾದ ವಿತರಣೆ ಮುಂತಾದ ಸಂದರ್ಭಗಳಲ್ಲಿ ಐನ್‌ಮನೆಗಳನ್ನು ಮೊದಲಾಗಿ ಗುರುತಿಸಲಾಗುತ್ತದೆ. ಇಡಿ ತೆಂಗಿನಕಾಯಿಯ ಮರ್ಯಾದೆ ನೀಡಲಾಗುತ್ತದೆ. ಹೀಗೆ ಸಮಾಜದಲ್ಲಿ ಈ ಮನೆತನಗಳು ಅನನ್ಯವಾದ ರೀತಿಯ ಗುರುತಿಸುವಿಕೆಗೆ ಒಳಗಾಗಿವೆ.

ಕುಟುಂಬವು ಗೌಡ ಸಮಾಜದ ಪ್ರಾಥಮಿಕ ಘಟಕ. ಪಿತೃ ಪ್ರಧಾನ ವ್ಯವಸ್ಥೆಯ ಗೌಡರ ಕುಟುಂಬದಲ್ಲಿ ನಡೆಯುವ ಜೀವನಾವರ್ತನದ ಹುಟ್ಟು - ಮದುವೆ - ಸಾವು ಮೊದಲಾದ ಆಚರಣೆಗಳಲ್ಲಿ ಊರ ಗೌಡ ಪ್ರಧಾನ ಸ್ಥಾನವನ್ನು ನಿರ್ವಹಿಸುತ್ತಾನೆ. ಇವನ ಗೈರುಹಾಜರಿಯಾದರೆ, 'ಒತ್ತು ಗೌಡ' ನಿರ್ವಹಿಸುತ್ತಾನೆ. ಆರು ಊರುಗಳ ಊರ ಗೌಡರ ಮೇಲ್ವಿಚಾರಣೆಗೆ ಒಬ್ಬ ಮಾಗಣೆ ಗೌಡ ಇರುತ್ತಾನೆ. ಎಂಟು ಮಾಗಣೆ ಗೌಡರಿಗೆ ಒಬ್ಬ ಕಟ್ಟೆಮನೆ ಗೌಡ ಇರುತ್ತಾನೆ. ತುಳುನಾಡಿನಲ್ಲಿ ವಾಸಿಸುವ ಗೌಡ ಸಮಾಜಕ್ಕೆ ಎರಡು ಕಟ್ಟೆಮನೆಗಳಿವೆ. ಒಂದು ಪಡು ಬಲ್ನಾಡು ಕಟ್ಟೆ ಮನೆ, ಇನ್ನೊಂದು ಮೂಡು ಕೂಜುಗೋಡು ಕಟ್ಟೆಮನೆ. ಈ ಎರಡು ಕಟ್ಟೆಮನೆಗಳು ತುಳು ಮತ್ತು ಅರೆಭಾಷಿಕ ಗೌಡರನ್ನು ಹೊಂದಿಕೊಂಡಂತೆ, ತಮ್ಮ ವ್ಯಾಪ್ತಿಗೆ ಬರುವ ಗೌಡ ಸಮಾಜದ ಮೇಲುಸ್ತುವಾರಿಯನ್ನು ನೋಡಿಕೊಳ್ಳುತ್ತವೆ. ಗೌಡ ಸಮಾಜದ ವಾದ ವಿವಾದಗಳ ಇತ್ಯರ್ಥ ಕಟ್ಟೆಮನೆ ಗಳಲ್ಲಿ ಆಗದಿದ್ದಾಗ ಶೃಂಗೇರಿ ಗುರುಪೀಠಕ್ಕೆ ದೂರನ್ನು ಸಲ್ಲಿಸಿ ಪರಿಹಾರ ಪಡೆಯಲಾಗುತ್ತದೆ. ಗೌಡರ ಮದುವೆಗಳಿಂದ ಸಂಗ್ರಹವಾಗುವ 'ಗುರುಪಣ'ವನ್ನು ಶೃಂಗೇರಿ ಗುರು ಪೀಠಕ್ಕೆ ಸಲ್ಲಿಸುವ ಜವಾಬ್ದಾರಿಯನ್ನು ಕಟ್ಟೆಮನೆಗಳು ನಿರ್ವಹಿಸುತ್ತವೆ.[೮] ಗೌಡ ಸಮಾಜದ ಎರಡು ಕಟ್ಟೆಮನೆಗಳು ಐನ್ ಮನೆತನಗಳಾಗಿದ್ದು, ನಾಲ್ಕಂಕಣದ ಮನೆ ಬಲ್ನಾಡು ಕಟ್ಟೆಮನೆ ಮಾತ್ರ ಇದೆ. ಗೌಡ ಸಮಾಜದ ಉಸ್ತುವಾರಿಯನ್ನು ನಿರ್ವಹಿಸುವಲ್ಲಿ ಕಟ್ಟೆಮನೆಗಳು ಈಗೀಗ ನಿಷ್ಕ್ರಿಯವಾಗುತ್ತಾ ಬಂದಿವೆ.

ರಾಜಕೀಯ - ಆಡಳಿತಾತ್ಮಕವಾಗಿ, ಸುಳ್ಯ ಪರಿಸರದ ಮುಖ್ಯ ಮನೆತನಗಳಿಗೆ ಕೊಡಗರಸರ ಕಾಲದಿಂದ ಅಧಿಕಾರ ಸ್ಥಾನಮಾನಗಳಿದ್ದುವು. ಈ ಹಿನ್ನೆಲೆ ಅವರಿಗೆ ಉನ್ನತ ಸ್ಥಾನಮಾನಗಳನ್ನು ಕಲ್ಪಿಸಿತು. ಇದರಿಂದ ಸಹಜವಾಗಿಯೇ ಊರು ಗ್ರಾಮಗಳ ಆಗುಹೋಗುಗಳಲ್ಲಿ ಇವರ ಅಧಿಕಾರಸ್ಥಾನ ರೂಪುಗೊಂಡಿತು. ದೈವ - ಭೂತಗಳ ಆರಾಧನೆಗಳಲ್ಲಿ ನೇತೃತ್ವ ವಹಿಸುವ, ದೇವಸ್ಥಾನಗಳಲ್ಲಿ ಮುಕ್ತೇಸರಿಕೆ ಅಧಿಕಾರ ವಂಶ ಪಾರಂಪರ್ಯವಾಗಿ ಅನುಭೋಗಕ್ಕೆ ಹರಿದು ಬಂದಿತು. ಇದರೊಟ್ಟಿಗೆ ತಮ್ಮ ಅಧಿಕಾರಶಾಹಿತ್ವವನ್ನು ನಿರಂತರವಾಗಿಸುವ ಪ್ರಯತ್ನವಾಗಿ ತಮ್ಮ ವಾಸದ ಮನೆಗಳನ್ನು ಸಾಮಾನ್ಯರಿಗಿಂತ ಭಿನ್ನವಾಗಿ, ದೈವ ದೇವರ ಸ್ಥಾನದ ನೆಲೆಯನ್ನಾಗಿಸಿ, ನಿರ್ಮಾಣ ಮಾಡಿಕೊಂಡರು. ನಾಲ್ಕಂಕಣದ ಐನ್ ಮನೆಯ ಚಾವಡಿ, ಅಲ್ಲಿರುವ ಜೋಟಿಗೆ ಕಂಬಗಳ ಗಾತ್ರ ಮತ್ತು ವಿನ್ಯಾಸಗಳು,

ಒಟ್ಟಾಗಿ ಅವುಗಳು ರೂಪಿಸುವ ಭವ್ಯತೆ, ಈ ಮನೆಯನ್ನು ಸಾಮಾನ್ಯ ಮನೆಗಿಂತ ಪ್ರತ್ಯೇಕಿಸುತ್ತವೆ. ಈ ಮನೆಯ ಚಾವಡಿಗೆ ಬರುವ ಯಾವುದೇ ವಿವಾದಗಳು, ನ್ಯಾಯದ ಕಟ್ಟೆಯ ಮೇಲೆ ಕೂತ ಯಜಮಾನ ದೈವದ ಪ್ರತಿನಿಧಿಯೆನ್ನುವ ಅಲೌಕಿಕ ನಂಬಿಕೆಯಲ್ಲಿ ಸುಲಭವಾಗಿ ತೀರ್ಮಾನವಾಗುತ್ತವೆ.

ನಾಲ್ಕಂಕಣದ ಐನ್ ಮನೆಗಳಿಗೆ ಬ್ರಿಟಿಷರ ಕಾಲದಿಂದ ಮುನ್ನ, ಊರ ಪಟೇಲ ಸ್ಥಾನ ಇದ್ದುದ್ದು ದಾಖಲೆಗಳಿಂದ ತಿಳಿದು ಬರುತ್ತದೆ. ಗ್ರಾಮಾಧಿಕಾರ ಪಂಚಾಯತ್ ವ್ಯವಸ್ಥೆಯಡಿಗೆ (೧೯೬೦ರ ದಶಕದಲ್ಲಿ) ಸೇರಿದಾಗ ಪಟೇಲ್ ಸ್ಥಾನವು ಕಳಚಿಕೊಂಡಿತು. ಆದರೂ ಅದರ ಪಳೆಯುಳಿಕೆಯಾಗಿ ಇವತ್ತು ಕೂಡ ಈ ಮನೆತನದವರು ತಮ್ಮ ಹೆಸರಿನ ಮುಂದೆ 'ಪಟೇಲ್' ಪದವನ್ನು ಇಟ್ಟುಕೊಂಡು ತಾನು ಪಟೇಲ್ ಮನೆತನದವರೆಂದು ಸಮಾಜದಲ್ಲಿ ಗುರುತಿಸಿಕೊಳ್ಳುತ್ತಾರೆ.

ರಾಜಕೀಯವಾಗಿ ಐನ್ ಮನೆತನಗಳವರು ನಿರ್ವಹಿಸಿದ ಮಹತ್ತರ ಪಾತ್ರದ ಹಿನ್ನೆಲೆಯಲ್ಲಿ ೧೮೩೦ರ ದಶಕದಲ್ಲಿ ಸುಳ್ಯವನ್ನು ಕೇಂದ್ರವಾಗಿರಿಸಿಕೊಂಡು ತುಳುನಾಡಿನಲ್ಲಿ ಪಸರಿಸಿದ್ದ ಬ್ರಿಟಿಷರ ವಿರುದ್ಧದ 'ಅಮರ ಸುಳ್ಯದ ಸಮರ'ದ ಸಂದರ್ಭವನ್ನು ಗಮನಿಸಬೇಕು. ಭತ್ತವನ್ನು ಹಣಕ್ಕೆ ಮಾರಿ ಆ ಮೂಲಕ ಕಂದಾಯ ಸಲ್ಲಿಸುವ ಬ್ರಿಟಿಷರ ಆರ್ಥಿಕ ನೀತಿಯನ್ನು ವಿರೋಧಿಸಿ, ಸುಳ್ಯ ಮಡಿಕೇರಿ - ಕಾಸರಗೋಡು, ಪುತ್ತೂರು, ಬೆಳ್ತಂಗಡಿ ಪರಿಸರದ ಎಲ್ಲಾ ಸಮುದಾಯದ (ಗೌಡ, ಬಂಟ, ಜೈನ, ಬ್ಯಾರಿ, ಕುಡಿಯ) ಜನರು ೧೮೩೭ರಲ್ಲಿ ಅಮರ ಸುಳ್ಯದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾರಣಕರ್ತರಾದರು. ಈ ಹೋರಾಟದಲ್ಲಿ ಪ್ರಧಾನ ಪಾತ್ರ ವಹಿಸಿದವರು ಗೌಡರು. ಅದರಲ್ಲೂ ಹೋರಾಟದ ನಾಯಕತ್ವ ವಹಿಸಿದವರು ಐನ್ ಮನೆತನದವರು. ಪ್ರಭಾವಿ ವ್ಯಕ್ತಿತ್ವದ ನಾಯಕ ಕೆದಂಬಾಡಿ ರಾಮೇ ಗೌಡ, ಕುಂಚಡ್ಕ ತಿಮ್ಮ, ಯಾನೆ ರಾಮ ಗೌಡ ಯಾನೆ ಕೆಂಚೆ ಗೌಡ (ಬ್ರಿಟಿಷ್ ಅಧಿಕಾರಿಗಳ ದಾಖಲೆಗಳಲ್ಲಿ, ಕಾರಣಾಂತರದಿಂದ ಈ ವ್ಯಕ್ತಿಯ ಹೆಸರು ಭಿನ್ನವಾಗಿದೆ) ಕುಡಕಲ್ಲು ಪುಟ್ಟ, ದೇರಾಜೆಯ ಬಟ್ಟ, ಕೂಜುಗೋಡು ಕಟ್ಟೆಮನೆಯ ಮಲ್ಲಪ್ಪ - ಅಪ್ಪಯ ಸಹೋದರರು ಇವರೆಲ್ಲರೂ ಐನ್ ಮನೆತನಗಳ ಗೌಡ ಯೋಧರು.

ಈ ಹೋರಾಟದ ಹಿನ್ನೆಲೆಗೆ ಬ್ರಿಟಿಷರ ಆರ್ಥಿಕ ನೀತಿ ಒಂದು ಕಾರಣವಾದರೆ, ಲಿಂಗಾಯಿತ ಕೊಡಗರಸ ಚಿಕವೀರನನ್ನು ಬ್ರಿಟಿಷರು ಉಪಾಯವಾಗಿ ಪದಚ್ಯುತಗೊಳಿಸಿದ್ದು ಇನ್ನೊಂದು ಕಾರಣವಾಗಿತ್ತು. ಹೋರಾಟವನ್ನು ಸುಳ್ಯದಲ್ಲಿ ಜೀವಂತಗೊಳಿಸಿದ ಗೌಡರಿಗೂ, ಕೊಡಗರಸರಿಗೂ, ಜಾತಿ ಮತ್ತು ರಾಜಕೀಯ ಅಧಿಕಾರದ ಹಿನ್ನೆಲೆಯಲ್ಲಿ ಆಪ್ತತೆ ಇತ್ತು. ಕೊಡಗಿನ ಅರಸರಿಗೂ ಸುಳ್ಯದಲ್ಲಿ ಹೋರಾಟದ ನಾಯಕತ್ವ ವಹಿಸಿದ ಕೆದಂಬಾಡಿ ರಾಮೇಗೌಡ, ಕುಡಕಲ್ಲು ಪುಟ್ಟ, ಗೌಡರ ಮನೆತನಗಳಿಗೂ ಮತ - ಜಾತಿ ಸಂಬಂಧಿ ವಿಚಾರವಾಗಿ ಸಂಬಂಧವಿದೆ. ಗೌಡರ ಬಳಿ ಪದ್ಧತಿ ಪ್ರಕಾರ ಸುಳ್ಯದ ಅರೆಭಾಷಿಕ ಗೌಡರ, ಬಳ್ಳಡ್ಕ ಸುಳ್ಯಕೋಡಿ, ಕಾನತ್ತಿಲ, ಕುದ್ಪಾಜೆ, ಕುಡಕಲ್ಲು, ಕೂಟೇಲು, ಕ್ಯೊಂಗಾಜೆ, ಪರಿವಾರ ಮತ್ತು ಕೆದಂಬಾಡಿ ಈ ಒಂಬತ್ತು ಮನೆತನದವರು ಮೂಲದಲ್ಲಿ ಒಂದೇ ಆಗಿದ್ದು ಕಬರು ಬಳಿಯವರು. ಈ ಬಳಿಯ ಕುರಿತಾದ ಒಂದು ಪ್ರತೀತಿ ಇದೆ. ಈ ಪ್ರತೀತಿ ಪ್ರಕಾರ ಈ 'ಕಬರು ಬಳಿ' ಗೌಡರು ಮೂಲದಲ್ಲಿ ಲಿಂಗಾಯಿತರು. ಇವತ್ತು ಕೂಡ ಈ

ಗೌಡರು ಅಡ್ಡ ಭಸ್ಮಧಾರಣೆ ಮಾಡುತ್ತಾರೆ. ಕೊಡಗರಸರ ಪರವಾಗಿ ನಿಂತು ಹೋರಾಡಿದ ನಾಯಕ ಕೆದಂಬಾಡಿ ರಾಮೇಗೌಡ ಈ ಕಬರು ಬಳಿ ಮನೆತನದವನು.

ಇನ್ನೊಂದು ಪ್ರತೀತಿ ಪ್ರಕಾರ, ಕೊಡಗಿನಲ್ಲಿ ಕೆಂಡದ ಮಳೆ ಬಂದು, ಜನ ಸಂತತಿ ವಿರಳವಾಯಿತು. ಆ ಸಂದರ್ಭದಲ್ಲಿ ಕೊಡಗರಸರು ಸುಳ್ಯ ಪರಿಸರದಿಂದ ಗೌಡರನ್ನು ಬರಮಾಡಿಕೊಂಡು ಭೂಮಿ ಉಂಬಳಿ ಕೊಟ್ಟರೆಂದು ಹೇಳಲಾಗುತ್ತದೆ.

ಸುಳ್ಯದ ನಾಲ್ಕಂಕಣದ ಐನ್ ಮನೆತನಗಳಿಂದ ಕುಡಕಲ್ಲು, ಕುಂಚಡ್ಕ, ಉಳುವಾರು, ದೇರಾಜೆ ಮನೆತನಗಳ ಕವಲುಗಳು ಕೊಡಗಿನ ಮೂರ್ನಾಡು ಮೊದಲಾದ ಭಾಗಗಳಲ್ಲಿ ಇಂದು ಕೂಡ ನೆಲೆಯಾಗಿವೆ. ಅವರು ಮೇಲೆಮನೆ, ಕುಡಕಲ್ಲು, ಕುಂಚಡ್ಕ, ಉಳುವಾರ್, ದೇರಾಜೆಯೆಂದು ತಮ್ಮ ಮನೆಗಳನ್ನು ಪರಿಚಯಿಸಿಕೊಳ್ಳುತ್ತಾರೆ. ಕೊಡಗರಸರಿಂದ ಉಂಬಳಿಯಾಗಿ ಬಂದ ಭೂಮಿಯನ್ನು ಅನುಭೋಗಿಸುತ್ತಿದ್ದಾರೆ. ಹೀಗೆ ಹೋದ ಕುಟುಂಬಗಳಲ್ಲಿ ಕೂಜುಗೋಡು ಮನೆತನದ ಒಂದು ಕವಲು ಮಡಿಕೇರಿಯ ಸಮೀಪದ ಮಕ್ಕಂದೂರಿನಲ್ಲಿದೆ. ಅದರ ಯಜಮಾನ ಕುಂಬ ಗೌಡ ಲಿಂಗರಾಜನ ಆತ್ಮೀಯ ಸ್ನೇಹಿತನಾಗಿದ್ದ. ಲಿಂಗರಾಜ ಕೊಡಗರಸರ ಮೂಲಸ್ಥಾನ ಹಾಲೇರಿಯ ಮನೆಯ ರಕ್ಷಣೆಯ ಭಾರವನ್ನು ಈ ಕುಂಬ ಗೌಡನಿಗೆ ಹೊರಿಸಿದ್ದ. ಈ ಹಿನ್ನೆಲೆಗಳನ್ನು ಗಮನಿಸಿದರೆ ಜೀವನ ನಿರ್ವಹಣೆಗೆ ಉಂಬಳಿಯನ್ನು, ಅಧಿಕಾರ ಸ್ಥಾನವನ್ನು ಕೊಟ್ಟು, ಮತ ಸಂಬಂಧಿ ಲಿಂಗಾಯತ ಅರಸರನ್ನು ಕೊಡಗಿನಲ್ಲಿ ಮರುಸ್ಥಾಪನೆ ಮಾಡುವ ಪ್ರಯತ್ನ ಈ ಹೋರಾಟದಲ್ಲಿ ಅಡಗಿತ್ತೆಂದು ಊಹಿಸಲು ಸಾಧ್ಯತೆ ಇದೆ. ಈ ಪ್ರಯತ್ನವಾಗಿ ಪುಟ್ಟ ಬಸಪ್ಪನೆಂಬ ವ್ಯಕ್ತಿಯನ್ನು ಕಲ್ಯಾಣಪ್ಪನ ಹೆಸರಿನಲ್ಲಿ, ಅವನನ್ನು ಕೊಡವರಸರ ವಾರಸುದಾರನೆಂದು ಜನರಿಗೆ ಪರಿಚಯಿಸಲಾಯಿತು. ಹದಿಮೂರು ದಿನಗಳಲ್ಲಿ ಈ ಹೋರಾಟ ಸಫಲತೆಯನ್ನು ಹಾಗೆ ವಿಫಲವನ್ನು ಕಂಡಿತು. ತಮ್ಮ ವಿರುದ್ಧವಾಗಿ ಹೋರಾಡಿದ ಕಾರಣಕ್ಕಾಗಿ ಬ್ರಿಟಿಷರು ಸುಳ್ಯದ ಗೌಡ ಮನೆತನಗಳು ಹೊಂದಿದ್ದ ಮುನ್ಸಿ ಇತ್ಯಾದಿ ಅಧಿಕಾರ ಪದವಿಗಳನ್ನು ಕಿತ್ತುಕೊಂಡರು. ಆದರೆ ಬ್ರಿಟಿಷರ ವಿರುದ್ಧ ಮೊತ್ತಮೊದಲು ಸ್ವಾತಂತ್ರ್ಯ ಸಂಗ್ರಾಮವನ್ನು ಹೂಡಿದ ಅಮರ ಸುಳ್ಯದ ಹೆಸರು ಮಾತ್ರ ನೆನಪಿನಲ್ಲಿ ಉಳಿಯುವಂತಾಯಿತು. ಇದರಲ್ಲಿ ಐನ್ ಮನೆಗಳ ಪಾತ್ರ ಮಹತ್ತರವಾದುದು.

ಆರ್ಥಿಕ ಮತ್ತು ಧಾರ್ಮಿಕ ಸಂಗತಿಗಳು ಸಾಮಾನ್ಯವಾಗಿ ಒಂದಕ್ಕೊಂದು ಪೂರಕವಾಗಿರುತ್ತವೆ. ಐನ್‌ಮನೆಗಳ ಸಂದರ್ಭದಲ್ಲಿ ಈ ಅಂಶ ಬಹಳಷ್ಟು ಸ್ಪಷ್ಟವಾಗಿದೆ. ಐನ್ ಮನೆತನಗಳು ಗೇಣಿ ಒಕ್ಕಲುಗಳಾಗಿರದೆ ಪಟ್ಟ ಭೂಮಿ ಹೊಂದಿದವುಗಳು. ಬಲ್ನಾಡು ಕಟ್ಟೆಮನೆ, ಕುಂಚಡ್ಕ ಮನೆತನದ ಕಲ್ಲೆಂಬಿಯ ಭೂಮಿ, ಉಳುವಾರು ಮನೆತನದ ಆಸ್ತಿಗಳು ಮೂಲದಲ್ಲಿ ನಿಸ್ಸಂತತಿ ಬಲ್ಲಾಳ ಸಾಮಂತರಿಂದ. ಉದಾರವಾಗಿ ಬಂದವುಗಳು. ಈ ಸಂಬಂಧವಾಗಿ ಉಳ್ಳಾಕುಲು ದೈವಗಳ ಮದಿಪುಗಳಲ್ಲಿ ಆಧಾರ ಸಿಗುತ್ತದೆ. ಬಲ್ನಾಡು ಕಟ್ಟೆ ಮನೆಯಲ್ಲಿ ನಡೆಯುವ ದಂಡನಾಯಕ ನೇಮ ದಲ್ಲಿ, ಉಳ್ಳಾಕುಲು ದೈವಗಳು ''ಉಂದು ಬಂಗಾರ್ ಬಲ್ಲಾಕುಳೆ ನಿಲೆ, ಅಳಿಯ ಕಟ್ಟ್ ದೆತ್ತ್‌ದ್ ಮಕ್ಕಳ್ ಕಟ್ಟ್ ದೆರ್ತ್ ಪತ್ಯೋ'' ಎಂದು ಮದಿಪು ಮಾಡುತ್ತವೆ. ಉಳುವಾರು ಮೂಲಸ್ಥಾನದಲ್ಲಿ

ಆರಾಧನೆಗೊಳ್ಳುವ ಉಳ್ಳಾಕುಲು ದೈವಗಳು ತಮ್ಮ ಮದಿಪ್ಪುವಿನಲ್ಲಿ ''ಬಲ್ಲಾಳ್ರ್ ಪ್ರತಿ ಬಲ್ಲಾಳಾಪ್ ಉಳುವಾರ್ದ ಕುಳೆ ಕೈ ಸೇರೊಂಡೊ'' ಎಂದು ಉಲ್ಲೇಖಿಸುತ್ತದೆ. ಈ ಉಲ್ಲೇಖಗಳ ಪ್ರಕಾರ ಐನ್‌ಮನೆಗಳ ಆಸ್ತಿ ಮತ್ತು ದೈವಗಳು ವರ್ಗಾವಣೆಗೊಂಡ ಬಗೆಗಿನ ವಿವರಗಳು ತಿಳಿಯುತ್ತವೆ.

ಧಾರ್ಮಿಕ ಕಾರಣಗಳಿಗಾಗಿ ಐನ್‌ಮನೆಗಳಿಗೆ ಮತ್ತು ದೇವಸ್ಥಾನಗಳಿಗೆ ನೇರ ಸಂಬಂಧ ವೇರ್ಪಡುತ್ತದೆ. ಸೀಮೆ ದೇವಸ್ಥಾನಗಳಿಗೆ ಹೊಂದಿಕೊಂಡಂತೆ 'ಸೀಮೆಕಳ' ಮನೆಯೆಂದು ಗುರುತಿಸಿ ಕೊಳ್ಳುತ್ತವೆ. ದೇವಸ್ಥಾನಗಳಲ್ಲಿ ಆರಾಧನೆಗೊಳ್ಳುವ ದೈವಗಳ, ಮುಖ್ಯವಾಗಿ ಉಳ್ಳಾಕುಲು ಭಂಡಾರ ಐನ್‌ಮನೆಗಳಲ್ಲಿರುತ್ತದೆ. ಪುತ್ತೂರು ಮಹಾಲಿಂಗೇಶ್ವರ ದೇವಸ್ಥಾನಕ್ಕೆ ಬಲ್ನಾಡು ಕಟ್ಟೆ ಮನೆಯಿಂದ, ಸುಳ್ಯ ಸೀಮೆ ದೇವಸ್ಥಾನ ತೋಡಿಕಾನಕ್ಕೆ ಉಳುವಾರಿನಿಂದ ಈ ದೇವಸ್ಥಾನಗಳ ಜಾತ್ರೋತ್ಸವದ ಸಂದರ್ಭದಲ್ಲಿ ಭಂಡಾರ ಹೋಗುತ್ತದೆ. ಈ ಸಂಬಂಧಿಯಾದ ಪಾತ್ರಿಯ ನುಡಿಯೊಂದನ್ನು ಇಲ್ಲಿ ಆಧಾರವಾಗಿ ಉಲ್ಲೇಖಿಸಬಹುದು. ''ಬಲ್ನಾಡೆರಡೂರುಡ್ದು ಪುತ್ತೂರು ಪಳ್ನಾಡ್ ಮಾಲಿಂಗೇಶ್ವರ ದೇವೆರೆ ಭೇಟಿಯಾರೆ ದೆತ್ತಿಂಚಿ ಕಿರುವತ್ತಿ ನೆಲ್ಲಿತ್ತಾಯರೆ''. ದೈವಗಳ ಮೂಲಕ ದೇವಸ್ಥಾನ ಮತ್ತು ಐನ್‌ಮನೆಗಳಿಗೆ ಏರ್ಪಡುವ ಸಂಬಂಧವನ್ನು ಸಾದರಪಡಿಸುತ್ತದೆ. ಈ ಮನೆಗಳವರು ಮುಕ್ತೇಶ್ವರರಾಗಿ ದೇವಸ್ಥಾನಗಳ ಕಾರ್ಯಕಲಾಪಗಳಲ್ಲಿ ಸಕ್ರಿಯವಾಗಿ ಭಾಗಿಯಾಗುತ್ತಾರೆ.

ನಾಲ್ಕಂಕಣದ ಐನ್ ಮನೆಗಳ ಆವರಣ ಅನೇಕ ಭೂತ ದೈವಗಳ ಗುಡಿ, ಮಾಡಗಳಿಂದ ಕೂಡಿರುತ್ತದೆ. ಉದ್ರಾಂಡಿ (ರುದ್ರ ಚಾಮುಂಡಿ), ಮುಡ ಚಾಮುಂಡಿ, ಪಾಷಾಣ ಮೂರ್ತಿ (ಕಲ್ಲುರ್ಟಿ), ವಿಷ್ಣುಮೂರ್ತಿ, ಉಳ್ಳಾಕುಲು, ಬೈನಾಟಿ, ಪಂಜುರ್ಲಿ ದೈವಗಳ ಆರಾಧನಾ ಸಮುಚ್ಚಯ ವಾಗಿ ಕಂಡುಬರುತ್ತವೆ. ಮನೆಯೊಳಗೂ ಮನೆದೇವರು, ಕುಲದೇವರು, ಗುರುಕಾರ್ನೂರರು ಹೀಗೆ ದೇವರ ಮತ್ತು ಹಿರಿಯರ ನೆಲೆಗಳಿರುತ್ತವೆ. ಒಟ್ಟಾರೆ ದೈವ - ದೇವರುಗಳ ನೆಲೆಯಾಗಿ ಐನ್‌ಮನೆಗಳು ಅಲೌಕಿಕವಾದ ಆವರಣವನ್ನು ರೂಪಿಸುತ್ತವೆ. ಮನೆಯ ಕರ್ತ (ಯಜಮಾನ) ದೈವದ ಪ್ರತಿನಿಧಿ ಯಾಗುತ್ತಾನೆ. ಅವನು ನುಡಿಯುವ ಪ್ರತಿಯೊಂದು ಮಾತು ಕೂಡ ದೈವದ ನುಡಿಯಾಗುತ್ತದೆ. ಯಾವ ತಕರಾರು ಇಲ್ಲದೆ ನ್ಯಾಯ ತೀರ್ಮಾನವಾಗುತ್ತದೆ. ಜನ ಮಾನಸಿಕ ನೆಮ್ಮದಿಯನ್ನು ಹೊಂದುತ್ತಾರೆ. ಇಂದಿಗೂ ನಾಲ್ಕಂಕಣದ ಮನೆಯನ್ನು ಜನ ಪಾವಿತ್ರ್ಯದ ದೃಷ್ಟಿಯಿಂದ ಕಾಣುತ್ತಾರೆ. ಅದರ ಉಸ್ತುವಾರಿಯನ್ನು ಆಸಕ್ತಿ ಶ್ರದ್ಧೆಯಿಂದ ನಿರ್ವಹಿಸುತ್ತಾರೆ. ಹಾಳಾಗಿ ಬಿದ್ದು ನಾಶವಾಗಿದ್ದ ನಾಲ್ಕಂಕಣದ ಮನೆಗಳು ಪರಂಪರೆಯ ಮತ್ತು ಧಾರ್ಮಿಕ ಪ್ರಜ್ಞೆಯ ಎಚ್ಚರದಿಂದ ಯಥಾಸ್ಥಿತಿಯಲ್ಲಿ ಪುನರ್ ನಿರ್ಮಾಣವಾಗಿವೆ.

ಐನ್ ಮನೆಗಳು ಧಾರ್ಮಿಕ ಕೇಂದ್ರಗಳಾಗಿರುವಂತೆ, ಸಾಹಿತ್ಯ ಕಲೆಗಳ ಪ್ರೋತ್ಸಾಹ ನೆಲೆಗಳೂ ಆಗಿದ್ದವು. ಯಕ್ಷಗಾನ ತಾಳಮದ್ದಲೆ ಕೂಟಗಳು ನಾಲ್ಕಂಕಣದ ಮನೆಯ ಜಾವಡಿಗಳಲ್ಲಿ ನಡೆಯುತ್ತಿದ್ದುದನ್ನು ಈ ಮನೆಗಳ ಈಗಿನ ಹಿರಿಯರು ನೆನಪಿಸಿಕೊಳ್ಳುತ್ತಾರೆ.

ತಮ್ಮ ಅವಶ್ಯಕತೆಗಳಿಗೆ ಹೊಂದಿಕೊಂಡಂತೆ, ಸ್ಥಾನಮಾನಗಳಿಗೆ ತಕ್ಕಂತೆ ತಮ್ಮ ಮನೆಗಳನ್ನು ಗೌಡರು ನಿರ್ಮಾಣ ಮಾಡಿದ್ದಾರೆ. ತಮ್ಮ ಸಾಂಸ್ಕೃತಿಕ ವಿಧಿ ವಿಧಾನಗಳಿಗೆ ಅದನ್ನು ಸಕ್ರಿಯವಾಗಿ

ಉಪಯೋಗಿಸಿಕೊಂಡ ಗೌಡರು ಮನೆಯನ್ನು ಆರಾಧನಾಭಾವದಿಂದ ನೋಡಿಕೊಳ್ಳುತ್ತಾರೆ. ಈ ನಾಲ್ಕಂಕಣದ ಐನ್‌ಮನೆಗಳ ಕುರಿತಾದ ಯಾವ ದಾಖಲೆಗಳು ಇತಿಹಾಸ ಕೃತಿಗಳ ಪುಟಗಳಲ್ಲಿ ದಾಖಲಾಗಿಲ್ಲ. ಒಂದು ಜನಾಂಗದ ಸಾಂಸ್ಕೃತಿಕ ಇತಿಹಾಸವನ್ನು ತಿಳಿದುಕೊಳ್ಳುವ ಮತ್ತು ದಾಖಲಿಸುವ ದೃಷ್ಟಿಯಿಂದ ಗೌಡರ ಐನ್‌ಮನೆಗಳ ಅಧ್ಯಯನ ಮಹತ್ವಪೂರ್ಣವಾಗುತ್ತದೆ.

## ಅನುಬಂಧ

### ೧. ಪಡು ಬಲ್ನಾಡು ಕಟ್ಟೆಮನೆ

ಪುತ್ತೂರಿನ ಕೇಂದ್ರ ಭಾಗದಿಂದ ಪಡುವಣ ಮೂರು ಕಿ.ಮೀ. ಅಂತರದಲ್ಲಿ ಈ ಗೌಡರ ಬಲ್ನಾಡು ಕಟ್ಟೆಮನೆ ಇದೆ. ೨೫೦ ವರ್ಷಗಳಿಗೂ ಮೀರಿದ ಇತಿಹಾಸವಿರುವ ಈಗಿರುವ ಮನೆಯನ್ನು ಗೌಡರೇ ಕಟ್ಟಿಸಿದ್ದು. ತುಳುಭಾಷಿಕರಾದ ಮನೆಯವರು ತಮ್ಮ ನಾಲ್ಕಂಕಣದ ಮನೆಯನ್ನು 'ಉಳಮುಂದಿಲ್' ಮನೆಯೆಂದು ಕರೆಯುತ್ತಾರೆ. ಈ ಮನೆಗೆ ಸಂಬಂಧಿಸಿದ ಭೂಮಿ ಹಿಂದೆ ಜೈನ ಬಲ್ಲಾಳರದ್ದು. ಜೈನರ ಬೀಡು ಆಗಿತ್ತು ಎನ್ನುವುದಕ್ಕೆ ಕುರುಹಾಗಿ 'ಸುತ್ತು ಪಡ್ಪಿರೆ' ಬಾಗಿಲು ಈಗಲೂ ಇದೆ. ಸುತ್ತು ಪಡ್ಪಿರೆಯ ಇತರ ಘಟಕಗಳು ಬಿದ್ದುಹೋಗಿವೆ. ಈಗಿರುವ ನಾಲ್ಕು ಸೂತ್ರದ ಮನೆಗಳಲ್ಲಿ, ಈ ಮನೆ ವಿಶಿಷ್ಟವಾಗಿದೆ. ಸುತ್ತು ಪಡ್ಪಿರೆ ಮತ್ತು ನಾಲ್ಕಂಕಣದ ಮನೆಗಳು ರಾಚನಿಕವಾಗಿ ಪರಸ್ಪರ ಭಿನ್ನವಾದವುಗಳು. ಆದರೆ ಇವೆರಡನ್ನು ಹೊಂದಿಸಿಕೊಂಡಂತೆ ಈ ಮನೆ ಇದೆ. ಬಹುತೇಕವಾಗಿ ನಾಲ್ಕಂಕಣದ ಮನೆಗಳು ಅಂಕಣ ಚೌಕಾಕಾರದಲ್ಲಿದ್ದರೆ ಈ ಮನೆಯ ಅಂಕಣ ಆಯತಾಕಾರದಲ್ಲಿದೆ.

ಮಣ್ಣಿನ ಗೋಡೆಯ, ಮಂಗಳೂರು ಹಂಚಿನ ಮಾಡು ಇರುವ ಹಳೆಯದಾದ ಮನೆಯಾದರೂ, ಸೂಕ್ಷ್ಮ ಕುಸುರಿಯ, ಗಿಡ್ಡಗಾತ್ರದ ಬಾಗಿಲು, ಬೋದಿಗೆ ಕಂಬಗಳು ಇನ್ನೂ ಮಾಸದೆ ಉಳಿದಿವೆ. ಪೂರ್ವಾಭಿಮುಖವಾಗಿರುವ ಮನೆಯ ಎದುರಲ್ಲಿ ಉಳ್ಳಾಲ್ತಿ, ದಂಡನಾಯಕರ ಮಾಡಗಳಿವೆ. ಮಲರಾಯ ಧರ್ಮದೈವ, ಜೊತೆಗೆ ಕಂಡ್ರಾಣೆ ಮಲರಾಯ ದೈವವಿದ್ದು ಇವುಗಳ ಭಂಡಾರ ಮನೆಯ ಚಾವಡಿಗೆ ಹೊಂದಿಕೊಂಡಿರುವ ಭೂತದ ಕೋಣೆಯಲ್ಲಿದೆ. ಪ್ರತಿ ಪಗ್ಗು ತಿಂಗಳ ಪೂವೆ - ಹುಣ್ಣಿಮೆಗೆ (ಏಪ್ರಿಲ್ ತಿಂಗಳ ಕೊನೆಯ ದಿನಗಳಲ್ಲಿ) ದೈವಗಳ ನೇಮಾದಿ ಉತ್ಸವಗಳು ನಡೆಯುತ್ತವೆ.

ಪುತ್ತೂರು ಮಹಾಲಿಂಗೇಶ್ವರ ದೇವಸ್ಥಾನಕ್ಕೂ ಕಟ್ಟೆಮನೆಗೂ ದೈವಸಂಬಂಧಿಯಾಗಿ ಸಂಬಂಧವಿದೆ. ಜಾತ್ರೆಯ ಸಂದರ್ಭದಲ್ಲಿ ಗೌಡರ ಕಟ್ಟೆಮನೆಯಿಂದ ಉಳ್ಳಾಕುಲು ಭಂಡಾರ ಹೋಗಬೇಕು. ಮೊದಲು ಸನ್ನದು ಬರಬೇಕು. ಸ್ವತಃ ಮುಕ್ತೇಶ್ವರರು ಕಟ್ಟೆಮನೆಗೆ ಬರಬೇಕು. ಉಳ್ಳಾಕುಲು ಭಂಡಾರ ದೇವಸ್ಥಾನ ತಲುಪಿದಾಗ ಭವ್ಯ ಸ್ವಾಗತ ಕೋರಲಾಗುತ್ತದೆ. ದೈವಗಳ ಪಾತ್ರಿ ''ಬಲ್ನಾಡೆರಡೂರುಡ್ದು ಪುತ್ತೂರು ಪಳ್ನಾಡ್‌ಗ್ ಜತ್ತ್ ಬತ್ತೊಂಡೊ, ಎಂಕ್ಳು ಈರ್ನ ಬಲತ್ತ

ಭಾಗೊಡು ಆವೊಂಡ್, ಈರ್ ಬಂರ್ಜೊ ಬಳಿಯಾದ್ ಕೆರೆ ಉತ್ತವಾದ್ ಗುಂಡೊಡಾವೊಲ್ಲೆ ಎಂಕ್ಲು ವರ್ಸಡ್ ಬಳಿಕ್ ಬೇಟೆ ಆವೊಂಡ್.'' ಎಂದು ನುಡಿಯುವ ಕ್ರಮ. ಈ ದೈವದ ಪಾತ್ರಿ ಸ್ಥಾನವನ್ನು ಕಟ್ಟೆಮನೆಯವರೇ ವಹಿಸುತ್ತಾರೆ. ಈಗ ಶ್ರೀ ಬಿ.ಕೆ. ಪರಮೇಶ್ವರ ಗೌಡ ಈ ಸ್ಥಾನವನ್ನು ನಿರ್ವಹಿಸುತ್ತಾರೆ.

ಈ ಮನೆತನಕ್ಕೆ ಪಟೇಲ್ ಸ್ಥಾನವಿತ್ತು. ಸುಮಾರು ೬೦ ವರ್ಷಗಳ ಹಿಂದೆ ಕೈತಪ್ಪಿ ಬಂಟ ಕುಟುಂಬಕ್ಕೆ ಸೇರಿ ಹೋಗಿದೆ. ೧೯೩೭ರಲ್ಲಾದ ಭೂಮಿಯ ಪಾಲುಪಟ್ಟಿ ಪ್ರಕಾರ ಮತ್ತು ಮನೆಯವರು ಹೇಳುವ ಪ್ರಕಾರ, ಈ ಮನೆತನದ ಸುಬ್ಬಣ್ಣ ಗೌಡರ 'ಕುತ್ತಿ'ಗೆ ಗೌಡ ಸಮಾಜದ ಮೇಲುಸ್ತುವಾರಿಕೆ ಮತ್ತು ಪಟೇಲ್ ಸ್ಥಾನ ಅವರ ಸೋದರ ಸಂಬಂಧಿ 'ಕುತ್ತಿ'ಗೆ ಸೇರಿ ಹೋಯಿತು.

ಸುಬ್ಬಣ್ಣ ಗೌಡರ ಹಿರಿ ಮಗ ಪೂವಣಿ ಗೌಡ ಯಾನೆ ಅಂಬೋಡಿ ಗೌಡರ ಕಾಲದಲ್ಲಿ ವ್ಯವಸ್ಥಿತವಾಗಿ ಗೌಡ ಸಮಾಜದ ಕಟ್ಟುಕಟ್ಟಳೆಗಳನ್ನು ಯಥಾಸ್ಥಿತಿಯಲ್ಲಿ ನಡೆಸಿಕೊಂಡ ಹಿರಿಮೆ ಇತ್ತು. ಅಂಬೋಡಿ ಗೌಡರಿಗಿಂತ ಹಿಂದೆ ಗೌಡರ ಮದುವೆಯಲ್ಲಿ 'ಗುರುಪಣ'ವು ಕಟ್ಟುವ ಹಣವನ್ನು ಬ್ರಾಹ್ಮಣರು ಸಂಗ್ರಹಿಸುವ ಕ್ರಮವಿತ್ತು. ಅಂಬೋಡಿ ಗೌಡರು ಈ ಅಕ್ರಮವನ್ನು ವಿರೋಧಿಸಿ, ಕೋರ್ಟು ಮುಖಾಂತರ ತಮ್ಮ ಹಕ್ಕುದಾರಿಕೆಯನ್ನು ಸಕ್ರಮವಾಗಿ ಸ್ಥಿರಗೊಳಿಸಿದರು. ಇವತ್ತಿಗೂ ಗೌಡರ ಬಲ್ನಾಡು ಕಟ್ಟೆಮನೆಯಲ್ಲಿ ಶೃಂಗೇರಿಯ ಗುರುಮಠವು ಗೌಡ ಸಮಾಜದ ಕಟ್ಟುಕಟ್ಟಳೆಯನ್ನು ನಡೆಸುವುದಕ್ಕೆ ಅಧಿಕಾರ ದ್ಯೋತಕವಾಗಿ ಕೊಟ್ಟ, ಮೊಹರು ಸಹಿತವಾದ ಕಂಚಿನ ಪದಕ ಪಟ್ಟಿ ಇದೆ.

ಗೌಡ ಸಮಾಜದ ಆಚಾರ ವಿಚಾರಗಳಿಗೆ, ಹಕ್ಕು ಬಾಧ್ಯತೆಗಳಿಗೆ ತಕರಾರು ಇದ್ದು ಅದು ಕೋರ್ಟಿಗೆ ಹೋದರೆ, ಕೋರ್ಟು ಗೌಡರ ಕಟ್ಟೆಮನೆಗೆ ಈ ಸಂಬಂಧ ಹೇಳಿಕೆಯನ್ನು ಕಳುಹಿಸುತ್ತಿತ್ತು. ಕಟ್ಟೆಮನೆಯವರು ಈ ಕುರಿತಾದ ತೀರ್ಮಾನವನ್ನು ಸ್ವತಃ ಕೋರ್ಟಿಗೆ ಹೋಗಿ ತಿಳಿಸುತ್ತಿದ್ದರು. ಕೋರ್ಟು ಈ ತೀರ್ಪನ್ನು ಪುರಸ್ಕರಿಸುತ್ತಿತ್ತು. ಅಷ್ಟರ ಮಟ್ಟಿನ ಗೌರವಕ್ಕೆ ಈ ಗೌಡರ ಮನೆತನ ಪಾತ್ರವಾಗಿತ್ತು.

ಪಡು ಬಲ್ನಾಡು ಗೌಡ ಕಟ್ಟೆಮನೆತನಕ್ಕೆ ಗೌಡ ಸಮಾಜದ ಎಂಟು ಮಾಗಣೆಗಳ ಉಸ್ತುವಾರಿಕೆ ಇತ್ತು.

೧. ಪಟ್ಲ ಅಮ್ಮ ೨. ನರುವೊಳ್ಳುಬಿ ೩. ಕುಂಟಿನಿ ೪. ಪಳ್ಳದ ೫. ಪಲಂಬು ೬. ಬಿಳಿಲ ೭. ಕಾಯರ್ ಮುಗೆರು ೮. ಕನ್ನಡ್ಕ. ಈ ಎಂಟು ಮಾಗಣೆಗಳು ಕರಾವಳಿಯನ್ನು ಹೊಂದಿಕೊಂಡಂತೆ, ತುಳು ಭಾಷಿಕ ಗೌಡರು ವಾಸಿಸುವ ಪ್ರದೇಶಗಳನ್ನೊಳಗೊಂಡಿವೆ. ಗೌಡ ಜನಾಂಗದ ಮೂಲ ಘಟಕ ಕುಟುಂಬ. ಈ ಕುಟುಂಬಗಳ ಜೀವನಾವರ್ತನದ ವಿಧಿ ವಿಧಾನಗಳ ಮೇಲುಸ್ತುವಾರಿಯನ್ನು ನೋಡಿಕೊಳ್ಳಲು, ಊರ ಗೌಡರು, ಅವರ ಗೈರುಹಾಜರಿಯಲ್ಲಿ 'ಬತ್ತು ಗೌಡ'ರು ಇರುತ್ತಾರೆ. ಇಂತಹ ಆರು ಊರ ಗೌಡರ ಉಸ್ತುವಾರಿಯನ್ನು ಒಬ್ಬ ಮಾಗಣೆ ಗೌಡ ನೋಡಿಕೊಳ್ಳುತ್ತಾನೆ. ಇವರನ್ನು ಕಟ್ಟೆಮನೆಯವರು ನೇಮಿಸುತ್ತಾರೆ ಮತ್ತು ಮೇಲುಸ್ತುವಾರಿಯನ್ನು ಮಾಡುತ್ತಾರೆ. ಊರ ಗೌಡ, ಮಾಗಣೆ ಗೌಡರ ಮೂಲಕ ಸಂಗ್ರಹವಾಗುವ 'ಗುರುಪಣ'ವನ್ನು ಶೃಂಗೇರಿಯ ಗುರುಪೀಠಕ್ಕೆ

ಕಾಣಿಕೆಯಾಗಿ ಸಲ್ಲಿಸುವ ಹೊಣೆಗಾರಿಕೆ ಕಟ್ಟೆಮನೆಯವರಿಗೆ. ೪೦ ವರ್ಷಗಳಿಂದ ಗುರುಪೀಠಕ್ಕೆ ಗುರುಪಣವು ಕಟ್ಟೆಮನೆಯ ಮೂಲಕ ಸಂದಾಯವಾಗಿಲ್ಲ. ಊರು ಮಾಗಣೆಗಳಿಂದ ಈ ಗುರುಪಣವು ಕಟ್ಟೆಮನೆಗೆ ಸಂದಾಯವಾಗುವುದಿಲ್ಲವೆನ್ನುವ ಕಾರಣವನ್ನು, ಕಾಲ ಗತಿಯಲ್ಲಿ ಗೌಡ ಸಮಾಜದ ಕಟ್ಟುಕಟ್ಟಳೆಗಳು ಶಿಥಿಲವಾಗಿವೆ ಎನ್ನುವ ವಿಷಾದವನ್ನು ಮನೆಯವರು ವ್ಯಕ್ತಪಡಿಸುತ್ತಾರೆ.

### ೨. ಕುಂಚಡ್ಕ ನಾಲ್ಕು ಸೂತ್ರದ ಐನ್‌ಮನೆ

ಸುಳ್ಯ ತಾಲೂಕು ಅಲೆಟ್ಟಿ ಗ್ರಾಮ, ನಾರ್ಕೋಡಿನ ಸಮೀಪ ಈ ಮನೆಸ್ಥಾನವಿದೆ. ಸುಮಾರು ೩೫೦ ವರ್ಷಗಳ ಹಳೆಯ ಮನೆತನವಿದು. ಮನೆಯ ಹಿರಿಯರು ನೆನಪಿನಿಂದ ಹೇಳುತ್ತಾರೆ. ಕೂಡು ಕುಟುಂಬ ವ್ಯವಸ್ಥೆಯನ್ನು ಹೊಂದಿಕೊಂಡು ಬಂದಿದ್ದ ಈ ಮನೆತನ ೧೯೦೬ರಲ್ಲಿ ವಿಭಕ್ತ ಕುಟುಂಬವಾಗಿ, ಆರು 'ಕುತ್ತಿ'ಗಳಾಗಿ ಒಡೆಯಿತು. (ಕುತ್ತಿಯೆಂದರೆ ಒಂದು ತಂದೆಯ ಮಕ್ಕಳ ಭಾಗ). ಈ ಆರು ಕುತ್ತಿಗಳಲ್ಲಿ ಈಗ ಸುಮಾರು ೩೨ ಕುಟುಂಬಗಳಾಗಿವೆ. ಈ ಮನೆಯ ಹತ್ತಿರದಲ್ಲಿ ಕಲ್ಲೆಂಬಿ, ಕೊಡಗಿನ ಕರಿಕೆ, ಕೊಯನಾಡು, ಭಾಗಮಂಡಲದ ಚೆಟ್ಟಿಮಾನಿಯಲ್ಲೂ ಈ ಕುಟುಂಬದ ಕವಲುಗಳು ನೆಲೆ ನಿಂತಿವೆ. ಇವುಗಳಲ್ಲಿ ಕಲ್ಲೆಂಬಿ ಕುಂಚಡ್ಕದಿಂದ ೨ ಕಿ.ಮೀ. ದೂರದಲ್ಲಿದೆ. ಈ ಕಲ್ಲೆಂಬಿಯ ಭೂಮಿಯು ನಿಸ್ಸಂತತಿ ಬಲ್ಲಾಳ್ತಿಯಿಂದ ಬಂದುದಾಗಿದೆ. ಇಲ್ಲಿ ನಾಲ್ಕು ಸೂತ್ರದ ಮನೆಯಿಲ್ಲ. ಆದರೆ ಹಳೆಯದಾದ ಹುಲ್ಲಿನ ಮನೆ ಈಗಲೂ ಇದೆ. ಕಲ್ಲೆಂಬಿಯ ಮನೆ ಹಿಂದೆ ಸಾಂಸ್ಕೃತಿಕವಾಗಿಯೂ ಗುರುತಿಸಿಕೊಂಡಿತ್ತು. ಯಕ್ಷಗಾನ ತಾಳಮದ್ದಲೆ ಕೂಟಗಳು ನಡೆಯುತ್ತಿತ್ತೆನ್ನುವ ವಿಚಾರವನ್ನು ಈ ಮನೆಯ ಹಿರಿಯರು ಜ್ಞಾಪಿಸುತ್ತಾರೆ. ಇಂದಿಗೂ ಈ ಮನೆಯ ಬಾಳೆ ಹಾಕುವ ಗದ್ದೆಯಲ್ಲಿ ಜನಪದ ಕ್ರೀಡೆಯಾದ 'ಕಂಬಳ' ನಡೆಯುತ್ತದೆ.

ಕುಂಚಡ್ಕ ಮನೆಸ್ಥಾನದ ಕುರಿತು ಕುಟುಂಬಸ್ಥರು ಹೇಳುವ ಪ್ರತೀತಿ ಪ್ರಕಾರ ಇವರ ಮೂಲಪುರುಷ ಐಗೂರು ಸೀಮೆಯಿಂದ ವಲಸೆ ಬಂದವ. ಹೀಗೆ ಬಂದವನು ಸುಳ್ಯದ ಹತ್ತಿರದ ಸೋಣಂಗೇರಿಯಲ್ಲಿ ನೆಲೆಸಿದ. ಸಂತಾನ ವೃದ್ಧಿಯಾಗಿ ಬಂದಾಗಿದ್ದ ಕುಟುಂಬ ಕವಲಾಯಿತು. ಕವಲಾದ ಕುಟುಂಬಗಳು ಸೋಣಂಗೇರಿ, ನಡುಬೆಟ್ಟು, ಕುಂಚಡ್ಕ ಹೀಗೆ ಮೂರು ಕಡೆಗಳಲ್ಲಿ ನೆಲೆಯಾದವು. ಇವರ ಮೂಲ ಪುರುಷ (ಹೆಸರು ತಿಳಿದಿಲ್ಲ) ಘಟ್ಟದಿಂದ ಬರುವಾಗ ಮೂರು ಕುಲದೈವಗಳನ್ನು ತಂದಿದ್ದ. ಈ ದೈವಗಳಲ್ಲಿ ಮಹಾಲಕ್ಷ್ಮಿ ಕುಂಚಡ್ಕಕ್ಕೂ, ಗಣಪತಿ ನಡುಬೆಟ್ಟಿಗೂ, ವೆಂಕಟ್ರಮಣ ಸೋಣಂಗೇರಿ ಕುಟುಂಬಕ್ಕೂ ಮನೆದೈವಗಳಾದವು. ಈಗಲೂ ಈ ಮೂರು ಮನೆಗಳಲ್ಲೂ ಈ ದೈವಗಳ ಮೂರ್ತಿಗಳನ್ನು ಕಾಣಬಹುದು.

ನಾಲ್ಕು ಸೂತ್ರದ ಮನೆಯೊಂದು ಆರಾಧನಾ ನೆಲೆಯಾಗಿರುತ್ತದೆಯೆನ್ನುವುದಕ್ಕೆ ಕುಂಚಡ್ಕದ ಮನೆಯು ಸಾಕ್ಷಿಯಾಗಿದೆ. ಇಲ್ಲಿ ಧರ್ಮದೈವವಾಗಿ ರುದ್ರ ಚಾಮುಂಡಿ, ಜೊತೆಗೆ ಮುಡ ಚಾಮುಂಡಿ, ಪೈನಾಟಿ, ವಿಷ್ಣುಮೂರ್ತಿ, ಉಳ್ಳಾಕುಲು ದೈವಗಳು ಆರಾಧನೆಗೊಳ್ಳುತ್ತವೆ. ಮನೆಯೊಳಗೂ ಮನೆದೈವ 'ಗುರು ಕಾರ್ನೂರರ' ಆರಾಧನೆಗಳು ನಡೆಯುತ್ತವೆ. ಉಳ್ಳಾಕುಲು ಭಂಡಾರ ಮನೆಯ ಕೋಣೆ

ಯಲ್ಲಿದ್ದು, ಅವುಗಳ ನೇಮ ಮಾತ್ರ ಮೂರು ಕಿ.ಮೀ ದೂರದಲ್ಲಿರುವ ಭೂತ ಕಲ್ಲು ಎಂಬಲ್ಲಿ ನಡೆಯುತ್ತದೆ. ಈ ನೇಮ ನಡೆಯುವ 'ಭೂತ ಕಲ್ಲು' ಇರುವಲ್ಲಿನ ಗೌಡರ ಮನೆಗೆ ಭೂತಕಲ್ಲು ಎಂಬ ಹೆಸರಿದೆ. ಆದರೆ 'ಭೂತದ ಕಲ್ಲು' ಆರಾಧನಾ ಸಂಬಂಧಿಯಾಗಿ ಕುಂಚಡ್ಕ ಮನೆತನಕ್ಕೆ ಸೇರಿದೆ. ಈ ಕುಂಚಡ್ಕದ ಹತ್ತಿರ ಒಂದು ಅಡ್ಕವಿದ್ದು ಅದರಲ್ಲಿ ಕಾಂಚಮ್ಮ ದೈವದ ಉತ್ಸವ ನಡೆಯುತ್ತದೆ. ಈ ಕಾಂಚಮ್ಮನ 'ಅಡ್ಕವೆ' ಕುಂಚಡ್ಕವಾಗಿದೆ ಎಂದು ಮನೆಯವರು ಊಹಿಸುತ್ತಾರೆ.

ತೊಡಿಕಾನ ಸೀಮೆಗೆ ಸೇರಿದ ಪ್ರಧಾನ ಮನೆತನಗಳಲ್ಲಿ ಕುಂಚಡ್ಕ ಮನೆತನವು ಒಂದು. ಊರಿನ ಯಾವುದೇ ದೈವಾರಾಧನೆ ಮೊದಲಾದ ವಿಶೇಷ ಸಂದರ್ಭಗಳಲ್ಲಿ ಇಡಿ ತೆಂಗಿನಕಾಯಿ ಕೊಟ್ಟು, ಈ ಮನೆಯವರನ್ನು ಗೌರವಿಸುವುದು ಸಂಪ್ರದಾಯ.

ಕ್ರಿ. ಶ. ೧೮೩೭ರ ಅಮರ ಸುಳ್ಯದ ಸ್ವಾತಂತ್ರ್ಯ ಸಮರದಲ್ಲಿ ಈ ಮನೆತನದ ರಾಮಗೌಡ ನಾಯಕರಾಗಿ, ಕುಡೆಕಲ್ಲು ನಾಲ್ಕಂಕಣದ ಐನ್ ಮನೆತನದ ಪುಟ್ಟ ಗೌಡರ ಬೆಂಬಲದೊಂದಿಗೆ ಕಾಸರಗೋಡು ಪ್ರದೇಶಗಳನ್ನು ಬ್ರಿಟಿಷ್ ಅಧಿಕಾರಿಗಳಿಂದ ಕೈವಶ ಮಾಡಿಕೊಂಡು, ಮಂಗಳೂರು ಸೇರಿ ಹದಿಮೂರು ದಿನ ರಾಜ್ಯಭಾರ ಮಾಡಿದ ಐತಿಹಾಸಿಕ ಘಟನೆಯಲ್ಲಿ ಪ್ರಧಾನ ಪಾತ್ರ ವಹಿಸಿದ್ದ.

ಕ್ರಿ. ಶ. ೧೯೦೭ರಲ್ಲಿ ವಿಭಕ್ತ ಕುಟುಂಬವಾಗಿ ಒಡೆದು ಹೋದ ಬಳಿಕ ಈ ಕುಂಚಡ್ಕ ಮೂಲಸ್ಥಾ ಮನೆಯಲ್ಲಿ ಯಾವುದೇ ದೈವಗಳ ನೇಮ, ಕಾಲಾವಧಿ ಉತ್ಸವಗಳು ನಡೆದಿಲ್ಲ. ಆದರೆ ನಿತ್ಯ ನೈಮಿತ್ತಿಕ ದೀಪಾರಾಧನೆಗಳು ನಡೆಯುತ್ತವೆ. ಕೆಲ ವರ್ಷಗಳ ಹಿಂದೆ ನಾಲ್ಕು ಸೂತ್ರದ ಮನೆಯ ಘಟಕಗಳು ಬಿದ್ದು ಹೋಗಿ, ಒಂದು ಭಾಗದಲ್ಲಿ ಕುಟುಂಬದ ಹಿರಿಯ ಭಾಗದ ಕವಲು ವಾಸ ಮಾಡುತ್ತಿತ್ತು. ಈಗ ಆ ಮನೆಯನ್ನು ದಾನಪತ್ರದ ಮೂಲಕ ಪಡೆದುಕೊಂಡು, ವಾಸವಾಗಿದ್ದವರಿಗೆ, ವಸತಿಗಾಗಿ ಪ್ರತ್ಯೇಕ ಸ್ಥಳವನ್ನು ಕಲ್ಪಿಸಿಕೊಟ್ಟಿದ್ದಾರೆ. ಕವಲಾಗಿ ಬೇರೆ ಬೇರೆ ಕಡೆ ನೆಲೆಯಾಗಿರುವ ಈ ಮನೆತನದ ಕುಟುಂಬಸ್ಥರು ಒಟ್ಟು ಸೇರಿ ಮೂಲನಿವೇಶನದಲ್ಲಿಯೇ ಹಳೆ ಮನೆಯ 'ಕನ್ನಿಮೂಲೆ'ಯನ್ನೇ ಆಧಾರವಾಗಿಟ್ಟು, ಅದಕ್ಕೆ ತಳಪಾಯದ ಲೆಕ್ಕಾಚಾರಗಳನ್ನು ಹೊಂದಿಸಿಕೊಂಡು, ಹೊಸ ಮನೆಯ ನಿರ್ಮಾಣ ಮಾಡಿದ್ದಾರೆ. ಮೊದಲಿನ ಮನೆಯಲ್ಲಿದ್ದ ಮರದ ಜೋಡಿಗೆ ಕಂಬಗಳು ಮತ್ತು ಚಾವಣಿಯನ್ನು ಕಾಂಕ್ರೀಟ್‌ನಿಂದ ರಚಿಸಲಾಗಿದೆ. ನಾಲ್ಕು ಸೂತ್ರದ ಹಳೆ ಮನೆಯ ಎಲ್ಲಾ ಘಟಕಗಳು ಕೂಡ ಸಾಂಪ್ರದಾಯಿಕವಾಗಿಯೇ ರಚನೆಯಾಗಿವೆ.

ಈಗ ಈ ಮನೆತನದ ಹಿರಿಯರಾಗಿ ಶ್ರೀ ಚಿನ್ನಯಪ್ಪ ಗೌಡರಿದ್ದಾರೆ. ಅವರ ಯಜಮಾನಿಕೆಯಲ್ಲಿ ಕುಟುಂಬ ಸದಸ್ಯರಾದ ಶ್ರೀ ಕೆ. ಆರ್. ರಾಮಣ್ಣ ಗೌಡ ಕುಂಚಡ್ಕ ಮತ್ತು ವಾಮನ ಕುಂಚಡ್ಕರ ಸಹಕಾರದೊಂದಿಗೆ ಹೊಸ ಮನೆಯ ನಿರ್ಮಾಣ ಕಾರ್ಯ ನಡೆಯುತ್ತಿದೆ. ಪುನರ್ ನಿರ್ಮಾಣ ಗೊಳ್ಳುತ್ತಿರುವ ಈ ಮನೆ ಪೂರ್ಣಗೊಳ್ಳುವ ಹಂತದಲ್ಲಿದೆ.

### ೩. ಕುಡೆಕಲ್ಲು ಮನೆತನ

ಸುಮಾರು ೨೨೫ ವರ್ಷಗಳ ಇತಿಹಾಸ ಈ ಮನೆತನದ್ದು. ಈ ಕುಟುಂಬದ ವೈಶಿಷ್ಟ್ಯಪೂರ್ಣ

ವ್ಯಕ್ತಿತ್ವ ಹೊಂದಿದ್ದ ಪುಟ್ಟ ಗೌಡ ೧೯೨೬ರಲ್ಲಿ ಬರೆದಿಟ್ಟ ದಾಖಲೆಯೊಂದು ಮನೆತನದ ಪರಿಚಯ ಮಾಡಿಕೊಳ್ಳಲು ಸಹಕಾರಿಯಾಗಿದೆ.

'ಕುಡಕಲ್ಲು ಮನೆಸ್ಥಾನ - ಒಂದಷ್ಟು ಮಾಹಿತಿಗಳು' ಎಂಬ ಶೀರ್ಷಿಕೆಯಲ್ಲಿ ಈ ಮನೆತನದ ಪೂರ್ವಾಪರಗಳನ್ನು ಕೆ. ಆರ್. ತೇಜಕುಮಾರ್ ಮತ್ತು ಕೆ. ಆರ್. ವಿದ್ಯಾಧರ ಸಹೋದರರು ಪರಿಚಯಿಸಿದ್ದಾರೆ.

ಸುಳ್ಯದ ಆಲೆಟ್ಟಿ ಗ್ರಾಮದಲ್ಲಿರುವ ಕುಡಕಲ್ಲಿನ ಈಗಿರುವ ಮನೆಯನ್ನು ತಿಮ್ಮಯ್ಯ ಗೌಡರು ಕಟ್ಟಿಸಿದರು. ಇದೊಂದು ನಾಲ್ಕಂಕಣದ ಸಾಂಪ್ರದಾಯಿಕ ಸುಂದರ ಮನೆ. ಮೊದಲಿಗೆ ಹುಲ್ಲುಹಾಸಿನ ಮನೆಯಾಗಿತ್ತು. ಎರಡು ಬಾರಿ ನವೀಕರಣಗೊಂಡಿದೆ. ೧೯೫೨ರಲ್ಲಿ ಕುಡಕಲ್ಲು ಮುತ್ತಣ್ಣ ಗೌಡರ ಆಡಳ್ತೆ ಸಂದರ್ಭದಲ್ಲಿ, ಅವರ ಪರವಾಗಿ ಕುಡಕಲ್ಲು ರಾಮಯ್ಯ ಗೌಡರು ಹುಲ್ಲುಹಾಸಿನ ಮಾಡನ್ನು ಮಂಗಳೂರು ಹಂಚಿನ ಛಾವಣಿಯನ್ನಾಗಿ ಪರಿವರ್ತಿಸಿದರು. ನಂತರ ೧೯೭೦ರಲ್ಲಿ ಇಂದಿನ ಯಜಮಾನರಾಗಿರುವ ಶ್ರೀ ಕೃಷ್ಣಪ್ಪ ಗೌಡ ಮತ್ತು ಆಡಳ್ತೆದಾರ ಶ್ರೀ ದಾಸಪ್ಪ ಗೌಡರ ಅಧಿಕಾರಾವಧಿಯಲ್ಲಿ ಮನೆಯನ್ನು ಕೆಡವದೆ ತಾಂತ್ರಿಕ ಕೌಶಲದ ಹಳೆಯ ಮಣ್ಣಿನ ಗೋಡೆಗಳ ಸ್ಥಾನದಲ್ಲಿ ಹೊಸದಾಗಿ ಕಲ್ಲಿನ ಗೋಡೆಗಳ ನಿರ್ಮಾಣ ಮಾಡಲಾಗಿದೆ.

ಕುಡಕಲ್ಲು ಮನೆತನದ ಮೂಲ ವ್ಯಕ್ತಿಯೆಂದು ಹೇಳಲಾಗುವ 'ಗೌಡಜ್ಜ'ನ ಕಾಲದಿಂದಲೇ ಈ ಮನೆ ಸ್ಥಾನ ಧಾರ್ಮಿಕವಾಗಿ ಒಂದು ಆರಾಧನಾ ಕೇಂದ್ರವಾಗಿತ್ತು. ಉದ್ರಾಂಡಿ (ರುದ್ರ ಚಾಮುಂಡಿ) ಈ ಮನೆತನದ ಧರ್ಮ ದೈವ. ಮುಖ್ಯ ದೈವ ವಿಷ್ಣುಮೂರ್ತಿ. ಕಾರಣಿಕ ದೈವವಾಗಿ ಕಲ್ಲುರ್ಟಿ, ಉಳ್ಳಾಕುಲು ದೈವಗಳು ಮನೆಯ ಆವರಣದೊಳಗೆ ಆರಾಧನೆಗೊಳ್ಳುತ್ತವೆ. ಅನತಿ ದೂರದಲ್ಲಿ ಮನೆತನಕ್ಕೆ ಸೇರಿದ ಸ್ಥಳದಲ್ಲಿ ಜೈನಾಟೆ ದೈವದ ಆರಾಧನೆ ನಡೆಯುತ್ತದೆ. ವರ್ಷಂಪ್ರತಿ 'ಕಳಿಯಾಟ' ಮೂರು ದಿನಗಳ ಕಾಲ ನಡೆಯುತ್ತದೆ. ಹರಕೆ ರೂಪದಲ್ಲಿ ಬರುವ ಆದಾಯ ಈ ಮನೆಯ ಅಭಿವೃದ್ಧಿಗೆ ಬಹಳಷ್ಟು ಸಹಕಾರಿಯಾಗಿದೆ. ಮನೆಯ ಪೂರ್ವ ಆಗ್ನೇಯದಲ್ಲಿ, ಮನೆಯ ಘಟಕವಾಗಿ ಧರ್ಮ ದೈವ ಉದ್ರಾಂಡಿ ಮಾಡವಿದೆ. ಈ ಕೋಣೆಯಿಂದ ವಾಯುವ್ಯ ದಿಕ್ಕಿಗೆ ನೇರವಾಗಿ ಮನೆಯ ಅಡ್ಡ ಗೋಡೆಗಳ ಮೂಲಕ ಸರಳ ರೇಖೆಯಲ್ಲಿ ಹಾದುಹೋಗುವ ಕಿಂಡಿ ಇದೆ. ಈ ಕಿಂಡಿಯ ಮೂಲಕ ಇಣುಕಿದಾಗ ವಾಯುವ್ಯ ದಿಕ್ಕಿನಲ್ಲಿ ಮನೆಯ ಹೊರಭಾಗ ಕಾಣುತ್ತದೆ. ಈ ಕಿಂಡಿಯಲ್ಲಿ ದೈವದ ದಿವ್ಯದೃಷ್ಟಿ, ಆ ಭಾಗಕ್ಕೆ ಸದಾ ಹರಿಯುತ್ತಿರುತ್ತದೆ. ಮತ್ತು ಇದು ಮನೆಗೆ ಶುಭ ಶಕುನವೆಂದು ಅಭಿಪ್ರಾಯವನ್ನು ಮನೆಯವರು ಹೊಂದಿದ್ದಾರೆ. ಈ ಮನೆಯ ಆವರಣದೊಳಗಿರುವ ವಿಷ್ಣುಮೂರ್ತಿ ದೈವದ ಸ್ಥಾನವು ತನ್ನ ಕಲಾತ್ಮಕತೆಯಿಂದ ಸ್ಥಳಕ್ಕೊಂದು ಘನತೆಯನ್ನು ತಂದಿದೆ. ಗೌಡರ ಬಳಿ ಪದ್ಧತಿಯ ಪ್ರಕಾರ ಈ ಮನೆತನ ಕಬರು ಬಳಿಯನ್ನು ಹೊಂದಿದೆ.

ಕ್ರಿ. ಶ. ೧೮೩೪ರಲ್ಲಿ ಕೊಡಗು ಅನಿರೀಕ್ಷಿತವಾದ ರಾಜಕೀಯ ಸ್ಥಿತ್ಯಂತರವನ್ನು ಕಂಡಿತು. ವಿದ್ರೋಹಕ್ಕೊಳಗಾಗಿ ಮಡಿಕೇರಿಯ ಪತನವಾಗುತ್ತದೆ. ಸುಳ್ಯ, ಪುತ್ತೂರು ಪ್ರದೇಶಗಳನ್ನು ಅಂದಿನ

ಕೆನರಾ ಜಿಲ್ಲೆಗೆ ಸೇರಿಸುತ್ತಾರೆ. ಭತ್ತವನ್ನು ಹಣವನ್ನಾಗಿ ಪರಿವರ್ತಿಸಿ ಕಂದಾಯ ಕಟ್ಟಬೇಕೆನ್ನುವ ಬ್ರಿಟಿಷರ ಆರ್ಥಿಕ ನೀತಿ ಸುಳ್ಯ ಪರಿಸರದಲ್ಲಿ ಅಸಮಾಧಾನವನ್ನುಂಟು ಮಾಡುತ್ತದೆ. ಇದೆಲ್ಲದರ ಪರಿಣಾಮವಾಗಿ ಬ್ರಿಟಿಷರನ್ನು ಪ್ರತಿರೋಧಿಸಿ ಕೊಡಗರಸನನ್ನು ಮರು ಸ್ಥಾಪಿಸುವ ಪ್ರಯತ್ನವಾಗಿ ಬಂಡಾಯದ ಪೂರ್ವ ಸಿದ್ಧತೆ ನಡೆಯುತ್ತದೆ. ಈ ಸಿದ್ಧತೆ ಕುಡಕಲ್ಲು ಮನೆತನಕ್ಕೆ ಕೌಟುಂಬಿಕವಾಗಿ ಅತಿ ಹತ್ತಿರದ ಸಂಬಂಧಿ ಕೆದಂಬಾಡಿ ರಾಮೇಗೌಡನ ನಾಯಕತ್ವದಲ್ಲಿ ನಡೆಯುತ್ತದೆ. ಈ ಹೋರಾಟದಲ್ಲಿ ಬೆಂಬಲವಾಗಿ ಈ ಕುಡಕಲ್ಲಿನ ಪುಟ್ಟ ಗೌಡ ಭಾಗಿಯಾಗುತ್ತಾನೆ. ಕೆದಂಬಾಡಿ ರಾಮೇಗೌಡನ ನಾಯಕತ್ವದಲ್ಲಿ ಹೋರಾಟಗಾರರು ಬ್ರಿಟಿಷ್ ಕಚೇರಿಗಳನ್ನು ಕೈವಶ ಮಾಡಿಕೊಂಡು ಸುಳ್ಯ ಬೆಳ್ಳಾರೆ ಮಾರ್ಗವಾಗಿ ಮಂಗಳೂರು ಕೇಂದ್ರವನ್ನು ತಲುಪುತ್ತಾರೆ. ಇನ್ನೊಂದು ಗುಂಪು ಕುಂಚಡ್ಕ ರಾಮ ಗೌಡನ ನಾಯಕತ್ವದಲ್ಲಿ, ಪುಟ್ಟ ಗೌಡನ ಸಹಭಾಗಿತ್ವದಲ್ಲಿ ಕಾಸರಗೋಡು ಪ್ರದೇಶಗಳನ್ನು ವಶಪಡಿಸಿಕೊಂಡು ಮಂಗಳೂರು ಸೇರುತ್ತವೆ. ಅಲ್ಲಿ ಒಟ್ಟಾಗಿ ಹದಿಮೂರು ದಿನಗಳ ಕಾಲ ಬ್ರಿಟಿಷರಿಂದ ಹೊರತಾದ ಅಧಿಕಾರ ಚಲಾಯಿಸುತ್ತಾರೆ. ಕೊನೆಗೆ ವಿದ್ರೋಹದ ಕಾರಣದಿಂದ ಹೋರಾಟ ವಿಫಲವಾಗುತ್ತದೆ. ಪುಟ್ಟೇ ಗೌಡ ಏಳು ವರ್ಷಗಳ ಸೆರವಾಸ ಅನುಭವಿಸುವುದಲ್ಲದೆ ಈ ಮನೆತನಕ್ಕೆ ಇದ್ದ ಮುಖ್ತಿ ಪದವಿಯನ್ನು ಕಳೆದುಕೊಳ್ಳಲು ಕಾರಣವಾದ. ಆದರೆ ಬ್ರಿಟಿಷರ ವಿರುದ್ಧ ಸೆಟೆದು ಹೋರಾಡಿದ ವೀರರ ಮನೆತನ ಕುಡಕಲ್ಲು ಎನ್ನುವ ಪ್ರಶಂಸೆಯು ಮಾತು ಉಳಿದುಕೊಳ್ಳಲು ಪುಟ್ಟೇಗೌಡ ಕಾರಣನಾದ.

ಬ್ರಿಟಿಷರ ಕಾಲದಲ್ಲಿ ಗ್ರಾಮ ಮುಖ್ತಿ ಹುದ್ದೆಯನ್ನು ಹೊಂದಿದ ಈ ಮನೆತನ ತೊಡಿಕಾನ ಸೀಮೆಗೆ 'ಸೀಮೆಕಳ' ಮನೆತನವೆಂದು ಹೆಸರುವಾಸಿಯಾಗಿತ್ತು. ಊರು ಗ್ರಾಮಗಳಲ್ಲಿ ವಿಶೇಷವಾಗಿ ಗೌರವಕ್ಕೆ ಪಾತ್ರವಾಗಿದೆ. ಈಗ ಇರುವ ಮನೆ ವಿಭಕ್ತ ಕುಟುಂಬ ವ್ಯವಸ್ಥೆಗೆ ಹೊಂದಿಕೊಂಡಿದೆ. ನಿರ್ದಿಷ್ಟ ಕುಟುಂಬ ಈ ಮನೆಯಲ್ಲಿ ವಾಸವಾಗಿಲ್ಲ. ಮನೆಯ ಎಲ್ಲಾ ಆಗುಹೋಗುಗಳು ಮನೆತನದ ಹಿರಿಯರ ನೇತೃತ್ವದಲ್ಲಿ ನಡೆಯುತ್ತದೆ. ಆಡಳಿತ ವ್ಯವಸ್ಥೆಯನ್ನು ಕುಟುಂಬದ ಸದಸ್ಯರಿಂದ ಕೂಡಿದ ಚಾರಿಟೇಬಲ್ ಟ್ರಸ್ಟ್ ನೋಡಿಕೊಳ್ಳುತ್ತದೆ.

### ೪. ಉಳುವಾರು ಮನೆತನ

ಕಾಲದ ದೃಷ್ಟಿಯಿಂದ ಉಳುವಾರು ಮನೆತನ ಮತ್ತು ಕುಂಚಡ್ಕ ಮನೆತನ ಸಮಕಾಲೀನವಾಗಿದ್ದು, ಸುಮಾರು ೩೫೦ ವರ್ಷಗಳಿಗಿಂತ ಮೇಲ್ಪಟ್ಟ ಹಳೆಯ ಇತಿಹಾಸವನ್ನು ಹೊಂದಿದೆ. ಐಗೂರು ಸೀಮೆಯಿಂದ ವಲಸೆ ಬಂದ ಉಳುವಾರಿನ ಗೌಡ ಕುಟುಂಬ ಈಗಿನ ಅರಂತೋಡಿನ ಪಕ್ಕದ ಅತ್ರೊಟ್ಟುನಲ್ಲಿ ನೆಲೆಯಾಯಿತು. ಸಾಮಾನ್ಯ ಮುಳಿಮನೆಯಾಗಿದ್ದ ಮನೆಗೆ ಇನ್ನೂರು ವರ್ಷಗಳ ಹಿಂದೆ ಬೆಂಕಿ ಬಿದ್ದು ನಾಶವಾಯಿತು. ತರುವಾಯ ಎಂಟು ಸೂತ್ರದ ಮನೆಯನ್ನು ನಿರ್ಮಿಸಲಾಯಿತು. ಒಂದು ಪ್ರತೀತಿ ಪ್ರಕಾರ ತೊಡಿಕಾನ ದೇವಸ್ಥಾನದ ಹೊರ ಗೋಪುರಗಳ ನಿರ್ಮಾಣಕ್ಕೆ 'ಕುಟ್ಟಿ' ಹಾಕಿದ ದಿನವೇ ಉಳುವಾರಿನ ಈ ಎಂಟು ಸೂತ್ರದ ಮನೆಗೂ 'ಕುಟ್ಟಿ' ಹಾಕಲಾಯಿತು ಎನ್ನುತ್ತಾರೆ.

ಉಳುವಾರಿಗೂ ತೊಡಿಕಾನ ದೇವಸ್ಥಾನಕ್ಕೂ ಇದ್ದ ಸಂಬಂಧದ ಹಿನ್ನೆಲೆಯಲ್ಲಿ ಈ ಪ್ರತೀತಿ ಮಹತ್ವ ಪಡೆಯುತ್ತದೆ. ಕುಟುಂಬಸ್ಥರು ಕೊಡುವ ಮಾಹಿತಿ ಪ್ರಕಾರ, ಈ ಮನೆತನದ ಮೂಲಪುರುಷ ತಿಮ್ಮಪ್ಪ ಎಂಬ ವ್ಯಕ್ತಿ. ಉಳುವಾರಿಗೆ ಬರುವ ಕಾಲಕ್ಕೆ ತೊಡಿಕಾನ ಪ್ರದೇಶವನ್ನು ಬಲ್ಲಾಳರು ಆಳುತ್ತಿದ್ದರು. ಬಲ್ಲಾಳರಿಗೆ ಪುತ್ರ ಸಂತಾನವಿರಲಿಲ್ಲ. ಎಂಟು ಜನ ಹೆಣ್ಣು ಮಕ್ಕಳಿದ್ದರು. ಈ 'ಅಪ್ಪ ಬಲ್ಲಾಳ್ತಿ'ಯವರಿಗೆ ಭೂಮಿ ವಿಂಗಡಣೆಯಾಯಿತು. ಇವರಲ್ಲಿ ಅಕ್ಕು ಬಲ್ಲಾಳ್ತಿಗೆ ತೊಡಿಕಾನ ಪ್ರದೇಶದ ಅಧಿಕಾರ ಬಂತು. ಈ ಬಲ್ಲಾಳ್ತಿಯಲ್ಲಿ ಅಧಿಕಾರಸ್ಥನಾಗಿ ಸೇರಿಕೊಂಡ ತಿಮ್ಮಪ್ಪ, ಮುಂದೆ ಸಂತಾನ ಹೀನೆಯಾಗಿ ಬಲ್ಲಾಳ್ತಿ ಸತ್ತಾಗ ಆ ಮನೆತನದ ಹಕ್ಕು ಬಾಧ್ಯತೆಗಳು ಉಳುವಾರು ಮನೆತನದ ಕೈ ಸೇರಿತು. ಈ ಕುರಿತಾದ ತಾಮ್ರದ ದಾಖಲೆ ಪತ್ರ ಈಗ ಮೈಸೂರು ಪ್ರಾಚ್ಯ ವಸ್ತುಸಂಗ್ರಹಾಲಯದಲ್ಲಿದೆಯೆಂದು, ಈಗ ತೊಡಿಕಾನ ದೇವಾಲಯದ ಮುಕ್ತೇಸರರು, ಉಳುವಾರು ಮನೆಮನದ ಹಿರಿಯರಲ್ಲಿ ಒಬ್ಬರಾದ ಶ್ರೀ ಯು. ಎಂ. ಮಹಾಬಲ ಗೌಡರು ಪ್ರಸ್ತಾಪಿಸುತ್ತಾರೆ. ಜೊತೆಗೆ ಉಳುವಾರು ಭೂ ಆಸ್ತಿ ಬಲ್ಲಾಳರಿಂದ ಬಂದದ್ದು ಎನ್ನುವುದಕ್ಕೆ, ಉಳ್ಳಾಕುಲು ದೈವಗಳು ಹೇಳುವ 'ಬಲ್ಲಾಳ್ರೆ ಪ್ರತಿ ಬಲ್ಲಾಳಾದ್ ಉಳುವಾರ್ದುಕುಳೆ ಕೈ ಸೇರೊಂಡೊ' ಎಂಬ ನುಡಿಕಟ್ಟನ್ನು ಸಾಕ್ಷಿಯಾಗಿ ಕೊಡುತ್ತಾರೆ.

ಉಳುವಾರ್ ತಾರವಾಡ್ ಮನೆಯ ಆವರಣದಲ್ಲಿ ಧರ್ಮದೈವ ಉದ್ರಾಂಡಿ, ವಿಷ್ಣುಮೂರ್ತಿ, ಪೊಟ್ಟಭೂತ, ಉಳ್ಳಾಕುಲು, ದೈವಗಳ ಮಾಡಗಳು ಮತ್ತು 'ಮುನಿಸ್ವಾಮಿ' ಮಠ (ಗೊರವ) ಇದೆ. ತೊಡಿಕಾನದ ಜಾತ್ರೆ ಸಂದರ್ಭದಲ್ಲಿ ಆರಾಧನೆಗೊಳ್ಳುವ ಉಳ್ಳಾಕುಲು ದೈವಗಳ ಭಂಡಾರ ಉಳುವಾರು ಮನೆಯಿಂದ ಹೋಗಬೇಕು. ಮನೆಯ ಆವರಣದಲ್ಲಿರುವ ಮುನಿಸ್ವಾಮಿ ಮಠಕ್ಕೆ ಸಂಬಂಧಿಸಿ, ಒಂದು ಕಿ. ಮೀ. ದೂರದಲ್ಲಿ 'ಕುಲ್ಚಾರು ಗುಹೆ' ಇದೆ. ಈ ಗುಹೆಯಲ್ಲಿ ತಪಸ್ಸು ಮಾಡಿಕೊಂಡಿದ್ದ ಮುನಿಸ್ವಾಮಿ ತರುವಾಯ ಉಳುವಾರು ಮನೆಯ ಆವರಣದಲ್ಲಿ ಪೂಜೆಗೊಳ್ಳುತ್ತಾ ಬಂದ ಎನ್ನುತ್ತಾರೆ.

ಸುಳ್ಯ ಪರಿಸರದ ಕುಟುಂಬಗಳಲ್ಲಿ ಸಂಖ್ಯಾ ದೃಷ್ಟಿಯಿಂದ ಉಳುವಾರು ಅತೀ ದೊಡ್ಡ ಕುಟುಂಬವಾಗಿತ್ತು ಎನ್ನುವುದನ್ನು ನಿರೂಪಿಸುವಂತೆ, ಒಂದು ಪ್ರತೀತಿ ಇದೆ. ''ಹಿಂದೆ ಬ್ರಿಟಿಷರ ಕುಮ್ಮಕ್ಕಿನಿಂದ ಕೊಡಗಿನ ದೊಡ್ಡ ವೀರರಾಜ ಅನೇಕ ಬಾರಿ ದರೋಡೆ ಮಾಡಿಸಿರುವುದಕ್ಕೆ ಸಾಕ್ಷ್ಯಾಧಾರಗಳಿವೆ. ತನ್ನ ದರೋಡೆ ತಂಡಕ್ಕೆ ಆತ ತುರ್ಕರ ದಂಡು ಎಂಬ ಹೆಸರಿಟ್ಟು ಟಿಪ್ಪುವಿನ ಹೆಸರಿಗೆ ಕಳಂಕ ತರುವ ಮೂಲಕ ಬ್ರಿಟಿಷರಿಂದ ಪ್ರಯೋಜನ ಪಡೆಯುವ ಹುನ್ನಾರ ಹೂಡಿದ್ದ'' (ಎನ್.ಎಸ್. ದೇವಿಪ್ರಸಾದ್, ೧೯೯೯, ಪುಟ ಸಂಖ್ಯೆ ೧೯, ಅಮರ ಸುಳ್ಯದ ಸ್ವಾತಂತ್ರ್ಯ ಸಮರ). ಈ ದಂಗೆಕೋರರು ಉಳುವಾರು ಮನೆಗೆ ಲೂಟಿಗಾಗಿ ಬಂದ ವಿಚಾರವಾಗಿಯೇ ಆ ಪ್ರತೀತಿ ಪ್ರಚಲಿತವಾಗಿದೆ. ದಂಗೆಕೋರರು ಉಳುವಾರು ಮನೆಯ ಲೂಟಿಗಾಗಿ ಬಂದಾಗ ಅವರಿಗೊಂದು ಆಶ್ಚರ್ಯ ಕಾದಿತ್ತಂತೆ. ಮನೆಯಲ್ಲಿ ನೂರೊಂದು ತೊಟ್ಟಿಲುಗಳಿದ್ದವು. ದಂಗೆಕೋರರ ಸುಳಿವು ಸಿಕ್ಕ ಮನೆಯವರು, ಆ ತೊಟ್ಟಿಲ ಮಕ್ಕಳನ್ನು ಮತ್ತು ಒಂದು ಅಜ್ಜಿಯನ್ನು ಕೋಣೆಯೊಂದರಲ್ಲಿ ಕೂಡಿ ಬಿಟ್ಟು, ಪಕ್ಕದಲ್ಲಿ ಇರುವ 'ಕುಲ್ಚಾರು ಗುಹೆ'ಯಲ್ಲಿ ತಲೆಮರೆಸಿಕೊಂಡರು. ದಂಗೆಕೋರರು ಮನೆ

ಲೂಟಿಗೆ ಬಂದಾಗ ಮನೆಯಲ್ಲಿದ್ದ ಮಕ್ಕಳು ಮತ್ತು ಅಜ್ಜಿಯನ್ನು ಕಂಡು ಸಹಾನುಭೂತಿಯಿಂದ ಮನೆ ದೋಚುವ ಮತ್ತು ಬೆಂಕಿ ಹಚ್ಚುವ ಕೃತ್ಯವನ್ನು ಕೈಬಿಟ್ಟು ಹೋದರಂತೆ. ಇನ್ನೊಂದು ದಂತಕತೆ ಪ್ರಕಾರ ಮನೆತನದ ನಂಬಿಕಸ್ಥ ದೈವ ವಿಷ್ಣುಮೂರ್ತಿಯೆ ಸ್ವತಃ ದಂಗೆಕೋರರನ್ನು ತಡೆಯಿತೆಂದು ಹೇಳುತ್ತಾರೆ. ಒಟ್ಟಿನಲ್ಲಿ ಉಳುವಾರು ಮನೆತನ ದೊಡ್ಡ ಕುಟುಂಬವಾಗಿತ್ತು. ಕುಟುಂಬದ ಸಂಖ್ಯಾ ದೃಷ್ಟಿಯಿಂದ ಇಂದೂ ಕೂಡ ಉಳುವಾರು ದೊಡ್ಡದಾಗಿಯೇ ಇದೆ.

ಸೀಮೆ ದೇವಸ್ಥಾನ ತೊಡಿಕಾನದ ಮುಕ್ತೇಶ್ವರಿಕೆ ಬಲ್ಲಾಳರ ತರುವಾಯ ಉಳುವಾರು ಮನೆತನಕ್ಕೆ ನಡೆದು ಬಂದಿದೆ. ಸೀಮೆಗೌಡರ ಸ್ಥಾನಮಾನ, ಗ್ರಾಮ ಪಟೇಲತಿಕೆ, ಈ ಮನೆತನಕ್ಕೆ ಇತ್ತು. ಮೌಖಿಕ ಆಧಾರದ ಪ್ರಕಾರ ಬೆಳ್ಯಪ್ಪ ಗೌಡ, ರಾಮ ಗೌಡ, ಚಿನ್ನಪ್ಪ ಗೌಡ, ಮಾಯಿಲಪ್ಪ ಗೌಡ, ಕೃಷ್ಣಪ್ಪ ಗೌಡರ ಮೂಲಕ ಪಟೇಲ ಸ್ಥಾನ ಹರಿದು ಬಂದಿತ್ತು. ಕೃಷ್ಣಪ್ಪ ಗೌಡರ ಕಾಲದಲ್ಲಿ, ಗ್ರಾಮ ಪಂಚಾಯತ್ ರಚನೆಯಾಗುವುದರೊಂದಿಗೆ ಪಟೇಲ ಸ್ಥಾನ ರದ್ದಾಯಿತು. ಮಾಯಿಲಪ್ಪ ಗೌಡರು ಉಳುವಾರು ಮನೆತನದಲ್ಲಿ ಪ್ರಸಿದ್ಧ ಹೆಸರು.

ಬಲ್ಲಾಳರ ಕಾಲದಲ್ಲಿ ಊರಿನ ನ್ಯಾಯ ತೀರ್ಮಾನ ಬಂಟೋಡಿ ಚಾವಡಿಯಲ್ಲಿ ನಡೆಯುತ್ತಿತ್ತು. ಉಳುವಾರಿಗೆ ಬಲ್ಲಾಳರ ಹಕ್ಕು ಬಾಧ್ಯತೆಗಳು ವರ್ಗಾವಣೆಯಾಗುವುದರೊಂದಿಗೆ ಈ ನ್ಯಾಯ ತೀರ್ಮಾನ ಉಳುವಾರಿನ ಎಂಟು ಸೂತ್ರದ ಮನೆಯಲ್ಲಿ ಮಾತ್ರ ಕಂಡುಬರುವ 'ನ್ಯಾಯ ಕಟ್ಟೆ'ಯಲ್ಲಿ ನಡೆಯುತ್ತಿತ್ತು. ಈ ಕಟ್ಟೆಯಲ್ಲಿ ತೀರ್ಮಾನವಾದ ವಿವಾದ ಬಲ್ಲಾಳರ ಮೂಲವಾದ ಬಂಡೋಡಿಯ ಉಲ್ಲಾಕುಳೆ ಚಾವಡಿಯಲ್ಲಿ ಪ್ರಮಾಣೀಕರಿಸಲಾಗುತ್ತಿತ್ತು. ನ್ಯಾಯ ತೀರ್ಮಾನದಲ್ಲಿ ಉಳುವಾರಿನವರು ನಿಷ್ಪಕ್ಷಪಾತಿಗಳಾಗಿದ್ದರು. ''ಎರಡು ಗುತ್ತು ನೂದಾಳ್ ಸೀಮೆಡ್ ಉಳುವಾರ್ದಕುಳು ಬುದ್ಧಿವಂತೆರ್'' ಎನ್ನುವ ಉಳ್ಳಾಕುಲೆ ಮದಿಪು ಈ ಮಾತನ್ನು ಪುಷ್ಟೀಕರಿಸುತ್ತದೆ.

ಎಂಟು ಸೂತ್ರದ ಮಾಳಿಗೆಯ ಹುಲ್ಲು ಮಾಡಿನ ಮನೆ ಸುಮಾರು ಅರುವತ್ತು ವರ್ಷಗಳ ಹಿಂದೆ ಬಿದ್ದು ನೆಲಸಮವಾಯಿತು. ಬಿದ್ದು ಹೋದ ಮನೆ ಸುಮಾರು ಇನ್ನೂರು ವರ್ಷಗಳಷ್ಟು ಹಳೆಯದಾದ ಮನೆ. ಈ ಮನೆಯ ಆವರಣದಲ್ಲಿ ಅರ್ಧ ಕಟ್ಟೆಯಿರುವ ಒಂದು ಬಾವಿ ಇದೆ. ಈ ಬಾವಿಯ ದಂಡೆ ಮರಗಳು ಈ ಮನೆಯ ಇತಿಹಾಸವನ್ನು ಹೇಳುವ 'ಶಾಸನ'ದಂತೆ ಇಂದೂ ಕಣ್ಣಿಗೆ ಬೀಳುತ್ತಿದೆ. ಆಡಳಿತಾತ್ಮಕ ಮತ್ತು ಧಾರ್ಮಿಕವಾಗಿ ಉಳುವಾರು ಮನೆತನ ತೊಡಿಕಾನ ಸೀಮೆಗೆ ಕೇಂದ್ರ ಸ್ಥಾನವಾಗಿತ್ತು. ಈ ಸ್ಥಾನವನ್ನು ಮತ್ತೆ ಕಂಡುಕೊಳ್ಳುವ ಪ್ರಯತ್ನವಾಗಿ ಹಿಂದೆ ಎಂಟು ಸೂತ್ರದ ಮನೆಯಿದ್ದ ನಿವೇಶನದಲ್ಲಿಯೇ ಸಣ್ಣದಾದ ನಾಲ್ಕು ಸೂತ್ರದ ಹೊಸಮನೆಯನ್ನು ನಿರ್ಮಿಸಲಾಗಿದೆ. ಹಿಂದಿನ ಮನೆಗಿಂತ ಕೆಲವೊಂದು ಸಣ್ಣಪುಟ್ಟ ಬದಲಾವಣೆಗಳನ್ನು ಹೊಂದಿಕೊಂಡು ಕಾಂಕ್ರೀಟ್‌ನಿಂದ ರಚನೆಯಾಗಿದೆ. ಕೂಡು ಕುಟುಂಬವಾಗಿದ್ದ, ಈ ಮನೆಯ ಸದಸ್ಯರು, ಒಟ್ಟು ಸೇರಿ ಹೊಸಮನೆಯನ್ನು ನಿರ್ಮಿಸಿದ್ದಾರೆ. ಐತಿಹಾಸಿಕವಾಗಿ ಸುಳ್ಯ ಪರಿಸರದಲ್ಲಿ ಸಾಮಾಜಿಕ, ಧಾರ್ಮಿಕ, ಆಡಳಿತಾತ್ಮಕವಾಗಿ ಸ್ಥಾನ ಪಡೆದಿದ್ದ ಉಳುವಾರು ಮನೆತನ ಮತ್ತೆ ತನ್ನ ಗತವೈಭವವನ್ನು ಈ ಮೂಲಕ ಕಂಡುಕೊಳ್ಳುವ ಪ್ರಯತ್ನದಲ್ಲಿದೆ.

## ೫. ದೇರಾಜೆ ಮನೆತನ

ಸುಳ್ಯ ತಾಲೂಕಿನ ಅರಂತೋಡಿನಿಂದ ಸುಮಾರು ನಾಲ್ಕು ಕಿ. ಮೀ. ದೂರದ ಪ್ರಕೃತಿ ಸುಂದರ ಕಾಡು ಬೆಟ್ಟಗಳ ಮಧ್ಯೆ ಈ ನಾಲ್ಕು ಸೂತ್ರದ ಹಳೆಯ ಮನೆ ಇದೆ. ವಾಹನ ಸೌಕರ್ಯ ಇರುವ ಈ ಕಾಲದಲ್ಲಿಯೂ ದುಸ್ತರವಾಗಿರುವ ದಾರಿಯಲ್ಲಿ ಈ ಮನೆಗೆ ಹೋಗುವುದು ಸಾಹಸದ ಕೆಲಸವಾಗಿರುವಾಗ ದಾರಿಗೆ ಸೌಕರ್ಯವಿಲ್ಲದ ಕಾಲದಲ್ಲಿ ಈ ಮನೆಗೆ ಹೋಗುವ ಸಾಹಸವನ್ನು ಊಹಿಸಲು ಅಸಾಧ್ಯ.

ಮಣ್ಣಿನ ಗೋಡೆಯ, ಮುಳಿ ಮಾಡಿನ ನಾಲ್ಕು ಸೂತ್ರದ ಮನೆಯನ್ನು ಸುಮಾರು ನೂರು ವರ್ಷಗಳಷ್ಟು ಹಿಂದೆ ರಾಮಯ್ಯ ಗೌಡರು ಕಟ್ಟಿಸಿದರು. ತರುವಾಯ ಕುಟ್ಟಿ ಯಾನೆ ಶಿವಣ್ಣ ಗೌಡರ ಕಾಲದಲ್ಲಿ ಮಂಗಳೂರು ಹಂಚಿನ ಮಾಡಿನ ಮನೆಯಾಗಿ ಪರಿವರ್ತಿತವಾಯಿತು. ಕಲ್ಲಿನ ಗೋಡೆ, ಮರಮುಟ್ಟುಗಳಿಂದ ಈಗಿರುವ ನಾಲ್ಕುಸೂತ್ರದ ಮನೆಗಳಲ್ಲಿಯೇ ಭವ್ಯವಾಗಿದೆ ಮತ್ತು ಭಿನ್ನವಾಗಿದೆ. ಈ ಮನೆಗೆ ನಾಲ್ಕು ದಿಕ್ಕುಗಳಿಂದಲೂ ಬಾಗಿಲುಗಳಿವೆ. ಅಂಗಳದಿಂದ ಜಗಲಿಗೆ ಪ್ರವೇಶವಾಗುವ ಮುನ್ನ ಮೊಗಸಾಲೆಯಿದೆ. ಚಾವಡಿಯ ಮೇಲೆ ಮಾಳಿಗೆ ಇದೆ. ಕಲ್ಲಿನ ಗೋಡೆಗಳು ಸಿಮೆಂಟ್ ಸಾರಣೆಯನ್ನು ಹೊಂದಿಲ್ಲ. ಈಗ ಈ ಮನೆಯಲ್ಲಿ ಹಿರಿಯರಾದ ಶ್ರೀ ಸುಂದರ ಗೌಡರು ತಮ್ಮ ಸಂಸಾರದೊಂದಿಗೆ ವಾಸವಾಗಿದ್ದಾರೆ. ಆದರೆ ಈ ಮನೆಯಲ್ಲಿ ಮನೆತನದ ಪ್ರತಿಯೊಬ್ಬ ಸದಸ್ಯರಿಗೂ ಹಕ್ಕು ಬಾಧ್ಯತೆಗಳಿವೆ.

ಸುಳ್ಯ ಪರಿಸರದ ಮುಖ್ಯ ಐದ್ ಮನೆತನಗಳಲ್ಲಿ ಒಂದಾಗಿರುವ ಈ ಮನೆತನಕ್ಕೆ ಹಿಂದೆ ಗ್ರಾಮ ಪಟೇಲ ಸ್ಥಾನವಿತ್ತು. ಸೀಮೆ ದೈವಸ್ಥಾನ ತೊಡಿಕಾನದಲ್ಲಿ ವಿಶೇಷ ಮನ್ನಣೆ ಇದೆ. ಕೂಡು ಕುಟುಂಬವಾಗಿದ್ದ ಮನೆತನದ ಕವಲುಗಳು ಗುತ್ತು, ಕಲ್ಚೈಲ್ ಮತ್ತು ಕೊಡಗರಸರ ಕಾಲದಿಂದ ಉಂಬಳಿ ಭೂಮಿ ಹೊಂದಿ ಕೊಡಗಿನ ಮುರ್ನಾಡುಗಳಲ್ಲಿ ಮೇಲು ದೇರಾಜೆ ಮನೆತನವೆಂದು ಗುರುತಿಸಿಕೊಂಡು ನೆಲೆಯಾಗಿದೆ. ಸುಳ್ಯದಲ್ಲಿ ನಡೆದ ೧೮೩೭ರ ಐತಿಹಾಸಿಕ ಬಂಡಾಯದಲ್ಲಿ ಈ ಮನೆತನದ ಬಚ್ಚಗೌಡ ಭಾಗಿಯಾಗಿದ್ದಾನೆ. ಇದರಿಂದಾಗಿ ಬ್ರಿಟಿಷರ ವಿರುದ್ಧ ಪ್ರತಿಭಟಿಸಿದ ವೀರರ ಮನೆತನವೆಂಬ ಹೆಗ್ಗಳಿಕೆ ಈ ಮನೆತನಕ್ಕೂ ಸಲ್ಲುತ್ತದೆ. ದಂಗೆಕೋರರು ಲೂಟಿಗಾಗಿ ಈ ಮನೆಗೆ ದಾಳಿ ಮಾಡಿದಾಗ ಭತ್ತವನ್ನು ಹೊಂಡದಲ್ಲಿ ಮುಚ್ಚಿ ಹಾಕಿ ಓಡಿ ಹೋಗಿದ್ದ ಘಟನೆಯನ್ನು ಮನೆಯ ಹಿರಿಯರು ಮೌಖಿಕವಾಗಿ ಹರಿದು ಬಂದ ಪರಿಜ್ಞಾನದಿಂದ ವಿವರಿಸುತ್ತಾರೆ. ಮತ್ತು ಭತ್ತ ಮುಚ್ಚಿ ಹಾಕಿದ್ದ ಹೊಂಡವನ್ನು ತೋರಿಸುತ್ತಾರೆ. ಆ ಹೊಂಡದ ಕುರುಹನ್ನು ಮನೆಯ ಪಕ್ಕದ ಗುಡ್ಡೆಯಲ್ಲಿ ಈಗಲೂ ನೋಡಬಹುದು.

## ೬. ಸಂಪಾಜೆಯ ನಾಲ್ಕು ಸೂತ್ರದ ಮನೆ

ಈ ಮನೆಯನ್ನು ಸಂಪಾಜೆ ಎಸ್. ಎಸ್. ದೇವಿಪ್ರಸಾದರ ಮನೆಯೆಂದು ಕರೆಯುವುದು ವಾಡಿಕೆ. ಈಗ ಇರುವ ನಾಲ್ಕು ಸೂತ್ರದ ಮನೆಗಳಲ್ಲಿ ಪರಂಪರೆಯೊಂದಿಗೆ ಹೆಚ್ಚು ಆಧುನಿಕತೆಗೆ

ಹೊಂದಿಕೊಂಡ ಮನೆ. ಸಂಪ್ರದಾಯವನ್ನು ತಿರಸ್ಕರಿಸದೆ ಆಧುನಿಕ ಶೈಲಿಯನ್ನೂ ಪುರಸ್ಕರಿಸದೆ, ಇವೆರಡರ ಸಮನ್ವಯವನ್ನು ಈ ಮನೆಯ ರಚನೆಯಲ್ಲಿ ಕಾಣಬಹುದು.

ದಿ. ಎಸ್. ಸಣ್ಣಯ್ಯ ಪಟೇಲರು ಕ್ರಿ. ಶ. ೧೯೨೦ರಲ್ಲಿ ಈ ಮನೆಯನ್ನು ಕಟ್ಟಿಸಿದರು. ಆಗ ಅದು ಕೃಷಿಕಾರ್ಯಗಳಿಗೆ ಹೊಂದಿಕೊಂಡು ರಚನೆಯಾಗಿತ್ತು. ಅವರ ಮಗ ಎಸ್. ಎಸ್. ದೇವಿ ಪ್ರಸಾದರು ಅದನ್ನು ಪೂರ್ಣ ನಾಲ್ಕು ಸೂತ್ರದ ಮನೆಯನ್ನಾಗಿ ಪರಿವರ್ತಿಸಿದರು. ತುಳುನಾಡು ಮತ್ತು ಕೊಡಗು ಜಿಲ್ಲೆಗಳ ಗಡಿ ಪ್ರದೇಶದಲ್ಲಿರುವ ಈ ಮನೆ ಎರಡು ಭಿನ್ನ ಸಂಸ್ಕೃತಿಗಳ ಹೊಂದಾಣಿಕೆಯ ಮತ್ತು ಬ್ರಿಟಿಷರು ಕೊಡಗರ ಮೇಲೆ ಬೀರಿದ ಪ್ರಭಾವದ ಛಾಯೆಯನ್ನು ಪ್ರತಿಬಿಂಬಿಸುವಂತಿದೆ.

ಈ ಮನೆತನಕ್ಕೆ ಪಟೇಲ ಸ್ಥಾನವಿತ್ತು. ಗ್ರಾಮ ದೈವ ದೇವಸ್ಥಾನಗಳ ಮುಕ್ತೇಶ್ವರಿಕೆ. ಪರಂಪರೆಯಿಂದ ನಡೆದು ಬರುತ್ತಿದೆ. ಈ ಮನೆಯ ಆವರಣದಲ್ಲಿ ಉಳ್ಳಾಕುಲು, ವಿಷ್ಣುಮೂರ್ತಿ ಮೊದಲಾದ ದೈವಗಳ ಗುಡಿ - ಮಾಡಗಳಿವೆ.

ಕ್ರಿ. ಶ. ೧೮೩೭ರ ಅಮರ ಸುಳ್ಯದ ಸ್ವಾತಂತ್ರ್ಯ ಹೋರಾಟದಲ್ಲಿ ಸುಳ್ಯ ಪರಿಸರದ ನಾಲ್ಕಂಕಣದ ಐನ್ ಮನೆತನಗಳ ಗೌಡ ಯೋಧರು ಮತ್ತು ಎಲ್ಲಾ ಜಾತಿ ಜನಾಂಗದವರು ಸಕ್ರಿಯವಾಗಿ ಭಾಗವಹಿಸಿದ್ದು ಗತ ಇತಿಹಾಸ. ಈ ಸಂಗತಿ ಕಾಲಗರ್ಭದಲ್ಲಿ ಅವಗಣನೆಗೆ ತುತ್ತಾಗಿ ಮರೆತು ಹೋಗಿದೆ. ಯಾವ ಇತಿಹಾಸದಲ್ಲೂ ಅದೊಂದು ಸ್ವಾತಂತ್ರ್ಯ ಹೋರಾಟವೆಂದು ದಾಖಲಾಗಿಲ್ಲ. ಬದಲಾಗಿ ಅದೊಂದು 'ದಂಗೆ'ಯೆಂದು, 'ಕಾಟುಕಾಯಿ'ಯೆಂದು ಉಲ್ಲೇಖಗೊಂಡಿದೆ. ಈ ಹೋರಾಟದ ನಿಜವಾದ ಉದ್ದೇಶವನ್ನು ತಿಳಿಯದೆ ಅಪಾರ್ಥವನ್ನು ನೀಡಲಾಗಿದೆ. ಇದೆಲ್ಲವನ್ನು ಮುಂದಿಟ್ಟುಕೊಂಡು ಸಂಪಾಜೆ ಮನೆತನದ ಎಸ್. ಎಸ್. ದೇವಿಪ್ರಸಾದರು ಈ ಕುರಿತಾದ ಚರಿತ್ರೆಯನ್ನು ಪುನರ್ರಚಿಸುವ ಕಾರ್ಯವನ್ನು ಮಾಡುತ್ತಿದ್ದಾರೆ. ಈಗಾಗಲೇ ಅವರು 'ಅಮರ ಸುಳ್ಯದ ಸ್ವಾತಂತ್ರ್ಯ ಸಮರ' ಕೃತಿಯನ್ನು ಬರೆದಿದ್ದಾರೆ. 'ಕೊಡಗಿನಲ್ಲಿ ಭಾಷಾ ಸಾಂಸ್ಕೃತಿಕ ಸಾಮರಸ್ಯ' ಕೃತಿಯನ್ನು ಸಂಪಾದಿಸಿದ್ದಾರೆ. ಅಲ್ಲದೆ ಆ ಹೋರಾಟದಲ್ಲಿ ಹುತಾತ್ಮರಾದವರ ಪರ ಜನಜಾಗೃತಿ ಮೂಡಿಸುವ ದೃಷ್ಟಿಯಿಂದ 'ಜಾಥಾ' ಭಾಷಣ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತಿದೆ. 'ಅಮರ ಸುಳ್ಯ ಹೋರಾಟ ಸಮಿತಿ'ಯನ್ನು ರಚಿಸಿ, ಅದರ ಮೂಲಕ ಸರಕಾರದ ಗಮನ ಸೆಳೆಯುವ, ಹುತಾತ್ಮರಾದ ಹೋರಾಟಗಾರರಿಗೆ ಸಿಗಬೇಕಾದ ಗೌರವವನ್ನು ತಂದುಕೊಡುವ ಪ್ರಯತ್ನವನ್ನು ಮಾಡುತ್ತಿದ್ದಾರೆ.

ಹಿಂದೆ ನಾಲ್ಕು ಸೂತ್ರದ ಐನ್‌ಮನೆಗಳು ಬಹುಸಂಖ್ಯೆಯಲ್ಲಿದ್ದು, ಈಗ ಬೆರಳೆಣಿಕೆಯಷ್ಟು ಕಂಡುಬರುತ್ತವೆ. ಮೊದಲು ಇತ್ತು ಎನ್ನಲಾದ ಚೊಕ್ಕಾಡಿ, ಗುಡ್ಡ, ಬಳ್ಳಡ್ಕ ಪರಿವಾರ, ಅರಂಬೂರು ಐನ್‌ಮನೆಗಳು ಇಂದು ಇಲ್ಲವಾಗಿವೆ. ಜನಪದರ ಇಂತಹ ಭೌತಿಕ ಬದುಕಿನ ವಾಸ್ತವಗಳು ಯಾವ ಚರಿತ್ರೆಯಲ್ಲೂ ದಾಖಲಾಗಿಲ್ಲ. ದಾಖಲಾಗುವ ದೃಷ್ಟಿಯಿಂದ ವೈಶಿಷ್ಟ್ಯಪೂರ್ಣವಾದ ಗೌಡರ ನಾಲ್ಕು ಸೂತ್ರದ ಐನ್ ಮನೆಗಳ ಮತ್ತು ಮನೆತನಗಳ ಅಧ್ಯಯನವಾಗಬೇಕಾದ ಅಗತ್ಯವಿದೆ.

## ಟಿಪ್ಪಣಿ

೧. ಅಮೃತ ಸೋಮೇಶ್ವರರ ಅಭಿನಂದನ ಸಂಪುಟ 'ಸಿರಿ'ಯಲ್ಲಿ ಪ್ರಕಾಶ್ಚಂದ್ರ ಶಿಶಿಲರ 'ತುಳುನಾಡಿನ ವಾಸ್ತುಶಿಲ್ಪ' ಎಂಬ ಲೇಖನವಿದೆ. ಈ ಲೇಖನವು ಡಾ. ಕೆ. ಚಿನ್ನಪ್ಪ ಗೌಡರ ಮಾರ್ಗದರ್ಶನದಲ್ಲಿ ಎಂ. ಫಿಲ್. ಪದವಿಗೆ ಸಲ್ಲಿಸಲಾದ, ಇದೇ ಶೀರ್ಷಿಕೆಯ ಪ್ರೌಢ ಪ್ರಬಂಧದ ಸಾರವನ್ನೊಳಗೊಂಡಿದೆ. ನನ್ನ ಈ ಲೇಖನಕ್ಕೆ ಒಂದು ಚೌಕಟ್ಟು ಕೊಡುವ ಪ್ರಯತ್ನ ವಾಗಿ ಪ್ರಕಾಶ್ಚಂದ್ರರ ಲೇಖನವನ್ನು ಅನುಸರಿಸಿದ್ದೇನೆ. ಆದರೆ ಅವರ ಲೇಖನದಲ್ಲಿ ಗೌಡರ ನಾಲ್ಕು ಸೂತ್ರದ ಐನ್‌ಮನೆಗಳ ಪ್ರಸ್ತಾವ ಬರುವುದಿಲ್ಲ.

೨. ಸುಳ್ಯ ಪರಿಸರದ ಗೌಡ ಜನಾಂಗದ ವಿವರವಾದ ಅಧ್ಯಯನ ಮಾಡಿದವರು ಡಾ. ಪುರುಷೋತ್ತಮ ಬಿಳಿಮಲೆಯವರು. ಅವರು ತಮ್ಮ ಪಿ.ಎಚ್.ಡಿ. ಪದವಿಗಾಗಿ 'ಸುಳ್ಯ ಪರಿಸರದ ಗೌಡರ ಜನಾಂಗ - ಸಾಂಸ್ಕೃತಿಕ ಅಧ್ಯಯನ' ಎಂಬ ಶೀರ್ಷಿಕೆಯ ಮಹಾಪ್ರಬಂಧ ವನ್ನು ೧೯೮೫ರಲ್ಲಿ ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದ್ದಾರೆ. ಈ ಅಧ್ಯಯನದಲ್ಲಿ ಅವರು ಗೌಡರ ಕುಟುಂಬ ಪದ್ಧತಿ, ಬಳಿ ಪದ್ಧತಿ, ಇತಿಹಾಸ ಮನೆಗಳ ರಚನೆ, ಇವುಗಳ ಬಗೆಗೆ ವಿವರಣಾತ್ಮಕವಾಗಿ ಚರ್ಚಿಸಿದ್ದಾರೆ. ಇದು ಅಪ್ರಕಟಿತ ಕೃತಿಯಾಗಿದೆ.

೩. ಪುತ್ತೂರು ಗೌಡ ಸಮಾಜ (ರಿ.) ಇವರು ಪ್ರಕಟಿಸಿರುವ 'ಕಲ್ಯಾಣ' ಸ್ಮರಣ ಸಂಚಿಕೆಯಲ್ಲಿ ಡಿ. ಜಿ. ನಡ್ಕರವರ 'ಗೌಡ ಜನಾಂಗ - ಒಂದು ಐತಿಹಾಸಿಕ ಅವಲೋಕನ' ಎಂಬ ಲೇಖನವಿದೆ. ಇದು ಗೌಡ ಜನಾಂಗದ ಮೂಲದ ಕುರಿತಾಗಿ ಮಾಹಿತಿಗಳನ್ನು ಒದಗಿಸುತ್ತದೆ. ಮಾಹಿತಿಗಾಗಿ ಲೇಖನದ ವಿವರಗಳನ್ನು ನೋಡಬಹುದು.

೪. ಗೌಡರ ಮದುವೆಗಳಲ್ಲಿ ಗಂಡಿನ ಕಡೆಯವರು ಹೆಣ್ಣಿನ ಕಡೆಯವರಿಗೆ ರೂ. ೧೦.೫೦ನ್ನು 'ತೆರ ಪಣ'ವು ಎಂದು ಕಟ್ಟುವ ಕ್ರಮವಿದೆ. ಇದರಲ್ಲಿ ರೂ. ೬.೨೫ನ್ನು 'ಗುರು ಪಣ'ವಾಗಿ ಊರ ಗೌಡ ಸಂಗ್ರಹಿಸಿ ಮಾಗಣೆ ಗೌಡರಿಗೆ ಸಲ್ಲಿಸಬೇಕು. ಮಾಗಣೆ ಗೌಡರು ಅದನ್ನು ಕಟ್ಟೆಮನೆಗೆ ತಲುಪಿಸಬೇಕು. ಕಟ್ಟೆ ಮನೆಯವರು ಗೌಡರ ಗುರುಪೀಠ ಶೃಂಗೇರಿಗೆ ಸಲ್ಲಿಸಬೇಕು. ಇದು ಗೌಡ ಸಮಾಜದ ಕಟ್ಟಳೆ.

೫. ಗೌಡರ ಬಳಿ ಪದ್ಧತಿಯ ಪ್ರಕಾರ 'ಕಬರು ಬಳಿ'ಯವರ ಕುರಿತಾದ ಪ್ರತೀತಿ ಈ ರೀತಿಯಾಗಿದೆ. ''ಐಗೂರು ಪ್ರದೇಶದಿಂದ ಲಿಂಗಾಯಿತ ಮತಸ್ಥರಾದ ಇಬ್ಬರು ಸಹೋದರರು ಕುದುರೆಯೇರಿ ಸುಳ್ಯ ಪರಿಸರಕ್ಕೆ ಬರುತ್ತಾರೆ. ಅವರಿಗೆ ಗೌಡ ಮನೆತನ ಕಟ್ಟೆಮನೆ ಕೂಜುಗೋಡಿನಲ್ಲಿ ಆಶ್ರಯ ದೊರೆಯುತ್ತದೆ. ತರುವಾಯ ಅವರು ಸುಳ್ಯದ ಹತ್ತಿರದ ಬಳ್ಪಡ್ಕಕ್ಕೆ ಬರುತ್ತಾರೆ. ಆಗ ಕತ್ತಲಾಗುತ್ತದೆ. ಅಲ್ಲಿ ಒಂದು ವಿಶಾಲವಾದ ಪಡ್ಪುವಿನಲ್ಲಿ ಹಸಿ 'ತಜಂಕ್' (ಚಗತೆ) ಗಿಡ ಗಳನ್ನು ಸೇರಿಸಿ ಬೆಂಕಿ ಹಾಕಿ ಚಳಿ ಕಾಯಿಸುತ್ತಾರೆ. ಈ ತಜಂಕ್ ಗಿಡ ಬೂದಿಯಾಗುವ ಬದಲು ಕೆಂಡವಾಗುತ್ತದೆ. ಗಾಢ ನಿದ್ರೆಯಿಂದ ಎದ್ದು ಬೆಳಿಗ್ಗೆ ಅಣ್ಣ ನೋಡಿದಾಗ ತಮ್ಮ ನಾಗಲೀ ತಮ್ಮನ ಕುದುರೆಯಾಗಲೀ ಕಾಣಿಸುವುದಿಲ್ಲ. ಹಾಗೆ ಹೋದ ತಮ್ಮ ಕುಂಬ್ಳೆಯ

ಮಾಯಿಪ್ಪಾಡಿ ಅರಸು ಮಗಳನ್ನು ಮದುವೆಯಾಗಿ ಊರಿನ ಅರಸನಾಗುತ್ತಾನೆ. ಅಣ್ಣ ಬಳ್ಳಡ್ಕದಲ್ಲಿ ನೆಲೆ ನಿಂತು ಪಕ್ಕದ ಅಮ್ಮೆ ಮನೆಯಿಂದ ಮದುವೆಯಾಗಿ ತಾನು ಗೌಡ ಜನಾಂಗಕ್ಕೆ ಸೇರಿಕೊಳ್ಳುತ್ತಾನೆ. ಅಮ್ಮೆ ಮನೆಯ ಮಡದಿಯಿಂದ ಹುಟ್ಟಿದ ಸಂತತಿ 'ಕಬರು ಬಳಿ' ಎಂದು ಮುಂದೆ ವೃದ್ಧಿಯಾಗುತ್ತದೆ. ಸಂತಾನ ದೊಡ್ಡದಾಗಿ ಸುಳ್ಯ ಪರಿಸರದಲ್ಲಿ ಒಂಬತ್ತು ಮನೆತನಗಳಾಗಿ ನೆಲೆ ನಿಲ್ಲುತ್ತದೆ.

೬. ಗೌಡ ಕುಟುಂಬಗಳು ಕೊಡಗಿನ ಪ್ರದೇಶಗಳಲ್ಲಿ ನೆಲೆಯಾದ ಮತ್ತು ರಾಜರಿಂದ ಪಡೆದ ಸ್ಥಾನಮಾನಗಳಿಗೆ ಸಂಬಂಧಿಸಿದ ವಿವರಗಳಿಗೆ ಎಸ್. ಎಸ್. ದೇವಿ ಪ್ರಸಾದ್ ಸಂಪಾಜೆಯವರ 'ಅಮರ ಸುಳ್ಯದ ಸ್ವಾತಂತ್ರ್ಯ ಸಮರ' ಕೃತಿಯನ್ನು ನೋಡಬಹುದು.

೭. ನಾಲ್ಕು ಸೂತ್ರದ ಐನ್ ಮನೆಯ ಸಾಮಾನ್ಯ ರಚನೆಯನ್ನು ಸೂಚಿಸುವ ರೇಖಾಚಿತ್ರ ಸಂಖ್ಯೆ ೩ನ್ನು ಸುಳ್ಯ ತಾಲೂಕಿನ ನಾರ್ಕೋಡು ಸಮೀಪದ ಕುಂಚಡ್ಕದ ಮನೆಯನ್ನು ಆಧರಿಸಿ ರಚಿಸಲಾಗಿದೆ. ಕಾಲದ ದೃಷ್ಟಿಯಿಂದ ಹಳೆಯದಾದ ಮತ್ತು ಸಾಂಪ್ರದಾಯಿಕ ಅಂಶಗಳಿಗಾಗಿ ಇದು ಮುಖ್ಯವಾದ ಮನೆಯಾಗಿದೆ. ಬಿದ್ದು ಹೋಗಿದ್ದ ಮನೆಯನ್ನು ಹೊಸದಾಗಿ ನಿರ್ಮಿಸುವಾಗಲೂ ಹಳೆಯ ವಿನ್ಯಾಸವನ್ನೇ ಅನುಸರಿಸಲಾಗಿದೆ. ನ್ಯಾಯಕಟ್ಟೆ ಈ ಮನೆಯಲ್ಲಿ ಇಲ್ಲ. ಉಳುವಾರು ಮನೆಯಲ್ಲಿ ಮಾತ್ರ ವಿಶೇಷವಾಗಿ ಕಂಡುಬರುತ್ತದೆ. ಈ ಅಂಶವನ್ನು ರೇಖಾಚಿತ್ರದಲ್ಲಿ ತೋರಿಸಲಾಗಿದೆ.

## ಪರಾಮರ್ಶನ ಕೃತಿಗಳು


೧. ಸಂ. ಡಾ. ಪುರುಷೋತ್ತಮ ಬಿಳಿಮಲೆ, ಶ್ರೀ ಎ.ವಿ. ನಾವಡ, ವಿದ್ವಾನ್ ರಾಮಚಂದ್ರ ಉಚ್ಚಿಲ, ೧೯೯೫, ಸಿರಿ, ಅಮೃತ ಸೋಮೇಶ್ವರ ಅಭಿನಂದನ ಸಂಪುಟ, ಕಲಾಗಂಗೋತ್ರಿ, ಸೋಮೇಶ್ವರ.

೨. ಡಾ. ಚಿನ್ನಪ್ಪ ಗೌಡ ಕೆ. ೧೯೯೦, ಭೂತಾರಾಧನೆ ಜಾನಪದೀಯ ಅಧ್ಯಯನ, ಮದಿಪು ಪ್ರಕಾಶನ, ಮಂಗಳಗಂಗೋತ್ರಿ, ದ.ಕ.

೩. ಡಾ. ಪುರುಷೋತ್ತಮ ಬಿಳಿಮಲೆ, ೧೯೯೦, ಕರಾವಳಿ ಜಾನಪದ, ಮಂಗಳೂರು ವಿಶ್ವವಿದ್ಯಾನಿಲಯ

೪. ಕಲ್ಯಾಣ, ೨೦೦೨ ಸಂ. ದೇವಸ್ಯ ಮನೋಹರ ಗೌಡ ಸಮಾಜ (ರಿ.) ಪುತ್ತೂರು.

೫. ಸಂ. ಡಾ. ಕೆ. ವಿ. ರೇಣುಕಾ ಪ್ರಸಾದ್, ೧೯೯೬, ವೀಳ್ಯ ಸ್ಮರಣಸಂಚಿಕೆ ದ. ಕ. ಮತ್ತು ಕೊಡಗು ಜಿಲ್ಲಾ ಗೌಡ ಸಮ್ಮೇಳನ, ಸುಳ್ಯ.

೬. ಡಾ. ಬಿ.ಎ. ವಿವೇಕ ರೈ, ೧೯೮೫, ಆನ್ವಯಿಕ ಜಾನಪದ, ಮಂಗಳಗಂಗೋತ್ರಿ, ದ.ಕ.

೭. ಎಸ್.ಎಸ್. ದೇವಿ ಪ್ರಸಾದ್, ೧೯೯೯, ಅಮರ ಸುಳ್ಯದ ಸ್ವಾತಂತ್ರ್ಯ ಸಮರ, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು, ದ.ಕ.

೮. ಕೆ. ಆರ್. ತೇಜಕುಮಾರ್ ಮತ್ತು ಕೆ. ಆರ್. ವಿದ್ಯಾಧರ ೧೯೯೯, ಕುಡಕಲ್ಲು ಮನೆಸ್ಥಾನ ಒಂದಿಷ್ಟು ಮಾಹಿತಿಗಳು, ಕುಡಕಲ್ಲು ಚಾರಿಟೇಬಲ್ ಟ್ರಸ್ಟ್ (ರಿ.) ಸುಳ್ಯ, ದ.ಕ.

ಮಾಹಿತಿ ನೀಡಿದವರು

೧. ಶ್ರೀ ಬಿ. ಕೆ. ಬಾಬು ಗೌಡ
ಶ್ರೀ ಬಿ. ಕೆ. ಪರಮೇಶ್ವರ ಗೌಡ
ಬಲ್ನಾಡು ಕಟ್ಟೆಮನೆ, ಪುತ್ತೂರು, ದ.ಕ.

೨. ಶ್ರೀ ಕೆ. ಆರ್. ರಾಮಣ್ಣ ಗೌಡ
ಕುಂಚಡ್ಕ ಮನೆತನ, ಆಲೆಟ್ಟಿ ಗ್ರಾಮ, ಸುಳ್ಯ, ದ.ಕ.

೩. ಶ್ರೀ ಕೆ. ವಾಸುದೇವ ಗೌಡ
ಕುಡಕಲ್ಲು ಮನೆತನ, ಆಲೆಟ್ಟಿ ಗ್ರಾಮ, ಸುಳ್ಯ, ದ.ಕ.

೪. ಶ್ರೀ ಪರಮೇಶ್ವರ ಗೌಡ
ಶ್ರೀ ಯು. ಎಂ. ಮಹಾಬಲ ಗೌಡ
ಉಳುವಾರು ಮನೆತನ, ಅರಂತೋಡು, ಸುಳ್ಯ ತಾಲೂಕು, ದ. ಕ.

೫. ಶ್ರೀ ಸುಂದರ ಗೌಡ
ದೇರಾಜೆ ಮನೆತನ, ಅರಂತೋಡು, ಸುಳ್ಯ, ದ. ಕ.

೬. ಶ್ರೀ ಡಿ. ಜಿ. ನಡ್ಕ
ಎಣ್ಮೂರು, ಸುಳ್ಯ, ದ.ಕ.

೭. ಶ್ರೀ ಎಂ. ಶಿವಣ್ಣ ನೆಲಮನೆ
ಪ್ರಾಧ್ಯಾಪಕರು, ನೆಹರೂ ಮೆಮೋರಿಯಲ್ ಕಾಲೇಜು, ಸುಳ್ಯ.

**ಸಹಕಾರ :**
ಸರೋಜ ಪಿ. ಕಣಿಯೂರು

ಛಾಯಾಚಿತ್ರಗಳು

೧. ಬಲ್ನಾಡ ಕಟ್ಟೆಮನೆಯ ಗೌಡರ ನಾಲ್ಕಂಕಣದ ಐನ್ ಮನೆಯ ಹೊರನೋಟ.
೨. ಎಂಟು ಸೂತ್ರದ ಮನೆಯಾಗಿದ್ದ, ಈಗ ಹೊಸದಾಗಿ ನಿರ್ಮಾಣಗೊಂಡಿರುವ ಉಳುವಾರು ಮನೆತನದ ನಾಲ್ಕು ಸೂತ್ರದ ಐನ್ ಮನೆ.
೩. ಕುಡೆಕಲ್ಲು ಮನೆತನದ ನಾಲ್ಕಂಕಣದ ಮನೆಯ ಆರಾಧನಾ ಸಮುಚ್ಚಯ.
೪. ಐನ್ ಮನೆಯ ಚಾವಡಿಯ ಬೋದಿಗೆ ಕಂಬ.
೫. ಮನೆಯ ಇತಿಹಾಸವನ್ನು ಹೇಳುವ 'ಶಾಸನ'ದಂತಿರುವ ಉಳುವಾರು ಐನ್ ಮನೆ ಆವರಣದಲ್ಲಿರುವ ಹಳೆಯ ಬಾವಿ.
೬. ಪಡು ಬಲ್ನಾಡು ಕಟ್ಟೆ ಮನೆಗೆ, ಗೌಡ ಸಮಾಜದ ಕಟ್ಟಳೆಗಳ ಉಸ್ತುವಾರಿಗೆ ಶೃಂಗೇರಿ ಗುರುಮಠ ಕೊಟ್ಟಿರುವ ಅಧಿಕಾರ ಮೊಹರಿನ ಕಂಚಿನ ಪದಕ ಪಟ್ಟೆ.



ಶೃಂಗೇರಿ ಗುರುಮಠ ಕೊಟ್ಟಿರುವ ಅಧಿಕಾರ
ಮೊಹರಿನ ಕಂಚಿನ ಪದಕ ಪಟ್ಟಿ.



ಐನ್ ಮನೆಯ ಚಾವಡಿಯ ಬೋದಿಗೆ ಕಂಬ (ಕಾಷ್ಠ ಶಿಲ್ಪ)



ಮನೆಯ ಇತಿಹಾಸವನ್ನು ಹೇಳುವ 'ಶಾಸನ'ದಂತಿರುವ ಉಳುವಾರು ಐನ್ ಮನೆ ಆವರಣದಲ್ಲಿರುವ ಹಳೆಯ ಬಾವಿ.

# ಕನ್ನಡದ ಕಟ್ಟಾಳು ಕೊಳಂಬೆ ಪುಟ್ಟಣ್ಣ ಗೌಡ - ನೂರರ ನೆನಪು

ಪ್ರೊ. ಎಂ. ಶಿವಣ್ಣ ನೆಲಮನೆ

ದಕ್ಷಿಣ ಕನ್ನಡ ಜಿಲ್ಲೆಯ ಗೌಡ ನಿರ್ಮಿತ ಸಾರಸ್ವತ ವಲಯದಲ್ಲಿ ಪಾಂಡಿತ್ಯ ಮತ್ತು ಪ್ರತಿಭೆ - ಈ ಎರಡು ಅಂಶಗಳಿಂದಲೂ ಎದ್ದು ಕಾಣುವ ವರ್ಚಸ್ವೀ ವ್ಯಕ್ತಿತ್ವವನ್ನು ಹೊಂದಿರುವವರಲ್ಲಿ ಕೀರ್ತಿಶೇಷ ಕೊಳಂಬೆ ಪುಟ್ಟಣ್ಣ ಗೌಡರು ಮತ್ತು ಅಂತರಾಷ್ಟ್ರೀಯ ಖ್ಯಾತಿಯ ಭಾಷಾವಿಜ್ಞಾನಿ ಡಾ. ಕೋಡಿ ಕುಶಾಲಪ್ಪ ಗೌಡರು ಪ್ರಮುಖರು. ಡಾ. ಕುಶಾಲಪ್ಪ ಗೌಡರು ಭಾಷಾ ವಿಜ್ಞಾನಿಯಾಗಿ, ಸಂಶೋಧಕ ವಿಮರ್ಶಕರಾಗಿ, ಪ್ರಬಂಧಕಾರರಾಗಿ ಹೆಸರು ಮಾಡಿದ್ದಾರೆ. ದಿವಂಗತ ಕೊಳಂಬೆಯವರು ಶಾಸ್ತ್ರ ಸಾಹಿತ್ಯ ಮತ್ತು ಸೃಜನಶೀಲ ಸಾಹಿತ್ಯ ಎರಡರಲ್ಲೂ ಸವ್ಯಸಾಚಿ ಎನಿಸಿದ್ದಾರೆ. ಮಿಗಿಲಾಗಿ ತಮ್ಮ ಸಹಜ ನುಡಿಪ್ರೇಮದಿಂದ ಕನ್ನಡದ ಕಟ್ಟಾಳು ಎನಿಸಿದ್ದಾರೆ. ಜಿಲ್ಲೆಯ ಗೌಡ ಸಾಹಿತ್ಯದ ಅಶ್ವಿನಿ ದೇವತೆಗಳೆಂದು ಹೆಸರಿಸಬಹುದಾದ ಈ ಈರ್ವರು ಮಹನೀಯರಲ್ಲಿ ವಯೋಮಾನದಿಂದ ಹಿರಿಯರಾದ ದಿವಂಗತ ಕೊಳಂಬೆ ಪುಟ್ಟಣ್ಣ ಗೌಡರು ತಮ್ಮ ಬಹುಶ್ರುತ ಪ್ರತಿಭೆ, ನಿರ್ಮಲ ವ್ಯಕ್ತಿತ್ವ ಮತ್ತು ನುಡಿಕಾಯಕಗಳಿಂದ ಪ್ರಾತಃಸ್ಮರಣೀಯರೆನಿಸಿ ಗೌಡ ಸಾಹಿತ್ಯಾಕಾಶದ ಧ್ರುವತಾರೆ ಯಾಗಿದ್ದಾರೆ.

ಪ್ರಸಕ್ತ ವರ್ಷ ದಿವಂಗತ ಕೊಳಂಬೆಯವರ ಜನ್ಮಶತಾಬ್ದಿವರ್ಷ. ೧೫-೦೭-೧೯೦೩ರಂದು ಸುಳ್ಯ ತಾಲೂಕಿನ ಚೊಕ್ಕಾಡಿಯಲ್ಲಿ ಕೊಳಂಬೆಯವರು ಹುಟ್ಟಿದರು. ಇದೇ ೧೫-೦೭-೨೦೦೩ಕ್ಕೆ ಅವರ ಹುಟ್ಟಿಗೆ ಒಂದು ಶತಮಾನ ಸಲ್ಲುವುದು; ಇದೀಗ ನೂರರ ನೆನಪು. ವಿದ್ಯಾಸೌಲಭ್ಯ ದುರ್ಲಭವಾದ ಕಾಲದಲ್ಲಿ ಕೆಳವರ್ಗದ ಅವಿದ್ಯಾವಂತ ಶೂದ್ರಕುಟುಂಬದಲ್ಲಿ ಜನಿಸಿ ವಿದ್ಯಾವಂತನಾಗಬೇಕೆಂಬ ಹಂಬಲವಿದ್ದರೂ ಬಡತನವೇ ಕಾರಣವಾಗಿ ನಾಲ್ಕನೆಯ ತರಗತಿಯವರೆಗೆ ಮಾತ್ರ ಕಲಿತು ನಿಲ್ಲಿಸಿದರು. ಹಲವಾರು ಶಾಲೆಗಳಲ್ಲಿ ಅಧ್ಯಾಪನ ಮಾಡಿ, ಮುಂದಿನ ವರ್ಷಗಳಲ್ಲಿ ಖಾಸಗಿಯಾಗಿ ಕಲಿತು ಪಂಡಿತ ತರಬೇತಿ ಪಡೆದು ಕಡೆಗೆ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ವಿದ್ವಾನ್ ಪದವಿ ಗಳಿಸಿದರು.

ಬಹುಮುಖಿ ಪ್ರತಿಭೆಯ ಕೊಳಂಬೆಯವರು ತಮ್ಮ ಕಾಲದ ಸಾಹಿತಿಗಳಾದ ಪಂಜೆ, ಉಗ್ರಾಣ, ಎಂ.ಎಸ್. ಕಾಮತ್ ಮೊದಲಾದವರಿಂದ ಸ್ಫೂರ್ತಿ ಪಡೆದು ಅನೇಕ ಕಾವ್ಯ, ಕಥೆ, ಶಿಶುಗೀತೆ, ನಾಟಕ, ಯಕ್ಷಗಾನ ಸಾಮುದ್ರಿಕ, ನುಡಿಕೋಶ ಮತ್ತು ಲೇಖನಗಳನ್ನು ರಚಿಸಿದ್ದಾರೆ. ಹಲವು ಕ್ಷೇತ್ರಗಳ

ಪರಿಣತಿ ಅವರದು. ಬರೆದುದೆಲ್ಲ ಪ್ರಕಟವಾಗಿಲ್ಲ, ಪ್ರಕಟಿತ ಎರಡು ಮುಖ್ಯ ಕಾವ್ಯಗಳು ಮತ್ತು ನುಡಿಕೋಶಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿ, ಆ ಕೃತಿಗಳಲ್ಲಿ ವ್ಯಕ್ತವಾಗುವ ನುಡಿಪ್ರೇಮದ ಬಗ್ಗೆ ಈ ಲೇಖನದಲ್ಲಿ ತನ್ನ ಲಕ್ಷ್ಯ ಹರಿಸಲಾಗಿದೆ.

ಕೊಳಂಬೆಯವರ ಪ್ರತಿಭೆಯು ಆದ್ಯಮುಖವಾಗಿರುವ ಕಾವ್ಯ ಸಾಧನೆಯು ಕಥನ ಕವನ, (ಖಂಡಕಾವ್ಯ) ಕವನ, ಮುಕ್ತಕಗಳು, ಶಿಶುಗೀತೆ, ಯಕ್ಷಗಾನ ಪ್ರಸಂಗ ಇತ್ಯಾದಿ ವೈವಿಧ್ಯಪೂರ್ಣ ರೂಪದಲ್ಲಿದೆ. ಅಚ್ಚಗನ್ನಡದಲ್ಲಿ 'ಕಾಲೂರ ಚೆಲುವೆ' (೧೯೬೩), 'ನುಡಿವಣಿಗಳು' (೧೯೭೬) ಎಂಬೆರಡು ಸಮಗ್ರ ಕೃತಿಗಳನ್ನು ರಚಿಸಿರುವುದು ಅವರ ಸಾಧನೆಯ ಮೈಲಿಗಲ್ಲು.

'ಕಾಲೂರ ಚೆಲುವೆ' ಮಲೆನಾಡಿನ ಹಳ್ಳಿಯ ಎರಡು ಬಡಕುಟುಂಬಗಳ ಜೀವಂತ ಚಿತ್ರಣದ ವಸ್ತುವುಳ್ಳದ್ದು. ಹೊಸವೂರಿನ ಬೆಳ್ಳಿ ಮತ್ತು ನೆಲ್ಲೂರ ದೊಡ್ಡ ಪ್ರೇಮಿಗಳು. ಮುಗ್ಧರಾದ ಇವರ ನಡುವೆ ಅಂಕುರಿಸಿದ ಪ್ರೇಮ ಬೆಳೆದು ಮದುವೆಯ ಏರ್ಪಾಡಾಗುತ್ತದೆ. ಆ ಸಮಯದಲ್ಲಿ ದುರ್ಮತಿ ಪಹರೆಯುವ-ಕಾಡಿನ ಗಾರ್ಡ್ ಬೋಳ ಎಂಬವನು ವೈರತ್ವ ಸಾಧನೆಗಾಗಿ ಲಂಚಗುಳಿ ಪೋಲೀಸರ ಸಹಾಯ ಪಡೆದು ದೊಡ್ಡ-ಬೆಳ್ಳಿಯರ ಅಮೃತದಂತಹ ಪ್ರೇಮವನ್ನು ಮಣ್ಣುಗೂಡಿಸುತ್ತಾನೆ. ಬೆಳ್ಳಿ ಮದುವೆ ಮನೆಯಲ್ಲಿ ಸಾಯುವುದರೊಂದಿಗೆ ಆಕೆಯ ಬಾಳು ದುರಂತವಾಗುತ್ತದೆ. ಈ ವಸ್ತುವನ್ನು ಕವಿ ಇಲ್ಲಿ ಮನಕಲಕುವಂತೆ ಅಂಶಛಂದದಲ್ಲಿ ವರ್ಣಿಸಿದ್ದಾರೆ.

'ನುಡಿವಣಿಗಳು' ಕವಿಕಂಡ ಜೀವಾನುಭವಗಳನ್ನು ಸಾವಿರದ ಮುಕ್ತಕಗಳ ಸಂಕಲನ ರೂಪದಲ್ಲಿ ಎರಕಹೊಯ್ದಿದೆ. ಪ್ರತಿ ಮುಕ್ತಕವೂ ಎರಡು ದ್ವಿಪದಿಗಳಲ್ಲಿ 'ಅಂತೆ' ಎಂಬ ಕೊನೆಪದದ ನಿರೂಪದೊಡನೆ ವಿನೀತ ಭಾವದಲ್ಲಿ, ಅಂಶಗಣ ಛಂದಸ್ಸಿನಲ್ಲಿ ರಚಿತವಾಗಿರುವ ಹಾಡುಗಬ್ಬ. ಇದಕ್ಕೆ ಮುನ್ನುಡಿ ಬರೆದಿರುವ ಕುವೆಂಪು ''(ಕೊಳಂಬೆ) ಅವರು ತಮ್ಮ ಜೀವಮಾನವನ್ನೆಲ್ಲಾ ಸೌಂದರ್ಯೋಪಾಸನ, ಚಿಂತನ, ಮಂಥನ, ಬೋಧನೆಗಳಲ್ಲಿ ಕಳೆದಿದ್ದಾರೆ. ಸೃಷ್ಟಿ ಸೌಂದರ್ಯದ ಹಲವು ಮುಖಗಳು, ಭಾವಗಳು, ಅವುಗಳ ಹಿಂದೆ ಇರುವ ಚಿತ್ ಶಕ್ತಿಯ ಸ್ವರೂಪ ಇವುಗಳನ್ನು ಕುರಿತು ಶ್ರೀಯುತರು ಮನಸ್ಸಿನಲ್ಲೇ ಮೆಲುಕು ಹಾಕಿದ್ದಾರೆ. ಬದುಕಿನ ನೂರಾರು ಜಟಿಲತೆಗಳು, ಮರ್ಮಗಳು ಇವರ ಚಿಂತನೆಗೆ ವಸ್ತುಗಳಾಗಿವೆ. ಅನಂತರ ಅವು, ಹೃದಯಂಗಮವಾದ ಮುಕ್ತಕಗಳಾಗಿ ಮೂಡಿವೆ'' ಎಂದು ರಸವಿಮರ್ಶೆ ಮಾಡಿದ್ದಾರೆ. ಪ್ರೊ. ಎಂ. ಮರಿಯಪ್ಪ ಭಟ್ಟರು ''ಇದು ಸರ್ವಜ್ಞನ ವಚನ, ಡಿ.ವಿ.ಜಿ.ಯವರ 'ಮಂಕುತಿಮ್ಮನ ಕಗ್ಗ'ವನ್ನು ನೆನಪಿಸುವಂತಿದೆ. 'ನುಡಿವಣಿ' ಎಂದರೆ ಮಾತಿನ ಮಣಿ ಅಥವಾ ಮಾತೆಂಬರತ್ನ ಎಂದರ್ಥ. ಶೀರ್ಷಿಕೆ ಔಚಿತ್ಯಪೂರ್ಣವಾಗಿದೆ'' ಎಂದು ಪ್ರಶಂಸಿಸಿದ್ದಾರೆ. ಮುಕ್ತಕಗಳ ಕುರಿತು ಸ್ವತಃ ಕವಿ ಹೇಳುವುದು

ಹನಿಯೊಂದು ನೋಟಕ್ಕೆ ನೀರು ಕಣ್ಣಿಗೆ ಕಡಲ್
ಮೈಗೊಟ್ಟ ಕನ್ನಡಂ ಪೆಂಪು ಸೊಂಪಂತೆ
ಕನ್ನಡಿಗರು ಹಾಡೆ ಸವಿ ಪುರುಳಂ ನೋಡೆ
ಕೈಗೀವೆನಂತೆಯಾ ತಲೆವಾಗಿ ನಿಂತೆ (ನುಡಿವಣಿಗಳು ೫-೧೦೦)

ಈ ಎರಡು ಕಾವ್ಯಗಳ ಜೊತೆಗೆ ಮಕ್ಕಳ ಮನಸ್ಸನ್ನು ಆಕರ್ಷಿಸುವಂತಹ 'ಹೂವೀಡು' ಮತ್ತು 'ಮಾತಿಲ್ಲಾ ಮಾತಿಲ್ಲಾ' ಎಂಬ ಎರಡು ಶಿಶುಗೀತೆಗಳು ಪ್ರಕಟವಾಗಿವೆ.

ಕನ್ನಡ ಭಾಷೆಯ ಮೇಲಣ ಅಪಾರ ಅಭಿಮಾನಕ್ಕೆ ಸಾಕ್ಷಿಯಾಗಿ, ಕೊಳಂಬೆಯವರ ಪಾಂಡಿತ್ಯದ ಹೆಗ್ಗುರುತಾಗಿ ಇನ್ನೊಂದು ಮಹತ್ವಪೂರ್ಣ ಕೃತಿ 'ಅಚ್ಚಗನ್ನಡ ನುಡಿಕೋಶ' ಕೊಳಂಬೆಯವರ ಮರಣಾನಂತರ ೧೯೯೪ರಲ್ಲಿ ತೇಜಸ್ವಿಯವರ ಪುಸ್ತಕ ಪ್ರಕಾಶನದ ಮೂಲಕ ತುಂಬಾ ಸುಂದರವಾಗಿ ಪ್ರಕಟಗೊಂಡಿದೆ. ಈ ಕೋಶ ಅಚ್ಚಗನ್ನಡ ಪದಗಳಿಗೆ ಹೊಸಗನ್ನಡದಲ್ಲಿ ವಿವಿಧ ಅರ್ಥಗಳನ್ನು ನೀಡುತ್ತದೆ. ಇದರಲ್ಲಿ ಹಳೆಗನ್ನಡ ಕಾವ್ಯ, ಜನಪದ ಕಾವ್ಯಗಳಲ್ಲಿ ಬಳಸಲಾಗಿರುವ ಹಾಗೂ 'ಕಾಲೂರ ಚೆಲುವೆ'ಯಂಥ ಕೃತಿಗಳಲ್ಲಿ ಬಳಕೆಯಾಗಿರುವ ಅಚ್ಚಗನ್ನಡ ಪದಗಳಿಗೆ ವಿವಿಧ ಅರ್ಥಗಳನ್ನು ನೀಡುವ ಪ್ರಯತ್ನ ಮಾಡಲಾಗಿದೆ. ಕಿಟ್ಟೆಲ್ ಕೋಶದ ಕೆಲವು ಪದಗಳಿಗೆ ರೂಢಿಯಲ್ಲಿರುವ ಬೇರೆ ಅರ್ಥ ಕೊಡಲಾಗಿದೆ. (ಉದಾ: ಅಗ್ಗಿಗ=ತಂಟೆಗಾರ, ಭೇದ ಮಾಡುವವನು; ಅಚ್ಚಿ=ದೋಸೆ; ಅಡಲ್=ಒಂದು ಬಗೆಯ ಮೀನು; ಅಣ್ಣುಮಟ್ಟು=ಸತ್ತಮನೆಯ ಕೊಳೆ, ಸೂತಕ ಇತ್ಯಾದಿ) ಇದರ ಸಂಗ್ರಹದಲ್ಲಿ ತಮ್ಮ ಕಾವ್ಯಗಳ ಅಚ್ಚಗನ್ನಡದ ಮಾಹೇಶ್ವರ ನಿಷ್ಠೆಯ ಕಟ್ಟನ್ನು ತುಸು ಸಡಲಿಸಿದ್ದಾರೆ. ಈ ನಿಘಂಟಿಗೆ 'ನುಡಿ ಮಣಿಹ' ಬರೆದ ಪ್ರೋ. ದೇ. ಜ.ಗೌ. ಅವರು ''ಗೌಡರಂಥ ಕನ್ನಡದ ವ್ರತಧಾರಿಗಳೂ, ವಿದ್ವತ್ ಕವಿಗಳೂ ಸಿದ್ಧಗೊಳಿಸಿರುವ ಈ ನುಡಿಕೋಶ 'ಬೇಳ್ವರ ಕೈವೊಕ್ಕ ನಿಧಿ'ಯೇ ಸರಿ; ಕವಿ, ವಿದ್ವಾಂಸ, ವಿದ್ಯಾರ್ಥಿಗಳ ತವನಿಧಿ ಎಂಬುದರಲ್ಲಿ ಸಂಶಯವಿಲ್ಲ... ಈ ಅಚ್ಚಗನ್ನಡ ನುಡಿಕೋಶ ಕನ್ನಡದ ಗೌರವವನ್ನು ಎತ್ತಿ ಹಿಡಿಯುತ್ತದೆಂಬುದರಲ್ಲಿ, ಇದನ್ನು ಪಡೆದವರ ಶಬ್ದ ದಾರಿದ್ರ್ಯವನ್ನು ಹೋಗಲಾಡಿಸುತ್ತದೆಂಬುದರಲ್ಲಿ ನನಗೆ ಅನುಮಾನವಿಲ್ಲ... ಇಂಥ ಭಾಷಾ ಸೇವೆಯನ್ನು ಗುರುತಿಸಬೇಕಾದ್ದು ಕನ್ನಡಿಗರ ಮತ್ತು ಕರ್ನಾಟಕ ಸರ್ಕಾರದ ಕರ್ತವ್ಯ'' ಎಂದು ಸಾರಿದ್ದಾರೆ. ಇಂಥದೊಂದು ನುಡಿಕೋಶದ ರಚನೆ ಸಂಸ್ಥೆಗಳು, ವಿಶ್ವವಿದ್ಯಾನಿಲಯಗಳು ಕೂಡಿ ಮಾಡಬೇಕಾದಂಥ ಬೃಹತ್ ಕಾರ್ಯ. ಕನ್ನಡ ಭಾಷೆಗೆ ಕೊಳಂಬೆಯವರ ವಿದ್ವತ್‌ಪೂರ್ಣ ಕೊಡುಗೆ. ಗೌಡ ಸಮುದಾಯದ ಹಿರಿಯ ಕವಿ-ವಿಮರ್ಶಕರಾದ ವಿದ್ವಾನ್ ತಮ್ಮಣ್ಣಗೌಡ ಮುಡೂರುರವರು ಕೊಳಂಬೆಯವರ ಅಚ್ಚಗನ್ನಡದ ಅಪೂರ್ವ ಕೃತಿಗಳ ಸಮೀಕ್ಷೆಯನ್ನು 'ಸಪ್ತಸ್ವರ' ಹೊತ್ತಿಗೆಯಲ್ಲಿ ಈ ಮುಂದಿನಂತೆ ಸಂಕ್ಷೇಪಿಸುತ್ತಾರೆ.

''ನುಡಿಮಣಿಗಳು- ಅಚ್ಚಗನ್ನಡ ನುಡಿಕೋಶಗಳಲ್ಲಿ ಕೊಳಂಬೆಯವರ ಚಿಂತನ ಪಾಂಡಿತ್ಯ ಶೋಧನೆಗಳು ಅನುಕ್ರಮವಾಗಿ ಎತ್ತಿ ತೋರುತ್ತಿದ್ದರೆ ಕವಿಯ ಸ್ವೋಪಜ್ಞತೆ ಕಾಲೂರ ಚೆಲುವೆಯಲ್ಲಿದೆ. ಅಚ್ಚಗನ್ನಡ ಹಿಮಮಣಿಗಳ ಅವಗುಂಠನವಿದ್ದೂ ಮಿಂಚುತಿರುಗುವ ಬೆಳ್ದಿಂಗಳ ಕಾಲೂರ ಚೆಲುವೆ. ಬೆಳ್ಳಿಯನ್ನು ಕಾಲೂರ ಚೆಲುವೆಯಾಗಿ ಕಂಡರಿಸಿದ ಕಾವ್ಯ ಪ್ರತಿಭೆಯ ಕವಿಯ ಚೊಚ್ಚಲ ಕೃತಿ''. (ಸಪ್ತಸ್ವರ-ಪು.೧೧).

ಜೀವನ ಪೂರ್ತಿ ಕನ್ನಡದ ಕಾಳಜಿಯಿಂದ ಕೂಡಿದ್ದ ಕವಿ ಕೊಳಂಬೆ ತಮ್ಮೆಲ್ಲ ಕಾವ್ಯಗಳಲ್ಲೂ ಕನ್ನಡ ಕುರಿತು ತಮ್ಮ ನಿಷ್ಠೆಯನ್ನು ಪ್ರಕಟಿಸಿದ್ದಾರೆ; ಕನ್ನಡದ ಕಟ್ಟಾಳುವಾಗಿದ್ದಾರೆ.

ತನ್ನಳವಿನಿಂ ನಡೆವ
ಕನ್ನುಡಿಯ ನುಡಿವೆಣ್ಣೆ
ಪೊನ್ನಿರ್ಕೆ ಪೆರರೊಡಮೆ
ಚೆನ್ನಲ್ತು ಕಳಗೆ
ಕನ್ನುಡಿಯ ಪೂವೀಡು
ಹೆಣೆದು ಕೊಡಲೆ ಕಾಣ್ಕೆ
ನಿನ್ನವಂ ಕೈಮುಗಿವೆ
ಕೊನರ್ಗೆನ್ನ ಪೊಣ್ಕೆ      || ೫ ||      (ಕಾಲೂರ ಚೆಲುವೆ ಪುಟ, ೨೩)

ಎಂಬ ಆಶಯದಿಂದ, ಅವರು ಕನ್ನಡದ ಮೇಲಿನ ಒಲುಮೆಯಿಂದ, ಪ್ರತಿಜ್ಞೆ ಮಾಡಿ ಅಚ್ಚಗನ್ನಡದಲ್ಲೇ ಕಾವ್ಯ ರಚಿಸಿದ್ದಾರೆ. ಈ ಹಿಂದೆ ಈ ಸಂಪ್ರದಾಯದಲ್ಲಿ ಬರೆದ ಆಂಡಯ್ಯ, ಮುಳಿಯ ತಿಮ್ಮಪ್ಪಯ್ಯ ಇಬ್ಬರೂ ಸಾಕಷ್ಟು ತದ್ಭವಪದಗಳನ್ನು ಬಳಸಿಕೊಂಡಿದ್ದಾರೆ. ಆಂಡಯ್ಯನದು ವರ್ಣಛಂದದ ಚಂಪೂರೂಪ. ಆಂಡಯ್ಯ ಮತ್ತು ಮುಳಿಯದವರಿಬ್ಬರೂ ತಮ್ಮ ಕೃತಿಗೆ ಪೌರಾಣಿಕ ವಸ್ತುವನ್ನು ಆರಿಸಿಕೊಂಡಿದ್ದಾರೆ. ಇದೇ ಪರಂಪರೆಯ ಪುಟ್ಟಣ್ಣ ಗೌಡರು ತದ್ಭವಗಳನ್ನು ವರ್ಜಿಸಿದ್ದಾರೆ; ಜನಪದ ವಸ್ತು, ಅಂಶಗಣಬಂಧ ಬಳಸಿದ್ದಾರೆ; ''ವಸ್ತು ಭಾಷೆ - ಛಂದಗಳ ಪ್ರಯೋಗ ದೃಷ್ಟಿಯಿಂದ ನಿಜವಾದ ಅರ್ಥದಲ್ಲಿ ಕೋಳಂಬೆಯವರು ಅಚ್ಚಗನ್ನಡದ ಪ್ರಥಮ ದೇಸಿಕವಿ ಎಂಬ ಹಿರಿಮೆಗೆ ಪಾತ್ರರಾಗುತ್ತಾರೆ'' ಎಂದು ಸೇಡಿಯಾಪು ಪ್ರತಿಕ್ರಿಯಿಸಿದ್ದಾರೆ.

ಕೋಳಂಬೆಯವರ ಕನ್ನಡ ಪರವಾದ ಮತ್ತಷ್ಟು ದೀಕ್ಷಾವಾಕ್ಯಗಳನ್ನು, ಅದಕ್ಕೆ ಕಾರಣ ಸಮರ್ಥನೆಯನ್ನು ಕವಿ ಮಾತಿನಲ್ಲೇ ಅರಿಯಬಹುದು. ತಾನು ಅಚ್ಚಗನ್ನಡದಲ್ಲೇ ಬರೆಯುವುದೇಕೆ ಎನ್ನುವುದಕ್ಕೆ 'ನುಡಿವಣಿ'ಯ ಮುಕ್ತಪೊಂದರಲ್ಲಿ ಸುಂದರವಾಗಿ ಉತ್ತರಿಸಿದ್ದಾರೆ:

ಕನ್ನಡದಿಂದಲೆ ಬರೆವ ಹುಚ್ಚೇಕೆನೆ
ಸಕ್ಕದದಾ ಬಿಣ್ಪು ಬಿಗುರೀವುದಂತೆ
ತುರುವೊಂದು ಕನ್ನಡಂ ಹಿಂಡೆಮ್ಮೆ ಸಕ್ಕದಂ
ಕರೆದು ಪಾಲ್ಸೆರಸೆ ಲೇಸೀಯುದೆಂಬಂತೆ      (ನುಡಿವಣಿ -೩-೨೫)

ಹಿರಿಯ ಕನ್ನಡ ಕವಿಗಳಾರೂ ಅಚ್ಚಗನ್ನಡದಲ್ಲಿ ಬರೆದಿಲ್ಲದಿರುವುದಕ್ಕೆ ಕಾರಣವನ್ನು ಹೀಗೆ ಕಲ್ಪಿಸುತ್ತಾರೆ.:

ತಿಳಿವಿನಿಂ ಹೊಂಬೆಟ್ಟದಂತಿರ್ದ ಹಿರಿಯರೇಂ
ಕನ್ನುಡಿಯಿಂದಲೇಂ ಬರೆದಿಲ್ಲವಂತೆ?
ಕನ್ನಡ ನಾಡೊಂದುಗೂಡೆ ಮೇಣೊಲ್ಮೆಯಿಂ
ಕಿರುತಮ್ಮ ಬರೆವ ಪಾಲೆನೆ ಬಿಟ್ಟರಂತೆ      (ನುಡಿಮಣಿ-೪ ೫)

ಎಂದರೆ ಕನ್ನಡ ನಾಡು ಒಂದಾದ ಮೇಲೆ ಬರೆಯುವುದಕ್ಕಾಗಿ ಮುಂದೆ ಬರಲಿರುವ ಕಿರಿಯ ತಮ್ಮನಿಗೆ ಇದೊಂದು ಪಾಲಿರಲಿ ಎಂದು ಬಿಟ್ಟು ಹೋದರಂತೆ.

ಕನ್ನಡ ಭಾಷೆಯ ಶಬ್ದಸಂಪತ್ತಿನ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುವ ನುಡಿವಣಿಕಾರ, ಕನ್ನಡವು ಬೇರಾವ ಭಾಷೆಗೂ ಕಡಿಮೆಯಲ್ಲ ಎಂಬ ಪ್ರತ್ಯಯ ತಾಳುತ್ತಾರೆ;

ಕನ್ನಡಂ ನೆಲವಾಗಿ ಕನ್ನಡಂ ಬಾನಾಗಿ
ಕನ್ನಡಂ ಬೆಳಕು ಗಾಳಿಗಳೆನ್ನುವಂತೆ
ಕನ್ನಡಂ ಪಾಲ್ಗೊಟ್ಟ ಬಾಳಲ್ಲೆ ಬೆಳಕೆಂಬ
ಕನ್ನಡಿಗನ ಪೆಸರೇ ನನ್ನಿಯಂತೆ. (ನುಡಿವಣಿ ೨.೨)

ಈ ಅಚ್ಚಗನ್ನಡ ವ್ಯಾಮೋಹದಿಂದಾಗಿಯೇ ಅವರು ಅಚ್ಚಗನ್ನಡ ಕಾವ್ಯರಚನೆಯಿಂದಷ್ಟೇ ತೃಪ್ತರಾಗದೆ 'ಅಚ್ಚಗನ್ನಡ ನುಡಿಕೋಶ'ದ ಸಾಧನೆಗೈದಿದ್ದಾರೆ. ಅದರ ಮಹತ್ವ ಕನ್ನಡಿಗರಿಗಿನ್ನೂ ಸರಿಯಾಗಿ ತಿಳಿಯಬೇಕಾಗಿದೆ.

ಕನ್ನಡದ ಆರಾಧಕರಾದ ಕೋಳಂಬೆ ಬರೆದ 'ಕನ್ನಡದ ಪೆಂಪು' ಎಂಬ ಲೇಖನದಲ್ಲಿ ಕನ್ನಡದ ಹಿರಿಮೆಯನ್ನು ಗುರುತಿಸಿ ಆ ಭಾಷೆಯ ಸರಳತೆ ಮತ್ತು ಸ್ವತಂತ್ರತೆಯ ಬಗ್ಗೆ ವಿವರಣೆ ನೀಡಿದ್ದಾರೆ. ಸಂಸ್ಕೃತದ ಸಂಬಂಧವೇ ಇಲ್ಲದೆ ಕನ್ನಡದಲ್ಲಿ ಹತ್ತರಿಂದ ಹನ್ನೆರಡು ಸಾವಿರ ನಾಮಪದ, ವಿಶೇಷಣಗಳ ಗುಂಪು ಇದೆ ಮತ್ತು ಆರುನೂರಕ್ಕೂ ಮಿಕ್ಕಿ ಕ್ರಿಯಾಪದಗಳಿವೆ ಎಂದು ಉದಾಹರಿಸಿದ್ದಾರೆ. ವ್ಯಾಕರಣ ಭಾಷೆಗೆ ಉಪಾಧೇಯ ಎಂದು ಹೇಳಿ ಸಾಹಿತ್ಯ ಪರಿಷತ್ತಿನ 'ರತ್ನಕೋಶ'ದ ಅರ್ಥವಿವರಣೆಯಲ್ಲಿ ಶಕಟರೇಫ, ಜಿಟಾಕ್ಷರಗಳಿಗೆ ಹೆಚ್ಚಿನ ಗಮನ ನೀಡಿಲ್ಲ ಎಂದು ಆಕ್ಷೇಪಿಸಿದ್ದಾರೆ. ಅಚ್ಚಗನ್ನಡದ ಅಮೂಲ್ಯಪದಗಳು ಬಳಕೆಯಿಂದ ಹೊರಗುಳಿದು ಕನ್ನಡ ಭಾಷೆಯಿಂದ ಮರೆಯಾಗಿ ಹೋಗಬಾರದು ಎಂಬ ಕಳಕಳಿಯನ್ನು ಸದಾ ವ್ಯಕ್ತಪಡಿಸುತ್ತಿದ್ದರು.

ತಮ್ಮ ಅಚ್ಚಗನ್ನಡದ ಅಪೂರ್ವ ಕೃತಿಗಳಿಗೆ ಬಹಳ ಕಾಲ ಪ್ರಕಾಶಕರು ಮುಂಬರದಾದಾಗ ಭಾಷಾ ಋಣಕ್ಕಾಗಿ ತಮ್ಮ ಸೇವಾ ನಿವೃತ್ತಿಯ ಹಣವನ್ನೆಲ್ಲ ವಿನಿಯೋಗಿಸಿ ಅದಕ್ಕೆ ಬಿಡುಗಡೆಯ ದಾರಿ ತೋರಿಸಿದ್ದಾರೆ. ಅಲ್ಲದೆ ಸಹಕಾರಿ ತತ್ತ್ವದಲ್ಲಿ ಕಟ್ಟಲ್ಪಟ್ಟ ಪಂಜದ 'ಪ್ರತಿಮಾ ಪ್ರಕಾಶನ'ದ ಅಧ್ಯಕ್ಷರಾಗಿ ವಿವಿಧ ನವೋದಿತರ ಕಥಾಸಂಕಲನ 'ಕಣ್ ಕನಸು ತೆರೆದಾಗ'(೧೯೬೪), ಕವನ ಸಂಕಲನ 'ನವದಿಗಂತ' (೧೯೬೬)ವನ್ನು ಪ್ರಕಟಿಸಿ ಸಂಘಟನಾಕಾರ ನೆಲೆಯಲ್ಲಿ ಕನ್ನಡದ ಅಭಿವೃದ್ಧಿಗಾಗಿ, ಪುಸ್ತಕ ಸಂಸ್ಕೃತಿಗಾಗಿ ಶ್ರಮಿಸಿದ್ದಾರೆ.

ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ವಿಶೇಷ ಕೊಡುಗೆ ನೀಡಿದ ಈ 'ಕನ್ನಡದ ಕಣ್ಣಾಯ್ತ' (ಗುರು) ಈ ವರೆಗೂ ಎಲೆಮರೆಯ ಕಾಯಿಯಾಗಿ ಉಳಿದಿದ್ದಾರೆ. ಅವರು ಸಾಕಷ್ಟು ಸಾಹಿತ್ಯ ರಚನೆ ಮಾಡಿದ್ದರೂ ಅವು ಕನ್ನಡ ಜನತೆಯನ್ನು ಮುಟ್ಟಲಿಲ್ಲ. ವಿದ್ವತ್‌ವಲಯದಲ್ಲಿ ಇಂಥ ಅಚ್ಚಗನ್ನಡ ಕೃತಿಗಳಿವೆ ಎಂದು ತಿಳಿಯದ ಎಷ್ಟೋ ಮಂದಿ ವಿದ್ವಾಂಸರಿದ್ದಾರೆ. ಒಂದು ತೆರನಾದ ನಿರ್ಲಕ್ಷ್ಯಕ್ಕೆ ಈ ಕವಿ

ಸಿಲುಕಿಕೊಂಡಿದ್ದಾರೆ. ಕನ್ನಡದ ರಕ್ಷಣೆಯ ಜವಾಬ್ದಾರಿ ವಹಿಸಿರುವ ಕನ್ನಡ ಸಾಹಿತ್ಯ ಪರಿಷತ್, ಸಾಹಿತ್ಯ ಅಕಾಡೆಮಿ, ಕರ್ನಾಟಕ ಸರ್ಕಾರಗಳು ಇವರ ಕೃತಿಗಳ ಸ್ವತ್ತು, ಮಹತ್ತುಗಳನ್ನು ಗುರುತಿಸಿಲ್ಲ. ಯಾವುದೇ ಸಾಹಿತ್ಯ ಸಮ್ಮೇಳನದ ವೇದಿಕೆಗಳು ಇವರಿಗೆ ಸ್ಥಾನ ಕೊಡಲಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನ 'ಕನ್ನಡ ನುಡಿ ದೀಪಕರು' ಸಂಪುಟದಲ್ಲಿ ಇವರನ್ನು ಸೇರಿಸಿಲ್ಲ. ಸುಧಾ ಪತ್ರಿಕೆಯು 'ಸಮಕ್ಷಮ' ಅಂಕಣದಲ್ಲಿ ಇವರ ಪರಿಚಯ ಮಾಡಲಿಲ್ಲ. ಯಾವುದೇ ಶಾಲಾ, ಕಾಲೇಜು, ವಿಶ್ವ ವಿದ್ಯಾನಿಲಯಗಳ ಪಠ್ಯ ಸಮಿತಿಯವರು ಇವರ ಸಾಹಿತ್ಯವನ್ನು ಪಠ್ಯವಾಗಿರಿಸಿ ಪ್ರಚುರಪಡಿಸಲಿಲ್ಲ. ಈಗ, ಈ ದಿವ್ಯ ನಿರ್ಲಕ್ಷ್ಯದ ಹಿಂದಿರುವ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ವೈಯಕ್ತಿಕ ಕಾರಣಗಳನ್ನು ಚಾರಿತ್ರಿಕ ಹಿನ್ನಲೆಯಿಂದ ಪರಿಶೀಲಿಸಬಹುದಾಗಿದೆ:

ಅಕ್ಷರ ಸಂಸ್ಕೃತಿಗೆ ಎರವಾದ, ಹಿಂದುಳಿದ ಗೌಡ ಜನಾಂಗದಲ್ಲಿ ಹುಟ್ಟಿದ್ದು ಮತ್ತು ಸಾರಸ್ವತ ಮುಂಚೂಣಿಯಲ್ಲಿ ಆ ವರ್ಗದ ಮೊದಲಿಗರಾಗಿ ನಿಂತಿದ್ದು ಪ್ರಾಯಶಃ ಅವರ ಪ್ರತಿಭಾ ಪ್ರಕಾಶನಕ್ಕೆ ಗ್ರಹಣ ಹಿಡಿಯಲು ಬಹುಮಟ್ಟಿಗೆ ಕಾರಣವಾಗಿರಬಹುದೇನೋ! ಸಮಕಾಲೀನರಾದ ಕುವೆಂಪು ಮಾತ್ರ ಆ ವರ್ಗದಿಂದ ಬಂದರೂ ಸಾಂಸ್ಕೃತಿಕ ಪುರೋಹಿತಶಾಯಿಯ ವಿರುದ್ಧ ಯಶಸ್ಸು ಪಡೆದರು. ಇದಕ್ಕೆ ಅವರಿಗೆ ರಾಮಕೃಷ್ಣಾಶ್ರಮ ಪರಿವೇಶ, ವಿಶ್ವವಿದ್ಯಾನಿಲಯದ ಅಧಿಕಾರ ಬಲ ಬೆಂಬಲಕ್ಕಿದ್ದುವು ಎಂಬುದನ್ನು ಮರೆಯುವಂತಿಲ್ಲ. ಕೊಳಂಬೆಯವರು ಆರ್ಥಿಕವಾಗಿ ಬಡ ಶಾಲಾ ಮಾಸ್ತರರಾಗಿ ಶಾಲೆಯಿಂದ ಶಾಲೆಗೆ, ಊರಿಂದೂರಿಗೆ ತಿರುಗುತ್ತಿದ್ದರು. ಮುದ್ದಣನಿಗೆ ಸುಬೋಧ ರಾಮರಾಯರು, ಮುಳಿಯದವರಿಗೆ ಸುಶಿಕ್ಷಿತ ಬ್ರಾಹ್ಮಣವರ್ಗದ ನೆರವು ಸಿಕ್ಕಂತೆ ಇವರಿಗೆ ಯಾವ ಸಾರಸ್ವತ ಪಿತೃವೂ ಪ್ರೋತ್ಸಾಹನೆಗೆ ಇಲ್ಲವಾದುದು ಅವಜ್ಞತೆಗೆ ಕಾರಣವಾಯಿತು. ಆದರೆ, ಯಕ್ಷ ಕಲೆಯ ಅರ್ಥಧಾರಿಕೆ ಮತ್ತು ಪ್ರಸಂಗ ರಚನೆಗಳೆರಡರಲ್ಲೂ ಅವರು ಜನಪ್ರಿಯ ಸವ್ಯಸಾಚಿಯಾಗಿದ್ದರು.

ಕೊಳಂಬೆಯವರು ಸಾಕಷ್ಟು ಸಾಹಿತ್ಯರಚನೆ ಮಾಡಿದ್ದರೂ ಅವು ಜನರನ್ನು ತಲುಪದಿರಲು ಅವರು ಬಳಸಿದ ಭಾಷೆ-ಮಾರ್ಗಗಳೂ ಬಹಳಷ್ಟು ಕಾರಣವಾಗಿವೆ. ಅವರು ಹಟವಿಡಿದು ಬಳಸಿದ ಶುದ್ಧ ಅಚ್ಚಗನ್ನಡ ಕನ್ನಡಸಾಹಿತ್ಯ ಚರಿತ್ರೆಯ ಯಾವ ಕಾಲದಲ್ಲೂ ಓದುಗನ ಕಾವ್ಯ ಭಾಷೆಯಾಗಿರದೆ, ಪ್ರಚಲಿತ ಸಾಹಿತ್ಯ ಸಂದರ್ಭದಲ್ಲಿ ಪಂಥವೊಂದರ ಪರಂಪರೆಯ ನಿರ್ಮಾಣಕ್ಕೆ ನೆರವಾಗದೆ ಕೇವಲ ವಿರಳ ಪ್ರಯೋಗವಾಗುಳಿಯಿತು. ಅವರ ಶಯ್ಯೆಯೂ ವಿದ್ವತ್ಪೂರ್ಣ 'ನಾರಿಕೇಳಪಾಕ'ವಾಯಿತು. ಅವರ ಸಾಹಿತ್ಯವನ್ನು ವೇಗವಾಗಿ ಓದುವಂತಿರಲಿಲ್ಲ, ಸುಲಭವಾಗಿ ಅರ್ಥೈಸಿಕೊಳ್ಳುವಂತಿರಲಿಲ್ಲ. ಓದಿದ ವಿದ್ವಾಂಸರು ಮಾತ್ರ ಸಾಹಿತ್ಯದ ಚೌಕಟ್ಟು ಹಳೆಯದಾದರೂ ಅದನ್ನು ಪ್ರತಿಕ್ರಿಯಿಸುವ ಮನಸ್ಸು ಆಧುನಿಕವಾದುದು -ಎಂದು ಶ್ಲಾಘಿಸಿದ್ದಾರೆ. ಹೆಚ್ಚು ಮಂದಿ ಓದಲಿಲ್ಲ. ನಮ್ಮ ಅಚ್ಚ ಗನ್ನಡದ ಶಬ್ದದಾರಿದ್ರ್ಯ, ಅವರ ವಿಲಕ್ಷಣ ಅತಿನವ್ಯತೆಯಿಂದಾಗಿ ಅವರು ಸತ್ತ್ವ ಸ್ವತ್ತ್ವಗಳಿದ್ದೂ ಒಂದು ಸಾರಸ್ವತ ದ್ವೀಪವಾಗಿ ಬಿಟ್ಟರು. ತಮ್ಮ ಕೃತಿಗಳ ಗಟ್ಟಿತನವನ್ನು ತಿಳಿದಿದ್ದ ಅವರು ಬದುಕಿದ್ದಾಗ ಹೇಳುತ್ತಿದ್ದ, ''ಒಂದಲ್ಲ ಒಂದು ದಿನ ಈ ನನ್ನ ಕೃತಿಗಳ ಯೋಗ್ಯತೆಯನ್ನು ಕನ್ನಡಿಗರು ತಿಳಿದುಕೊಳ್ಳುತ್ತಾರೆ'' ಎಂಬ ಉದ್ಗಾರ ನೆನಪಾಗುತ್ತದೆ. 'ಆ ಒಂದಲ್ಲ ಒಂದು ದಿನ ಎಂದು

ಬಂದೀತೋ!' ಎಂದು ಉತ್ಕಂಠಿತತೆಯಿಂದ ಪ್ರತಿಕ್ರಿಯಿಸುತ್ತಾರೆ ಕೊಳಂಬೆಯವರ ಶಿಷ್ಯೆ ಬಿ. ಜಯಮ್ಮ ಚೆಟ್ಟಿಮಾಡರವರು. ಈ ಕುರಿತು ಸಾಹಿತಿ ವಿದ್ವಾನ್ ಟಿ.ಜಿ. ಮುಡೂರರ ಸಲಹೆ ''ವಿಶ್ವಕನ್ನಡ ಸಮ್ಮೇಳನದ ಹೊತ್ತು ಆಯ್ದು ಕೆಲವು ಅಮೂಲ್ಯ ಕೃತಿಗಳನ್ನು ಅಗ್ಗದ ಬೆಲೆಗೆ ಹೊರತಂದಂತೆ ಅಚ್ಚಗನ್ನಡದ ಈ ಅಪೂರ್ವ ಖಂಡಕಾವ್ಯ 'ಕಾಲೂರ ಚೆಲುವೆ'ಯನ್ನು ಇನ್ನಾದರೂ ಹೊರತಂದು ಪ್ರಚುರಪಡಿಸಬೇಕು. ಜತೆಗೆ ಕಾಲೂರ ಚೆಲುವೆಗೆ ಕೈಗನ್ನಡಿಯಾಗಿ ಅದರ ಪ್ರತಿಪದ್ಯದ ಹೊಸಗನ್ನಡ ಭಾವಾನುವಾದವನ್ನು ಮೂಲ ಪದ್ಯದೊಂದಿಗೆ ಒದಗಿಸಿ ಓದುಗರಿಗೆ ಅದರ ಸೊಬಗನ್ನು ಮನಗಾಣಿಸಬೇಕು. ಪದವಿ, ಸ್ನಾತಕೋತ್ತರ ಪದವಿಗಳಿಗೆ ಇದನ್ನು ಪಠ್ಯವನ್ನಾಗಿಸುವಲ್ಲಿ ಹೆಜ್ಜೆ ಇಡಬೇಕು. ಸಂಶೋಧನಾ ವಿದ್ಯಾರ್ಥಿಗಳು ತಮ್ಮ ಪಿ.ಎಚ್.ಡಿ. ಮಹಾ ಪ್ರಬಂಧಗಳಿಗೆ ಕೊಳಂಬೆಯವರ ಅಚ್ಚಗನ್ನಡ ಕೃತಿಗಳನ್ನು ಕೈಗೆತ್ತಿಕೊಳ್ಳಬೇಕು. ಇವು ಕೊಳಂಬೆಯವರ ಶ್ರಮ ಸಾಧನೆಗಳಿಗೆ ನಾಡುನುಡಿಗಳು ನೀಡುವ ಅಪೂರ್ವ ಕೊಡುಗೆಗಳಾಗಬಹುದು.'' (ಸಪ್ತಸ್ವರ ಪು. ೧೧).

ವ್ಯಕ್ತಿಶಃ ಶ್ವೇತಾಂಬರಿಯೂ, ಶಾಖಾಹಾರಿಯೂ, ಸರಳ ಜೀವಿಯೂ, ಶುದ್ಧಾಂತಃಕರಣರೂ ಆಗಿದ್ದ ಅವರು ಕವಿ ಸಹಜವಾದ ಭಾವನಾ ಪರವಶತೆಯಿಂದ ಅಂತರ್ಮುಖಿಗಳಾಗಿರುತ್ತಿದ್ದರು. ಪ್ರಚಾರ ಗೌರವಗಳನ್ನು ಹಾರೈಸಿದವರಲ್ಲ; ತಮ್ಮನ್ನು ತಾವೇ ಪ್ರಕಟಪಡಿಸಿಕೊಳ್ಳುವ ಮನೋಧರ್ಮದವರಲ್ಲ; ಡಿ.ವಿ.ಜಿ.ಯವರ 'ವನಸುಮ'ದ ಆದರ್ಶಕ್ಕೆ ಒಲಿದಿದ್ದವರು. ಅವರಿದ್ದ ಕಾಲದಲ್ಲಿ ಸಾಹಿತ್ಯ ಸಮ್ಮೇಳನಗಳು ಇಂದಿನ ಭರಾಟೆಯಲ್ಲಿ ಜರುಗುತ್ತಿರಲಿಲ್ಲ. ಸಾಂಸ್ಥಿಕವಾಗಿಯೂ ಯಾರೂ ಅವರನ್ನು ಪ್ರೋತ್ಸಾಹಿಸುವ ಪರಿಸ್ಥಿತಿ ಆಗ ಇರಲಿಲ್ಲವಾದ್ದರಿಂದ ಸಾಹಿತ್ಯಕ್ಷೇತ್ರದಲ್ಲಿ ಅವರದು ಕ್ಷೀಣದನಿಯಾಯಿತು. ಒಂದೊಮ್ಮೆ ಈ ಕನ್ನಡದ ಪಂಜು ಶಾಲಾ ಮಾಸ್ತರನಾಗಿ ಹಳ್ಳಿಗಳಲ್ಲೇ ಉಳಿಯದೆ ಉನ್ನತ ಶಿಕ್ಷಣದೊಂದಿಗೆ ವಿಶ್ವವಿದ್ಯಾನಿಲಯದ ಆವರಣದಲ್ಲಿದ್ದರೆ ಮತ್ತಷ್ಟು ಪ್ರಜ್ವಲಿಸಿ, ಕನ್ನಡ ಸಾಹಿತ್ಯಕ್ಷೇತ್ರ ಒಬ್ಬ ಉತ್ತಮ ಭಾಷಾವಿಜ್ಞಾನಿಯನ್ನೋ ಇಲ್ಲವೇ ನಿಘಂಟುಕಾರನನ್ನೋ ಪಡೆಯಬಹುದಾಗಿತ್ತು ಎಂದು ಹೇಳಬಹುದು.

ಈ ನೆಲದೊಡಲ ಸಿರಿ ಕೊಳಂಬೆಯವರ ಕನ್ನಡ ಪ್ರೇಮದ ಬಗೆಗೆ ಈಗ ನಾನು ಹೇಳಿದ್ದು 'ಒಂದು ನೋಟದ ಒಂದು ಹನಿ ಮಾತ್ರ! ನೂರು ನೋಟದ ಕಡಲು' ಗ್ರಂಥಾಲಯಗಳ ಕಪಾಟುಗಳಲ್ಲಿ ಅಡಗಿ ಕುಳಿತಿದೆ. ಗೌಡ ಸಮುದಾಯ ಸಂಘಟನೆಯ ಅವಶ್ಯಕತೆಯನ್ನು ಆತ್ಮೀಯವಾಗಿ ಪ್ರತಿಪಾದಿಸುತ್ತಿದ್ದ ಕೊಳಂಬೆಯವರು ಗೌಡ ಜನಾಂಗೀಯ ಸಾಹಿತಿಗಳಲ್ಲಷ್ಟೇ ಅಲ್ಲದೆ ಆಧುನಿಕವಾಗಿ ಅವರ ಕಾಲದವರೆಗೆ ಬರಡಾಗಿದ್ದ ಸುಳ್ಯದ ಸಾಹಿತ್ಯಿಕ ನೆಲವನ್ನು ಮೊದಲು ಉಳುಮೆ ಮಾಡಿದ ಕೀರ್ತಿಗೆ ಪಾತ್ರರಾಗಿದ್ದಾರೆ. ಪ್ರಥಮ 'ಗೌಡ' ಕವಿ 'ಅಚ್ಚಗನ್ನಡ ಕಾವ್ಯಕ್ಕೆ ಓರ್ವನೆ ಪುಟ್ಟಣ್ಣಗೌಡ' ಎಂಬ ಶ್ಲಾಘನೆಗೆ ಭಾಜನರಾಗಿದ್ದಾರೆ. ನಮ್ಮನ್ನಗಲಿದ ಗೌಡ ಕಣ್ಮಣಿಯ ಜನ್ಮಶತಾಬ್ದಿ ನೆನಪಿನ ಅವಸರದಲ್ಲಿ ಈ ಮರೆಯಲಾಗದ ಮಹಾನುಭಾವರ ಕನ್ನಡ ಶ್ರದ್ಧೆಯನ್ನು, ಹೋರಾಟದ ಬದುಕನ್ನು, ಆಳ ವಿಸ್ತಾರಗಳುಳ್ಳ ಸಾಹಿತ್ಯ ಮಣಿಹವನ್ನು ಸ್ಮರಿಸುವಾಗ ಆರ್ದ್ರಭಾವನೆಯ ಹನಿಗಣ್ಣು ತುಳುಕುತ್ತದೆ.

**ನೆರವಿನ ಹೊತ್ತಗೆಗಳು**

೧. **ಅಕ್ಷಯ** :ಸ್ಮರಣ ಸಂಚಿಕೆ
ದ.ಕ ಜಿಲ್ಲಾ ಏಳನೆಯ ಕನ್ನಡ ಸಾಹಿತ್ಯ ಸಮ್ಮೇಳನ -೯೪
ಸುಳ್ಯ.

೨. ವೀರ್ಯ : ಸ್ಮರಣ ಸಂಚಿಕೆ
ದ.ಕ ಮತ್ತು ಕೊಡಗು ಜಿಲ್ಲಾ ಗೌಡ ಸಮ್ಮೇಳನ -೯೬
ಸುಳ್ಯ.

೩. **ಸಪ್ತಸ್ವರ** :
ಸುಳ್ಯ ತಾಲೂಕು ಏಳನೆಯ ಕನ್ನಡ ಸಾಹಿತ್ಯ ಸಂಚಿಕೆ -೨೦೦೦.

# ದಕ್ಷಿಣ ಕನ್ನಡ ಜಿಲ್ಲೆಯ ಗೌಡ ಜನಾಂಗದ ಸಾಹಿತಿಗಳು

**ಸಂಜೀವ ಕುದ್ಪಾಜೆ**

ಗೌಡ ಸಮಾಜ ಮೂಲತಃ ಕೃಷಿ ಕುಲ ಕಸುಬು ಪಶುಪಾಲನೆ, ಬೇಟೆ, ಮೀನುಗಾರಿಕೆ, ಕೃಷಿಗೆ ಪೂರಕವಾದ ಇತರ ಕಸುಬುಗಳಲ್ಲಿ ತೊಡಗಿಸಿಕೊಂಡಿರುವ ಸಮುದಾಯ. ಅಕ್ಷರ ಲೋಕ ಅವರ ಪಾಲಿಗೆ ನಿಗೂಢವಾಗಿಯೇ ಇತ್ತು. ಅಕ್ಷರ ಸಾಹಿತ್ಯಕ್ಕೆ ಶತ ಶತಮಾನಗಳ ಇತಿಹಾಸವಿದ್ದರೂ ಗೌಡ ಜನಾಂಗಕ್ಕೆ ಪ್ರವೇಶವೇ ಸಿಗಲಿಲ್ಲ. ಆದರೆ ಅದು ಸಾಧ್ಯವಾದದ್ದು ವಸಾಹತುಶಾಹಿ ಆಡಳಿತದಲ್ಲಿ. ವಸಾಹತುಶಾಹಿಯ ಕೊಡುಗೆ ಅನ್ನುವುದರಲ್ಲಿ ಎರಡು ಮಾತಿಲ್ಲ. ಈ ಮಟ್ಟಿಗಂತು ಸದ್ಯ ಸ್ವಾತಂತ್ರ್ಯೋತ್ತರ ಲಿಬರಲ್ ಡೆಮೊಕ್ರಸಿ ಬಂದ ಮೇಲೆ ಗೌಡರು ಹೆಚ್ಚು ಹೆಚ್ಚು ಶಾಲಾ ಶಿಕ್ಷಣದಲ್ಲಿ ಪ್ರವೇಶ ಪಡೆದರು. ಅಕ್ಷರ ಕಲಿತ ನಂತರವೇ ಲಿಖಿತ ಸಾಹಿತ್ಯ ರಚಿಸಲು ಅವರಿಗೆ ಸಾಧ್ಯವಾಯಿತು. ಅದೇನಿದ್ದರೂ ಸಾಹಿತ್ಯಲೋಕದಿಂದ ಈ ಜನ ದೂರವಿರಲಿಲ್ಲ. ಮೌಖಿಕ ಸಾಹಿತ್ಯ ಪರಂಪರೆ ಗೌಡರ ಅಪೂರ್ವ ಸಂಪತ್ತು. ಆದರೆ ಈ ಬಗ್ಗೆ ವಿವರ ಒದಗಿಸುವುದು ಪ್ರಸ್ತುತ ಲೇಖನದ ಉದ್ದೇಶವಾಗಿರದೆ ಲಿಖಿತ ಸಾಹಿತ್ಯದ ಸಾಧನೆಗಳನ್ನಷ್ಟೇ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ದ.ಕ. ಜಿಲ್ಲೆಯ ಸಾಹಿತಿಗಳ ಸಮಗ್ರವಾದ ಮಾಹಿತಿ ಇದುವರೆಗೆ ದಾಖಲಾಗಿಲ್ಲ. ಸುಳ್ಯ, ಪುತ್ತೂರು, ಬೆಳ್ತಂಗಡಿ ತಾಲೂಕುಗಳಲ್ಲಿ ಪ್ರಮುಖವಾಗಿ ಹರಡಿಕೊಂಡಿರುವ ಗೌಡ ಜನಾಂಗದ ಸಾಹಿತಿಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಈ ಲೇಖನವೊಂದು ಮೊದಲ ಹೆಜ್ಜೆ. ಎಲೆಮರೆಯ ಕಾಯಿಯಂತೆ ಪ್ರಚಾರ ಬಯಸದ ಅದೆಷ್ಟು ಸಾಹಿತಿಗಳು ಸದ್ದಿಲ್ಲದೆ ಸಾಹಿತ್ಯಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರಬಹುದು. ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಚಾರಿತ್ರಿಕವಾಗಿ ಗೌಡ ಜನಾಂಗದ ಸಾಹಿತ್ಯ ರಚನೆ ಆರಂಭವಾಗಿದೆಯನ್ನಬಹುದು. ಕ್ರಮೇಣ ಶಿಕ್ಷಣ ಕ್ಷೇತ್ರದಲ್ಲಿ ಪ್ರಗತಿ ಸಾಧಿಸುವುದರೊಂದಿಗೆ ಸಾಹಿತ್ಯ ಕ್ಷೇತ್ರದಲ್ಲಿ ಹೆಚ್ಚು ಹೆಚ್ಚಾಗಿ ಗುರುತಿಸುವ ಪ್ರಯತ್ನ ನಡೆದಿದೆ.

ಶ್ರೀ ಕೊಳಂಬೆ ಪುಟ್ಟಗೌಡರಿಗೆ ಯಕ್ಷಗಾನ ತಾಳಮದ್ದಲೆಯು ಆಸಕ್ತಿಯ ಕ್ಷೇತ್ರಗಳು, ಯಕ್ಷಗಾನ ಅರ್ಥಧಾರಿಯಾಗಿ ಕೆಲವು ಪಾತ್ರಗಳಿಗೆ ಹೊಸ ರೂಪವನ್ನು ಕೊಟ್ಟವರು. ಚೊಕ್ಕಾಡಿಯಲ್ಲಿ ಶ್ರೀ ಶಾರದಾಂಬ ಕೃಪಾಪೋಷಿತ ಯಕ್ಷಗಾನ ಕಲಾ ಮಂಡಳಿ ಸಂಸ್ಥೆಯೊಂದನ್ನು ಸ್ಥಾಪಿಸಿದ್ದಾರೆ. ಅಂಧಕಾಸುರ ಕಾಳಗ, ಭಾರತಿ ವಿಜಯ, ನೆಲ್ಲೂರಗೆಲ್ಲ ಇವು ಇವರ ಯಕ್ಷಗಾನ ಕೃತಿಗಳು. ಹಸ್ತ ಸಾಮುದ್ರಿಕಾಶಾಸ್ತ್ರ, ಜ್ಯೋತಿಷ್ಯಗಳಲ್ಲಿ ಆಸಕ್ತಿ ಪ್ರೌಢಿಮೆಗಳನ್ನು ಬೆಳೆಸಿಕೊಂಡಿದ್ದಾರೆ. ಹೂವೀಡು,

ಮತ್ತು ಮಾತಿಲ್ಲಾ ಮಾತಿಲ್ಲಾ; ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ಇವರ ಕೊಡುಗೆಯಾಗಿವೆ. **ತಲೆಯಂತೆ** ಬಾಲ, ಲೋಕ ತಿದ್ದುವ ವಿಜ್ಞಾನ ಇವು ಸಾಮಾಜಿಕ ಸಮಸ್ಯೆ ಮೇಲೆ ಬೆಳಕು ಚೆಲ್ಲುವ ನಾಟಕಗಳು. ಯಾವುದೇ ಅಪಭ್ರಂಶ ಬೆರಸದೆ ಅಚ್ಚಗನ್ನಡದಲ್ಲಿ **'ಕಾಲೂರ ಚೆಲವೆ'**ಯನ್ನು ಬರೆದು ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಸ್ಥಾನವನ್ನು ಪಡೆದಿದ್ದಾರೆ. ಗಹನವೂ ಅಮೂಲ್ಯವೂ ಆದ ಲೋಕಾನುಭವವನ್ನು ಅಚ್ಚಗನ್ನಡದಲ್ಲಿ ಸರಾಗವಾಗಿ ಸಲಿಲವಾಗಿ ಪೋಣಿಸಿರುವ ಮುಕ್ತಕಗಳ ಕೃತಿಯೇ **'ನುಡಿಮಣಿಗಳು'** ಕನ್ನಡ ಭಾಷೆಯ ಪ್ರೀತಿಗೆ ಸಾಕ್ಷಿಯಾಗಿರುವುದು ಅವರ ಅಚ್ಚಗನ್ನಡ **ನುಡಿಕೋಶ**. ಗೌಡ ಸಂಘದ ಸಂಘಟನೆಗಾಗಿ ಧನಸಂಗ್ರಹಕ್ಕಾಗಿ ಕೋಲಾಟ, ನಾಟಕ ಮುಂತಾದುವನ್ನು ಪ್ರದರ್ಶಿಸಿದ್ದಾರೆ. ಗೌಡ ಸಮುದಾಯದಲ್ಲಿ ಜನಿಸಿ ಅಕ್ಷರ ಪರಂಪರೆಯ ಮೊದಲನೆ ತಲೆಮಾರಿನ ಸಾಹಿತಿ. ಇವರಿಗೆ ಸಾಕಷ್ಟು ಪ್ರೋತ್ಸಾಹ ಸಮುದಾಯಿಕ ಬೆಂಬಲದ ಅವಕಾಶ ಸಿಗಲಿಲ್ಲವೆಂದೇ ಹೇಳಬೇಕಾಗುತ್ತದೆ.

ಕೊಳಂಬೆಯವರ ನಂತರ ಕೇಳಿಬರುವ ಹೆಸರೇ ಶ್ರೀ ಟಿ.ಜಿ. ಮೂಡೂರು ಅವರದು. ಸುಮಾರು ಇಪ್ಪತ್ತು ವರ್ಷಗಳಿಂದ ದಕ್ಷಿಣ ಕನ್ನಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಸುಳ್ಯ ತಾಲೂಕು ಪ್ರತಿನಿಧಿಯಾಗಿ, ಸುಮಾರು ಮೂರು ವರುಷಗಳ ಕಾಲ ಸುಳ್ಯ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಸೇವೆಸಲ್ಲಿಸಿದ್ದಾರೆ. ಅರಂತೋಡಿನಲ್ಲಿ ನಡೆದ ಸುಳ್ಯ ತಾಲೂಕಿನ ನಾಲ್ಕನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ಟಿ.ಜಿ ಮೂಡೂರು ಎಂಬ ಕಾವ್ಯನಾಮದಿಂದಲೇ ಬೆಳಕಿಗೆ ಬಂದ ಅವರ ಪೂರ್ಣ ಹೆಸರು ಯು. ತಮ್ಮಯ್ಯ ಗೌಡ. ೧-೨-೧೯೩೦ರಂದು ಕಳಂಜ ಗ್ರಾಮದ ವಾರಣಾಸಿಯಲ್ಲಿ ಇವರ ಜನನ. ದಿ. ಸೇಡಿಯಾಪು ಅವರ ಶಿಷ್ಯರಾಗಿ ವಿದ್ವಾನ್ ಪದವಿ ನಂತರ ಸ್ವಲ್ಪ ಸಮಯ 'ನವ ಭಾರತ'ದಲ್ಲಿ ಪತ್ರಿಕೋದ್ಯಮ. ಅನಂತರ ಸುಬ್ರಹ್ಮಣ್ಯ ಅಯ್ಯರ್ ಎಲಿಮೆಂಟರಿ ಶಾಲೆಯಲ್ಲಿ ಅಧ್ಯಾಪರಾಗಿ ಸೇವೆ.

ಶ್ರೀ ಟಿ.ಜಿ. ಮೂಡೂರು ಪಂಡಿತಪರಂಪರೆಗೆ ಸೇರಿದ ವಿದ್ವಾಂಸರಾದರೂ, ಸೃಜನಶೀಲ ಕ್ಷೇತ್ರಗಳಾದ ಕವನ, ನಾಟಕ, ಕತೆ ಮೊದಲಾದ ಕ್ಷೇತ್ರಗಳಲ್ಲಿ ಐವತ್ತು ವರುಷಗಳ ಹಿಂದೆ ಹುಲುಸಾಗಿ ಬೆಳೆಯನ್ನು ತೆಗೆದವರು. **ಕಾಡಮಲ್ಲಿಗೆ, ಹೂಸತುಕಟ್ಟು** ಕವನ ಸಂಕಲನ, **ಸಕು** ಎನ್ನುವ ಪೌರಾಣಿಕ ನಾಟಕ, **ಲೊಚಗುಟ್ಟಿತು ಹಲ್ಲಿ, ಕದಲಬೆಳ್ಳಿ, ಉತ್ತರಾಯಣ** ಎಂಬ ನೀಳ್ಗವನವನ್ನು ರಚಿಸಿದ್ದಾರೆ. **ಶಿವಕುಮಾರಿ** ಮಕ್ಕಳ ನಾಟಕ. **ಹೊಸಕೆರೆಯ ಹೊನ್ನಮ್ಮ** ಎಂಬ ಜಾನಪದ ಗೀತನಾಟಕ. **ಹೃದಯ** ಎನ್ನುವ ರೂಪಕ. **ಶಿವಸಂಸಾರ, ಗುರುವನ ಗುಡಿ**ಯೆಂಬ ಗೀತಾರೂಪಕಗಳ ಕೃತಿ. **ಮರಳಿ ಮನೆಗೆ, ದಯೆಯ ದಾಂಗುಡಿ** ಮೊದಲಾದ ನಾಟಕಗಳು. **ಹಾವು** ಎಂಬ ತರಂಗ ರೂಪಕವನ್ನು ರಚಿಸಿದ್ದಾರೆ. ತರಂಗ ರೂಪಕದ ಕೃತಿಯೆ 'ಹಾವು'. ಸಾವಿತ್ರಿ (ಛಂದೋರೂಪಕ) **ಮಕುಟೂರು ಭಂಗ** ಎನ್ನುವ ಛಂದೋನಾಟಕ ಪ್ರಯೋಗವನ್ನು ಮಾಡಿದ್ದಾರೆ. ಜನ್ನನ ಯಶೋಧರ ಚರಿತೆಯನ್ನು 'ಜೀವದಯಾಷ್ಟಮಿ' ಎಂಬ ಶೀರ್ಷಿಕೆಯೊಂದಿಗೆ ಗದ್ಯಕ್ಕೆ ಅನುವಾದಿಸಿದ್ದಾರೆ. **ಅಬ್ಬಿಯ ಮಡಿಲು** ಇವರ ನೀಳ್ಗತೆಯ ಕೃತಿ. **ಹೋಗ್ ಬರ್ತೀನಿ ರಾಜ, ಕಣ್ ಕನಸು ತೆರೆದಾಗ** ಎರಡು ಕಥಾ ಸಂಕಲನ ಹೊರತಂದರೆ ಯಕ್ಷಗಾನ ಕ್ಷೇತ್ರಕ್ಕೆ **ಕುರುರಾಯಸೋಲಗ** ಎನ್ನುವ ವಿಭಿನ್ನ ಭಾಷೆಯ ಯಕ್ಷಗಾನ

ಕೃತಿಯನ್ನು ಕೊಡುಗೆಯಾಗಿ ನೀಡಿದ್ದಾರೆ. ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಅರ್ಥ ಸಹಿತವಾದ ಮತ್ತೊಂದು ಯಕ್ಷಗಾನ ಕೃತಿ. ಬೆಳ್ಳಿ ಬೆಳಕು ಎನ್ನುವ ಮುಕ್ತಕಗಳನ್ನು ಬರೆದಿದ್ದಾರೆ. ಸಮ್ಮೇಳನದ ಪ್ರಬಂಧಗಳ ಸಂಪಾದಿತ ಕೊಂಬೋಲಗ ಕೃತಿಯನ್ನೂ ಹೊರತಂದಿದ್ದಾರೆ. ಇವರ ಬೆಳಕು ಕಾಣಲು ಹಂಬಲಿಸುವ ಕೃತಿಗಳು ಸುಮಾರು ಹದಿನಾರಷ್ಟಿವೆ. ಇವರ 'ಅತ್ತೆಗೆ ತಾಳಿ' ಎನ್ನುವ ಗೌಡ ಕನ್ನಡ ನಾಟಕ ಬೆಳಕು ಕಂಡಿದ್ದರೆ ಗೌಡ ಕನ್ನಡದ ಮೊತ್ತ ಮೊದಲ ನಾಟಕ ಎನ್ನುವ ಕೀರ್ತಿಗೆ ಭಾಜನವಾಗುತ್ತಿತ್ತು. ಸಿಡಿಲಮರಿ, ಅಶ್ವತ್ಥಾಮನ್, ಮೋಹನ ಮುರಳಿ ಖಂಡಕಾವ್ಯಗಳಲ್ಲದೆ, ಸಂದಾದೀಪ, ಇನ್ನೂರ್, ಶ್ರೀಮತಿ, ಕೇರಳ ಕುಮಾರಿ, ಮಧ್ಯಮ, ಐದಿರುಗಳು, ಅಚ್ಚರಿಯ ಅರಳಲೆ ನಾಟಕಗಳನ್ನು ರಚಿಸಿರುತ್ತಾರೆ. ತುಳುಭಾಷೆಯಲ್ಲಿ ದಾರಗುದಾರೆ, ಜಾಗೀರ್‌ದಾರೆ, ಜಗ್ಗೆ, ಶೀನನ ಸಿನೆಮಾ, ಗಟ್ಟಿಯಾಂಟ ರೊಟ್ಟಿ ತೆಳ್ಪಾಂಟ ತೆಳ್ಳಾವ್, ದೂರದ ಕುಕ್ಕು ಮುಟ್ಟದ ಅಂಬಟೆ, ಗ್ರಾಜುವೇಟ್ ಗಿರಿಜ ಮೊದಲಾದ ನಾಟಕಗಳು ಸಾಹಿತ್ಯ ಲೋಕಕ್ಕೆ ಇನ್ನೂ ತೆರೆದುಕೊಂಡಿಲ್ಲ. ಜನಪರ ನಿಲುವಿನ ಹಿರಿಯ ತಲೆಮಾರಿನ ಅಪೂರ್ವ ಸಂಘಟಕ.

ಹಳೆಯ ತಲೆಮಾರಿನ ಇನ್ನೊಂದು ಹೆಸರು ಮಂಡೆಕೋಲು ಗಂಗಾಧರ ಗೌಡ ಅವರದು. ನಿರಂತರ ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಸಾಹಿತ್ಯ ಜಗತ್ತಿನಿಂದ ದೂರವಿದ್ದ ಗೌಡ ಜನಾಗಂದ ಆರಂಭದ ಬರಹಗಾರರಲ್ಲಿ ಇವರು ಒಬ್ಬರು. ಇಂದಿಗೂ ತಮ್ಮದೇ ಆದ ಪ್ರಕಾಶನ, ಪುಸ್ತಕದ ಅಂಗಡಿಯನ್ನು ರೂಪಿಸಿಕೊಂಡು ತಮ್ಮದೇ ಪುಸ್ತಕಗಳನ್ನು ಇಂದು ಕೂಡ ಹೊರತರುತ್ತಿರುವ ಇವರದು ಗಮನಾರ್ಹ ವ್ಯಕ್ತಿತ್ವ. ಕಾವ್ಯದರ್ಶನ, ಸುಳ್ಯದ ಸಂಪಿಗೆ ಇವರ ಕಾವ್ಯ ಕೃತಿಗಳು. ನೊಂದ ಹೃದಯ, ಸಾಹಿತ್ಯ ಪ್ರೇಮಿ ನಾಟಕ. ಕಾಡೂರ ಬಾಳು ಸಾಮಾಜಿಕ ಕಾದಂಬರಿಯನ್ನು ಬರೆದಿರುತ್ತಾರೆ. ಭಕ್ತಿದರ್ಶನ ಭಕ್ತಿಗೀತೆಗಳ ಸಂಕಲನ. ಶಿಶುಕಾವ್ಯ ಮತ್ತು ಚಿಕ್ಕ ಮಕ್ಕಳ ಚೊಕ್ಕ ಕತೆಗಳು ಮಕ್ಕಳಿಗಾಗಿ ಬಂದ ಕೃತಿಗಳು. ಇವರನ್ನು ಸುಳ್ಯ ತಾಲೂಕಿನ ಮೂರನೇ ಸಾಹಿತ್ಯ ಸಮ್ಮೇಳನದಲ್ಲಿ ಸಾಹಿತ್ಯ ಸೇವೆಗಾಗಿ ಸನ್ಮಾನಿಸಲಾಗಿದೆ.

ಗೌಡ ಸಮುದಾಯದ ಸುಶಿಕ್ಷಿತ ಪಂಡಿತ ಪರಂಪರೆಯಲ್ಲಿ ಗಂಭೀರ ತಿರುವು ಕಾಣುವುದು ಪ್ರೊ. ಕೋಡಿ ಕುಶಾಲಪ್ಪಗೌಡರ ಸಾಧನೆಯಲ್ಲಿ. ಉತ್ತಮ ಶಿಕ್ಷಕರಾಗಿ, ಉತ್ಕೃಷ್ಟ ಶಿಷ್ಯ ಪರಂಪರೆಯನ್ನೇ ಸೃಷ್ಟಿಸಿದ ಹೆಗ್ಗಳಿಗೆ ಇವರದು. ಡಾ. ಕೆ. ಕುಶಾಲಪ್ಪ ಗೌಡ ಅವರು ಭಾಷಾ ವಿಜ್ಞಾನ ಕ್ಷೇತ್ರದಲ್ಲಿ ಅಂತರಾಷ್ಟ್ರೀಯ ಖ್ಯಾತಿಯನ್ನು ಗಳಿಸಿದರು. ವ್ಯಾಕರಣ ಹಾಗೂ ಭಾಷಾವಿಜ್ಞಾನವನ್ನು ಶುಷ್ಕ ನೀರಸವೆಂದು ಪಂಪನಂತಹ ರಸಿಕ ಪ್ರೌಢ ಕವಿಯೇ ಹೀಗಳೆದಿರುವಾಗ ತಮ್ಮ ಬರಹಗಳಲ್ಲಿ ಹಾಗೂ ವಿದ್ಯಾರ್ಥಿಗಳಲ್ಲಿ ಆಸಕ್ತಿ ಹೊಮ್ಮುವಂತೆ ಮಾಡಿರುವುದೇ ಪ್ರೊ. ಗೌಡ ಅವರ ವ್ಯಕ್ತಿ ವೈಶಿಷ್ಟ್ಯ.

ಬಡತನ ಪ್ರೊ. ಗೌಡ ಅವರ ವಿದ್ಯಾಭಿಲಾಷೆಯನ್ನು ಸೋಲಿಸುವಲ್ಲಿ ವಿಫಲವಾಯಿತು. ಗುರು ಮರಿಯಪ್ಪ ಭಟ್ಟರ ಉತ್ತೇಜನದಿಂದ A Descriptive Grammer of Vaddaradhane ಎಂಬ ಸಂಶೋಧನಾ ಪ್ರಬಂಧಕ್ಕೆ ಅಣ್ಣಾಮಲೈ ವಿಶ್ವವಿದ್ಯಾನಿಲಯದ ಎಂ.ಲಿಟ್ ಪದವಿ ಪಡೆದರು.

ಮುಂದೆ ಅದೇ ವಿಶ್ವವಿದ್ಯಾನಿಲಯದ ಪ್ರೊ. ಅಗಸ್ತ್ಯ ಲಿಂಗಂ ಅವರ ನಿರ್ದೇಶನಗಳಲ್ಲಿ ಕೊಡಗು ಮತ್ತು ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಕ್ರಿ.ಶ. ೧,೦೦೦ ದಿಂದ ೧,೪೦೦ರವರೆಗಿನ ಕನ್ನಡ ಶಾಸನಗಳ 'ಭಾಷಾ ವಿಶ್ಲೇಷಣೆ' ಎಂಬ ಸಂಶೋಧನಾ ಪ್ರಬಂಧಕ್ಕೆ ೧೯೬೭ರಲ್ಲಿ ಡಾಕ್ಟರೇಟ್ ಪದವಿ ದೊರಕಿತು.

ಇಂಗ್ಲೇಂಡಿನ ಮ್ಯಾಂಚೆಸ್ಟರ್ ವಿ.ವಿ. ದಲ್ಲಿ ಹತ್ತು ತಿಂಗಳ ಕಾಲ ವಿಶೇಷ ಅಧ್ಯಯನ ಹಾಗೂ ಜರ್ಮನಿ, ಸ್ವಿಜರ್ಲೇಂಡ್‌ಗಳ ಪ್ರವಾಸ ಅಕಾಡೆಮಿಕ್ ಜೀವನದಲ್ಲಿನ ಮೈಲಿಗಲ್ಲು. ಮುಂದೆ ಆಂಧ್ರ ಪ್ರದೇಶ ಹಾಗೂ ತಮಿಳು ನಾಡಿನ ಹಲವಾರು ವಿಶ್ವವಿದ್ಯಾನಿಲಯಗಳಲ್ಲಿ ಸೇವೆ ಸಲ್ಲಿಸಿದರು. ೧೯೫೫-೫೬ರಲ್ಲಿ ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಕನ್ನಡ ಸಹಾಯಕ ಪ್ರೊಫೆಸರ್ ಆಗಿ, ಮುಂದೆ ಆಂಧ್ರ ಪ್ರದೇಶದ ಮದನಪಳ್ಳಿಯ ಥಿಯೋಸಾಫಿಕಲ್ ವಿ.ವಿ. ದಲ್ಲಿ ಭಾಷಾ ವಿಜ್ಞಾನದಲ್ಲಿ ಪ್ರವಾಚಕ ರಾಗಿ ಭಡ್ತಿ, ಭಾಷಾ ವಿಜ್ಞಾನದ ಪ್ರೌಢ ಅಧ್ಯಯನ ಕಾರ್ಯನಿರ್ವಾಹಕ ನಿರ್ದೇಶಕರಾಗಿ ಹೀಗೆ ವಿವಿಧ ಕ್ಷೇತ್ರ ಹಾಗೂ ಸಂಸ್ಥೆಗಳಲ್ಲಿ ಸೇವೆಯನ್ನು ಸಲ್ಲಿಸಿದರು. ನಂತರ ೧೯೬೭ರಿಂದ ೯೧ರವರೆಗೆ ಮದರಾಸು ಕನ್ನಡ ವಿಭಾಗ ಪ್ರಾಧ್ಯಾಪಕ ಹಾಗೂ ಮುಖ್ಯಸ್ಥರಾಗಿ ಕನ್ನಡಕ್ಕೆ ಸೇವೆಸಲ್ಲಿಸಿದ ಇವರ ಪ್ರಾಮಾಣಿಕತೆಯನ್ನು ಮನಗಂಡು ಮದರಾಸು ವಿಶ್ವವಿದ್ಯಾನಿಲಯವು ೧೯೪೪ರಿಂದ ನಿವೃತ್ತಿಯಾಗುವ ತನಕ ಇವರಿಗೆ ಓರಿಯಂಟಲ್ ರಿಸರ್ಚ್ ಇನ್ಸ್‌ಟ್ಯೂಟ್‌ನ ಕರೆಸ್ಪಾಂಡೆಂಟ್ ಎಂಬ ಗೌರವ ಪದವಿ ಯನ್ನು ನೀಡಿ ಗೌರವಿಸಿತು. ದ್ರಾವಿಡ ಭಾಷೆಯ ಮೇಲಿನ ಆಸಕ್ತಿ ಹಾಗೂ ವಿಶೇಷ ಪ್ರತಿಭೆಯನ್ನು ಗುರುತಿಸಿದ ಎಂ. ಎಮಿನೊ ಡಾ. ಕೆ.ಕೆ. ಗೌಡ ಅವರನ್ನು ತಾನು ಪ್ರಕಟಿಸಿದ ಲೇಖನವೊಂದಕ್ಕೆ ಸಹ ಲೇಖಕರನ್ನಾಗಿ ಮಾಡಿಕೊಂಡರು.

ಇವರ ಸುಮಾರು ೧೭ ಕೃತಿಗಳು ಪ್ರಕಟಗೊಂಡಿವೆ. ನಾಲ್ಕು ಪುಸ್ತಕಗಳು ಆಂಗ್ಲಭಾಷೆಯಲ್ಲಿ, ೫೦ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳನ್ನು ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಪ್ರಕಟಿಸಿದ್ದಾರೆ. ಲಘು ಪ್ರಬಂಧ, ಹರಟೆ, ಕವಿತೆ, ವಿವಿಧ ಕಡೆಯಲ್ಲಿ ಬೆಳಕು ಕಂಡಿವೆ. ಸಾಹಿತ್ಯ ರಚನೆಯ ಪ್ರಾರಂಭದ ಹಂತದಲ್ಲಿ ವಿಮರ್ಶಾ ಪ್ರಬಂಧ, ಹರಟೆ, ಕವಿತೆ, ಮುಂತಾದ ವಿಷಯಗಳತ್ತ ಆಸಕ್ತಿಯನ್ನು ಹೊಂದಿದ್ದರು. ಕವಿದೃಷ್ಟಿಯೊಡನೆ ಸಂಶೋಧನೆಯ ಬಿಗು, ಸರಳ, ಸೌಜನ್ಯಯುತ ಮಾತಿನ ಕುಣಿತ ಮಣಿತಗಳು ಹೃದ್ಯ ಮಿಳಿತಗೊಂಡಿವೆ ಭಾಷಾವಿಜ್ಞಾನ ಕ್ಷೇತ್ರದಲ್ಲಿ ಹಾಗೂ ಸಂಶೋಧನಾತ್ಮಕ ಪ್ರೌಢ ಪ್ರಬಂಧಗಳ ರಚನೆಯಲ್ಲಿ ಇವರ ಮಾರ್ಗದರ್ಶನ ಪಡೆದ ಹಲವಾರು ವಿದ್ಯಾರ್ಥಿಗಳು ಉನ್ನತ ಹುದ್ದೆಯನ್ನು ಪಡೆದುಕೊಂಡಿದ್ದಾರೆ. ಏಳು ಜನರಿಗೆ ಪಿ.ಹೆಚ್.ಡಿ. ಸಂಶೋಧನೆಯ ನಿರ್ದೇಶನ ಮಾಡಿದ್ದಾರೆ. ಹನ್ನೆರಡು ಜನರು ಇವರ ಮಾರ್ಗದರ್ಶನದಲ್ಲಿ ಎಂ.ಫಿಲ್. ಪದವಿಯನ್ನು ಪಡೆದಿದ್ದಾರೆ.

ಭಾಷಾ ವಿಜ್ಞಾನಿ ಮಾತ್ರವಲ್ಲ, ನಾಡಿನ ಘನವಿದ್ವಾಂಸರಲ್ಲಿ ಇವರೊಬ್ಬರು. ಖ್ಯಾತ ಲಲಿತ ಪ್ರಬಂಧಕಾರರು. ಮರೆಯಾಗುತ್ತಿರುವ ಲಲಿತ ಪ್ರಬಂಧ ಕ್ಷೇತ್ರ ಮತ್ತೆ ಯೌವ್ವನವನ್ನು ಗಳಿಸಿ ಕೊಂಡಿದೆ. ಕಳೆದು ಹೋದ ಘಟನೆಗಳು ಲಲಿತ ಪ್ರಬಂಧಗಳಲ್ಲಿ ಪುನರ್‌ಜನ್ಮ ಪಡೆದಿವೆ. ಬಾಲ್ಯ

ಕಾಲದ ದಿವ್ಯ ಅನುಭವವನ್ನು ಪರಿಪೂರ್ಣ ಭಾಷೆಯ ಬಳಕೆಯೊಂದಿಗೆ ನವಿರಾದ ಹಾಸ್ಯದ ಸಿಂಚನದೊಂದಿಗೆ **ಊರೊಸಗೆ, ಕಡಲ ಪಡಿಯ ಕನವರಿಕೆಗಳು, ಬೆಟ್ಟದ ಮೇಲೊಂದು ಮನೆಯ ಮಾಡಿ** ಕೃತಿಗಳು ಓದುಗರನ್ನು ತಟ್ಟುತ್ತವೆ. ಕಾವ್ಯ ಇಲ್ಲಿ ಗದ್ಯರೂಪದಲ್ಲಿದೆ ಎಂದರೆ ಅತಿಶಯ ವಾಗಲಾರದು.

ವಿದ್ವತ್, ಭಾಷಾವಿಜ್ಞಾನ, ಸಾಹಿತ್ಯ ರಸಿಕತೆಗಳಿಂದ ಪರಿಪುಷ್ಟವಾದ ಡಾ. ಕೆ. ಕೆ. ಗೌಡರ ಬರವಣಿಗೆ ನಿರ್ವಿಷ್ಟತೆಯನ್ನು ಹೊಂದಿದೆ. ಪ್ರಾಮಾಣಿಕ ಕನ್ನಡ ಸೇವೆಯನ್ನು ಮಾಡಿದ ಡಾ. ಗೌಡರನ್ನು ಕಾಂಚಿಕಾಮಕೋಟಿ ಪೀಠಾಧಿಪತಿ ಜಯೇಂದ್ರ ಸರಸ್ವತಿಯವರ ೫೦ನೇ ವರ್ಧಂತಿಯಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಕೊಟ್ಟ ಕೊಡುಗೆಯನ್ನು ಪರಿಗಣಿಸಿ ಚಿನ್ನದ ಪದಕ ನೀಡಿ ಗೌರವಿಸಿದ್ದರು. **ದಕ್ಷಿಣ ಕನ್ನಡ ಜಿಲ್ಲೆಯ ಕೈಫಿಯತ್ತುಗಳು** (ಡಾ. ಚಿನ್ನಪ್ಪ ಗೌಡರೊಂದಿಗೆ) ಪುಸ್ತಕಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ. ಡಾ. ಕೆ. ಕೆ. ಗೌಡರ ಪ್ರತಿಭೆಗೆ ಸೋವಿಯತ್ ಲ್ಯಾಂಡಿನ ಚಿನ್ನದ ಪದಕ ದೊರೆಯಿತು. **ಕನ್ನಡ ಭಾಷಾವಲೋಕನವೆಂಬ** ಗ್ರಂಥವನ್ನು ಕರ್ನಾಟಕ ಸಾಹಿತ್ಯ ಅಕಾಡೆಮಿ ವರ್ಷದ ಉತ್ತಮ ಸೃಜನಶೀಲ ಗ್ರಂಥವೆಂದು ಆಯ್ಕೆ ಮಾಡಿದೆ. ಹೊರನಾಡಿನಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಕೊಟ್ಟ ಕೊಡುಗೆಯನ್ನು ಗಮನಿಸಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿಯನ್ನು ಕೊಟ್ಟು ಸನ್ಮಾನಿಸಿದೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಇವರಿಗೆ ಸಂದಿದೆ. ಸುಳ್ಯದಲ್ಲಿ ನಡೆದ ದ.ಕ. ಜಿಲ್ಲಾ ಏಳನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಪ್ರೊ. ಕುಶಾಲಪ್ಪಗೌಡರು ಅಧ್ಯಕ್ಷರಾಗಿ ಆಯ್ಕೆಯಾದದ್ದು ಅವರು ಹಿರಿಮೆಗರಿಮೆಗೆ ಪ್ರತ್ಯಕ್ಷ ಸಾಕ್ಷಿ.

ಸುಮಾರು ಮೂರು ದಶಕಗಳ ಕಾಲ ಸದ್ದುಗದ್ದಲವಿಲ್ಲದೆ ಕನ್ನಡ ಸೇವೆ ಮಾಡಿದ ಪ್ರೊ. ಕೆ.ಕೆ. ಗೌಡರು ನಮ್ಮ ನಾಡಿನ ಜನಮನದಲ್ಲಿ ಬಹುಕಾಲ ನಿಲ್ಲಬಲ್ಲ ದಾಖಲೆಯ ಸಾಧಕರಾಗಿದ್ದಾರೆ.

ಇಂದು ಜ್ಞಾನ ಜಗತ್ತಿನ ಬಹುಮುಖ್ಯ ಕ್ಷೇತ್ರವಾಗಿರುವ ಪ್ರಾಥಮಿಕ ಶಿಕ್ಷಣ ಮತ್ತು ಮಕ್ಕಳ ಅಭಿವೃದ್ಧಿ ಕುರಿತಾದ ವಿಚಾರದಲ್ಲಿ ಅಪಾರ ಪಾಂಡಿತ್ಯವುಳ್ಳವರು ಶ್ರೀ ಸುಕುಮಾರ ಗೌಡ.

ಡಾ. ಗೌಡ ಅವರು ಹಲವು ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ಅಧ್ಯಯನ, ಅಧ್ಯಾಪನ, ಸಂಶೋಧನೆ ಗಳಿಂದ ಅಪೂರ್ವ ಹಾಗೂ ಅಪಾರ ಅನುಭವ ಹೊಂದಿದ್ದಾರೆ. ಡಾ. ಸುಕುಮಾರ ಗೌಡರು ಮಗುವಿನ ಕಲಿಕೆಯ ಪ್ರಕ್ರಿಯೆ, ಜ್ಞಾನಾರ್ಜನೆ, ವಾಚನ ಮತ್ತು ಲೇಖನಕಲೆ, ಮೌಲ್ಯ ಮಾಪನ ಇತ್ಯಾದಿ ಶೈಕ್ಷಣಿಕ ವಿಚಾರಗಳಲ್ಲಿ ಇಪ್ಪತ್ತಕ್ಕೂ ಹೆಚ್ಚಿನ ಪ್ರಬಂಧಗಳನ್ನು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಸಮ್ಮೇಳನಗಳಲ್ಲಿ ಮಂಡಿಸಿದ್ದಾರೆ. ಈ ಬಗ್ಗೆ ವಿಶೇಷ ತರಬೇತಿಗಳನ್ನು ನಡೆಸಿದವರು. ಅವರ ಸಾಧನೆಯ ಸಾಮರ್ಥ್ಯಗಳಿಗಾಗಿ ಅಂತರಾಷ್ಟ್ರೀಯ ಶಿಕ್ಷಣ ಸಂಘ ಸಂಸ್ಥೆಗಳು ಸದಸ್ಯತ್ವ ನೀಡಿವೆ. ಕೆನಡಾದ ಮೆಗ್ಗಿಲ್ ವಿಶ್ವವಿದ್ಯಾನಿಲಯದ ಸಂದರ್ಶಕ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ.

೧೯೮೭ರಲ್ಲಿ ಡಾ. ಸುಕುಮಾರ ಗೌಡರ ನಿರ್ದೇಶನದಲ್ಲಿ ಉಡುಪಿಯ ಡಾ| ಟಿ.ಎಂ.ಎ.ಪೈ ಪ್ರತಿಷ್ಠಾನವು ಮಣಿಪಾಲ ಭಾಷಾ ಸಂಸ್ಥೆಯನ್ನು ಆರಂಭಿಸಿತು. ಡಾ. ಗೌಡರು ಐದು ವರುಷಗಳ

ಕಾಲ ಆ ಸಂಸ್ಥೆಯಲ್ಲಿದ್ದು, ತನ್ನ ಅನುಭವ, ಅಧ್ಯಯನ ಮತ್ತು ಯೋಜನೆಗಳ ಪರಿಣಾಮಕಾರಿ ಕಾರ್ಯಗಳನ್ನೆಸಗಿದರು. ಒಂದು ಮತ್ತು ಒಂಬತ್ತನೇ ತರಗತಿಗಳ ಮಾತೃ ಭಾಷೆ ಇಂಗ್ಲಿಷ್ ಪಠ್ಯ ಪುಸ್ತಕಗಳು ಇವರ ನಿರ್ದೇಶನದಲ್ಲಿ ರಚನೆಯಾದವು. ಭುವನೇಶ್ವರದಲ್ಲಿ ಜರಗಿದ ರಾಷ್ಟ್ರಮಟ್ಟದ ಸಮ್ಮೇಳನದಲ್ಲಿ ಪ್ರಬಂಧ ಮಂಡಿಸಿದರು. ಮಂಗಳೂರು ವಿ.ವಿಯ ಇಂಗ್ಲಿಷ್ ಭಾಷಾ ಬೋಧನಾ ಸಂಶೋಧಕ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದರು. ಎಂ.ಎ ತರಗತಿಗಳಿಗೆ ಬೋಧನೆ, ಶಿಕ್ಷಕರಿಗೆ ಸೇವಾಂತರ್ಗತ ತರಬೇತಿ ಭಾಷಾ ವಿಷಯದಲ್ಲಿ ಕಾರ್ಯಾಗಾರ ನಡೆಸಿದರು. ಅನೇಕ ಶೈಕ್ಷಣಿಕ ಯೋಜನೆಗಳನ್ನು ಸರಕಾರಕ್ಕೆ ಒಪ್ಪಿಸಿದರು.

ವಿದ್ಯಾರ್ಥಿಗಳ ಕಲಿಕಾಮಟ್ಟಕ್ಕನುಗುಣವಾಗಿ ಸಮ್ಮರ್ ಸ್ಕೂಲ್ ಇನ್ ಇಂಗ್ಲಿಷ್, ವಿಭಿನ್ನ ವೃತ್ತಿಪರ ಭಾಷಾ ಸಾಮರ್ಥ್ಯ ವೃದ್ಧಿಗೆ ಮಾರ್ಗದರ್ಶನ - ತರಬೇತಿ, ಪರಿಣಾಮಕಾರಿ ಸಂವಹನ, ಸೃಜನಶೀಲ ಲೇಖನ ಕಲೆ- ಇತ್ಯಾದಿ ತರಬೇತಿಗಳನ್ನು ನೀಡಿದರು. ಅನೇಕ ಪತ್ರಿಕೆಗಳಲ್ಲಿ ಅವರ ಲೇಖನ ಪ್ರಕಟವಾಗಿವೆ. **'ದಿ ಪ್ರೊಬ್ಲೆಮ್ಸ್ ಆಂಡ್ ಪ್ರೊಸ್‌ಪೆಕ್ಟ್ಸ್ ಆಫ್ ಅವರ್ ಎಜ್ಯುಕೇಶನ್'** ಎಂಬ ಪುಸ್ತಕವನ್ನು ಪ್ರಕಟಿಸಿದ್ದಾರೆ. ಡಾ. ಗೌಡರ ಶೈಕ್ಷಣಿಕ ವಿಚಾರಗಳು ಪ್ರಸಕ್ತ ಶಿಕ್ಷಣ ವ್ಯವಸ್ಥೆಯ ಸುಧಾರಣೆಗೆ ಅತಿ ಅಗತ್ಯ ಎಂಬುದಾಗಿ ಡಾ. ಶಿವರಾಮ ಕಾರಂತರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಅವರು ಸ್ವ-ಇಚ್ಛೆಯಿಂದ ಡಾ. ಗೌಡರ ಪುಸ್ತಕವನ್ನು ಕನ್ನಡಕ್ಕೆ ಭಾಷಾಂತರಿಸಿದರು. ಡಾ. ಗೌಡರ ಇನ್ನೊಂದು ಕೃತಿ 'Language for Doctors'. ಸಾಕಷ್ಟು ವಿದ್ವತ್ ಮತ್ತು ಪಾಂಡಿತ್ಯವುಳ್ಳ ಡಾ. ಗೌಡರನ್ನು ಗೌಡ ಸಮುದಾಯ ಸಮರ್ಥವಾಗಿ ಬಳಸಿಕೊಂಡಲ್ಲಿ ಮುಂದಿನ ಜನಾಂಗಕ್ಕೆ ಅವರು ದಾರಿದೀಪವಾಗಬಲ್ಲರು.

ವೃತ್ತಿಯಲ್ಲಿ ಇಂಜಿನಿಯರ್ ಆಗಿರುವ ಬಂಟ್ವಾಳ ತಾಲೂಕಿನ ಕನ್ಯಾನ ಗ್ರಾಮದ ಕಾಣೆಚ್ಚಾರಿನ ಶ್ರೀ ಕೆ. ಸಂಕಪ್ಪ ಗೌಡ ಅವರು 'ಪೂಸುತ' ಎಂಬ ಕಾವ್ಯನಾಮದಿಂದ ನಾಲ್ಕು ಕವನ ಸಂಕಲವನ್ನು ರಚಿಸಿ ಪ್ರಕಟಿಸಿರುತ್ತಾರೆ. **ಧ್ರುವತಾರೆ, ಸೊಗಸು, ಕಾಲಶೀಲ, ಭಾರತೀಯನೆ** ಎದ್ದೇಳು ಕಾವ್ಯ ಮಾತ್ರ ವಲ್ಲದೆ ಲೇಖನವನ್ನು ಬರೆಯುತ್ತಿರುವ ಶ್ರೀಯುತ ಕಾಣೆಚ್ಚಾರು ಅವರು ಅನೇಕ ತಾಂತ್ರಿಕ ವಿಚಾರಗಳ ಬಗ್ಗೆ ಅನೇಕ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ.

ಹಳೆತಲೆಮಾರಿನ ಗೌಡ ಸಾಹಿತಿಗಳಲ್ಲಿ ಶ್ರೀ ಅಡ್ಡಂಗಾಯ ಎಲ್ಯಣ್ಣ ಗೌಡರು ಒಬ್ಬರು. ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದುಕೊಂಡು ಸಾಹಿತ್ಯದ ಗೀಳನ್ನು ಹಚ್ಚಿಕೊಂಡವರು. ಗೌಡ ಭಾಷೆಯ ಬಗ್ಗೆ ಅಪಾರ ಕಾಳಜಿ ಇದ್ದ ಇವರು ಗೌಡ ಕನ್ನಡದಲ್ಲಿ ಹಲವಾರು ಕವನ ರಚಿಸಿದ್ದಾರೆ. ಜಾನಪದ ಅನುಭವ ಹೊಂದಿದ ಶ್ರೀಯುತರು ಮುಂಡೆಕೋಲು, ಅಜ್ಜಾವರ ಗ್ರಾಮಗಳಲ್ಲಿ ಸಿದ್ದವೇಷ ತಂಡಗಳನ್ನು ರಚಿಸಿ ನಿರ್ದೇಶಿಸಿದರು. ಸ್ವಂತಿಕಾ ಸಾಹಿತ್ಯ ಬಳಗದ ಅಧ್ಯಕ್ಷರಾಗಿ ಹಲವು ಕೃತಿಗಳ ಪ್ರಕಟಣೆ ಕಾರಣರಾಗಿದ್ದಾರೆ.

ಕಿರಣ ಕಾವ್ಯನಾಮದಿಂದ ಬರೆಯುತ್ತಿರುವ ಕುತ್ಯಾಳ ನಾಗಪ್ಪ ಗೌಡರು ಸುಳ್ಯ ತಾಲೂಕಿನ ಕನಕಮಜಲಿನವರು. ಬಾಲ್ಯದಿಂದಲೇ ಸಾಹಿತ್ಯ ಆಸಕ್ತಿಯನ್ನು ಬೆಳೆಸಿಕೊಂಡವರು. ಒಂಭತ್ತನೆಯ

ತರಗತಿಯಲ್ಲಿ ಇವರ ಮೊದಲ ಕವನ 'ಇರುವೆ' ಪ್ರಕಟವಾಯಿತು. 'ವಿಜಯ ಮಾಲ' ಮತ್ತು 'ನಗುವ ನಂದನ' ಪತ್ರಿಕೆಗಳಲ್ಲಿ ಕಿರಣರ ಕಥೆ ಕವನಗಳು ಬೆಳಕು ಕಂಡಿವೆ. ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ ಡಾ. ಚಿದಾನಂದ ಕೊಳಂಬೆ ಇವರ ಸಹಪಾಠಿಯಾಗಿ ಸಮಾನ ಆಸಕ್ತಿ ಹೊಂದಿದ್ದವರಾಗಿದ್ದರು. ರಾಶಿಯವರ ಕೊರವಂಜಿ ಪತ್ರಿಕೆಯಲ್ಲಿ ಇವರ ಲೇಖನ ಪ್ರಕಟವಾಗಿದೆ. ಕಿರಣದ ಮೊದಲ ಕವನ ಸಂಕಲನ ಒಳದನಿ ಪ್ರಕಟವಾಯಿತು. ಪರಸ್ಪರ, ಲಬ್ಬ ಇವರ ಇತರ ಕವನ ಸಂಕಲನಗಳು. ನೆಲ, ಜಲ, ಹಕ್ಕಿ, ಮರಗಿಡ, ಭೂಮಿ, ಭಾನು - ಪ್ರಕೃತಿಯ ಸಮಗ್ರ ವಿವರಗಳನ್ನು ಸಂಕ್ಷಿಪ್ತವಾಗಿ, ಆಪ್ತವಾಗಿ ಲಯಬದ್ಧವಾಗಿ ಬರೆಯುವ ಕಿರಣದ ಭಾಷೆಯಲ್ಲಿ ನವೋದಯ ಪರಂಪರೆಯ ಸೊಗಸು. ಭಾವನೆಯಲ್ಲಿ ನವ್ಯ ಪಂಥದ ಸೊಗಡನ್ನು ಕಾಣಬಹುದು. ಇವರ ಲೇಖನಗಳ ಸಂಗ್ರಹ 'ನೋಟ'. ಇವರ ಐದನೆಯ ಕೃತಿ ಕಥನ ಕವನಗಳ ಸಂಕಲನ ಅಟ್ಟದಲ್ಲೊಂದು ರಾತ್ರಿ ಕೃತಿಯನ್ನು ನವಸಾಕ್ಷರರಿಗೆ ಅರ್ಪಿಸಿದ್ದಾರೆ. ನವಸಾಕ್ಷರರನ್ನು ಗಮನದಲ್ಲಿರಿಸಿ ದೊಡ್ಡ ಅಕ್ಷರಗಳಲ್ಲಿ ಈ ಸಂಕಲನವನ್ನು ಪ್ರಕಟಿಸಿದ್ದಾರೆ.

ಕಿರಣರು ಅನುವಾದ, ಲೇಖನಗಳನ್ನು ಬರೆದಿರುತ್ತಾರೆ. ಸ್ಪಂದನ ಸಾಹಿತ್ಯ ಬಳಗದ ಅಧ್ಯಕ್ಷರಾಗಿ ಹಲವು ಪುಸ್ತಕಗಳನ್ನು ಹೊರತಂದಿದ್ದಾರೆ. ತಮ್ಮ ಸಾಹಿತ್ಯ ಸಾಧನೆಗಾಗಿ ದ.ಕ. ಜಿಲ್ಲಾ ಹನ್ನೆರಡನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿತರಾಗಿದ್ದಾರೆ. ಸುಳ್ಯ ತಾಲೂಕು ಏಳನೆಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದಾರೆ.

ಕಿರಣರ ಸಮಕಾಲೀನರಾಗಿರುವ ಡಾ. ಚಿದಾನಂದ ಕೊಳಂಬೆ ಬಾಲ್ಯದಿಂದಲೇ ಸಾಹಿತ್ಯ ಕೃಷಿ ಆರಂಭಿಸಿದ್ದರು. ನಮ್ಮ ಅನೇಕ ಸಾಹಿತಿಗಳಿಗೆ, ಬರೆಹಗಾರರಿಗೆ ದೊರೆಯದಿದ್ದ ಬರವಣಿಗೆ ಸಾಹಿತ್ಯ ಪರಂಪರೆ ಡಾ. ಚಿದಾನಂದರಿಗೆ ದಕ್ಕಿದೆ. ಅಧ್ಯಯನ, ಕಥೆ, ಕವನ, ಹಾಸ್ಯ ಲೇಖನದಲ್ಲಿ ಆಸಕ್ತಿಯನ್ನು ಬೆಳೆಸಿಕೊಂಡರು. ತಮ್ಮ ತಂದೆಯವರ ಸೂಚನೆಯಂತೆ ವಿಜ್ಞಾನ ಕ್ಷೇತ್ರದಲ್ಲಿ ಸಾಹಿತ್ಯ ರಚನೆ ಆರಂಭಿಸಿದರು. ಇಂಜಿನಿಯರಿಂಗ್ ಗೀತೆಗಳು, ವಿದ್ಯುಚ್ಛಕ್ತಿ, ವೈರ್‌ಮ್ಯಾನ್, ವಿಜ್ಞಾನ ವಚನಗಳು, ಪತ್ತೆದಾರಿ ಪದ್ಯಗಳು, ಇಂಜಿನಿಯರಿಂಗ್ ಲಿರಿಕ್ಸ್, ವಿಜ್ಞಾನ ಸಾಹಿತ್ಯ ಎರಡೂ ಕ್ಷೇತ್ರಗಳಲ್ಲು ಸಾಧನೆಗೈದಿದ್ದಾರೆ. ಮಕ್ಕಳಿಗೆ ಸಂಬಂಧಿಸಿದಂತೆ ಬರೆದ ಪುಟಾಣಿಗಳಿಗೆ ವಿಜ್ಞಾನ ಪದ್ಯಗಳು ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ ಬಂದಿರುವುದು.

ಬೆಂಗಳೂರಿನ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್‌ನಿಂದ ಪಿ.ಎಚ್.ಡಿ ಪದವಿ. ಫ್ರಾನ್ಸ್ ದೇಶಕ್ಕೆ ಸಂದರ್ಶಕ ಪ್ರಾಧ್ಯಾಪಕರಾಗಿ ತೆರಳಿ ಉಪನ್ಯಾಸ ನೀಡಿದ್ದಾರೆ. ಕಂಪ್ಯೂಟರ್ ವಿಜ್ಞಾನದ ಹಲವು ನೂರಕ್ಕಿಂತಲೂ ಹೆಚ್ಚು ಇವರ ಸಂಶೋಧನಾತ್ಮಕ ಲೇಖನಗಳು ಪ್ರಕಟವಾಗಿವೆ. ದ.ಕ. ಜಿಲ್ಲೆಯ ಏಳನೆಯ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿತರಾಗಿದ್ದಾರೆ. ಗುತ್ತಿಗಾರಿನಲ್ಲಿ ನಡೆದ ಸುಳ್ಯ ತಾಲೂಕು ಹತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು. ಡಾ. ಚಿದಾನಂದ ಕೊಳಂಬೆಯವರು ಕುವೆಂಪು ವಿಶ್ವವಿದ್ಯಾನಿಲಯದ ಗೌರವಾನ್ವಿತ ಉಪಕುಲಪತಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಎರಡನೆ ತಲೆಮಾರಿನವರೆಂದು ಹೇಳಬಹುದಾದ ಇನ್ನೊಂದು ಹೆಸರು. ಡಾ. ಕೆ.ವಿ. ವೆಂಕಟ್ರಮಣ ಅವರದು. ಇವರ ತಂದೆ ಶ್ರೀ ಪಾಡ್ಯಪ್ಪ ಗೌಡರು ಅಕ್ಷರ ಪರಂಪರೆಯುಳ್ಳವರಾಗಿದ್ದರು. ಡಾ. ಕೆ.ವಿ. ವೆಂಕಟ್ರಮಣ ಗೌಡರು ಬ್ಯಾಂಕ್ ಅಧಿಕಾರಿಯಾಗಿದ್ದರೂ ಅವರ ಪ್ರಸಿದ್ಧಿಯ ಕ್ಷೇತ್ರ ಆಂಗ್ಲ ಸಾಹಿತ್ಯ. ಎಗನಿ ಆಂಡ್ ಎಕ್ಸ್ಟಸಿ ರಿಪ್ಪಲ್ಸ್ ಆಫ್ ಚೇಂಜ್, ಡಿವೈನ್ ಪಾತ್‌ವೇಸ್ ಹಾಗೂ ರಿಫ್ಲೆಕ್ಷನ್ಸ್ ಇವು ಭಾರತದಲ್ಲಿ ಪ್ರಕಟಗೊಂಡರೆ 'ವೇಲ್ಯು ಆಫ್ ಮಿಸ್ಟರಿ' ಹಾಗೂ ರಿಫ್ರೆಸಿಂಗ್ ಬ್ರೀಝ್ ಕಾವ್ಯ ಕೃತಿಗಳು ಕೆನಡಾದ ಪ್ಲೋಮನ್ ಸಂಸ್ಥೆಯಿಂದ ಪ್ರಕಟವಾಗಿವೆ. ಕಾಲೇಜು ದಿನಗಳಿಂದಲೇ ಇಂಗ್ಲಿಷ್‌ನಲ್ಲಿಯೇ ಕವಿತೆ ಬರೆಯುವುದನ್ನು ರೂಢಿ ಮಾಡಿಕೊಂಡವರು. ಅವರ ಕವನದ ವಸ್ತುಗಳು ಮುಖ್ಯವಾಗಿ ಪ್ರಕೃತಿ, ಮನುಷ್ಯ, ದೇವರು, ಧರ್ಮ ಇತ್ಯಾದಿ.

ಮದರಾಸು, ಬ್ಯಾಂಕಾಕುಗಳಲ್ಲಿ ನಡೆದ ವಿಶ್ವಕವಿ ಸಮ್ಮೇಳನದಲ್ಲಿ ಭಾರತವನ್ನು ಪ್ರತಿನಿಧಿಸಿದ್ದಾರೆ. ಇಂಗ್ಲೆಂಡ್ ಮತ್ತು ಅಮೆರಿಕಾದಲ್ಲಿ ನಡೆದ ವಿಶ್ವ ಕನ್ನಡ ಸಮಾವೇಶದಲ್ಲಿ ಕರ್ನಾಟಕ ಸಾಂಸ್ಕೃತಿಕ ತಂಡದ ಪ್ರತಿನಿಧಿಯಾಗಿ ಭಾಗವಹಿಸಿದ ಹೆಗ್ಗಳಿಕೆ ಇವರದು. ವರ್ಲ್ಡ್ ಅಕಾಡೆಮಿ ಆರ್ಟ್ಸ್ ಆಂಡ್ ಕಲ್ಚರ್ ಯು.ಎಸ್.ಎ. ವತಿಯಿಂದ ಇವರಿಗೆ ಗೌರವ ಡಾಕ್ಟರೇಟ್ ಪದವಿ ಸಂದಿದೆ. ಇವರ ಕವನಗಳು ಫ್ರೆಂಚ್, ಕೊರಿಯಾ, ಥಾಯ್ ಭಾಷೆಗಳಿಗೆ ಅನುವಾದಗೊಂಡಿವೆ. ಖ್ಯಾತ ದಲಿತಕವಿ ಸರಜೂ ಕಾಟ್ಕರ್ ಅವರ ಕವನ ಸಂಕಲಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾರೆ. ''ಮೈಕಲ್ ಮಧುಸೂದನ ಎವಾರ್ಡ್ ಫೋರ್ ಪೋಯಟ್ರಿ'' ಪ್ರಶಸ್ತಿ ಇವರಿಗೆ ಸಂದಿದೆ.

ಅತ್ಯಂತ ಕಿರಿಯ ವಯಸ್ಸಿನಲ್ಲಿ ಅಂತರಾಷ್ಟ್ರೀಯ ವಲಯದಲ್ಲಿ ಸಂಶೋಧಕರಾಗಿ, ಜಾನಪದ ತಜ್ಞರಾಗಿ, ಯಶಸ್ವಿಯಾಗಿ ಭಾಗವಹಿಸಿದ ಕೀರ್ತಿ ಡಾ. ಕೆ. ಚಿನ್ನಪ್ಪ ಗೌಡ ಅವರದು. ಆಳವಾದ ಅಧ್ಯಯನ ಮತ್ತು ನಿರಂತರ ಪರಿಶ್ರಮಕ್ಕೆ ಚಿನ್ನಪ್ಪ ಗೌಡ ಇನ್ನೊಂದು ಹೆಸರು. ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ವಿಭಾಗದಲ್ಲಿ ರೀಡರ್ ಆಗಿರುವ ಡಾ.ಕೆ. ಚಿನ್ನಪ್ಪ ಗೌಡರು ಬಂಟ್ವಾಳ ತಾಲೂಕಿನ ವಿಟ್ಲದವರು. ಮದರಾಸು ವಿ.ವಿ.ಯ ಎಂ.ಎ. ಪದವಿ, ಹಾಗೂ ತಮಿಳಿನ ಸರ್ಟಿಫಿಕೇಟ್ ಕೋರ್ಸನ್ನು ಮದರಾಸು ವಿ.ವಿ.ಯಿಂದ ಪಡೆದಿರುತ್ತಾರೆ. ಸಂಶೋಧಕರಾಗಿ, ಮಾರ್ಗದರ್ಶಕರಾಗಿ ಮೂರು ಮಂದಿಗೆ ಯಶಸ್ವೀ ಪಿ.ಎಚ್.ಡಿ. ಹಾಗೂ ಐದು ಮಂದಿಗೆ ಯಶಸ್ವಿ ಎಂ.ಪಿಲ್. ಮಾರ್ಗದರ್ಶನ ಮಾಡಿರುತ್ತಾರೆ. ಪ್ರಕೃತ ಇವರ ಮಾರ್ಗದರ್ಶನದಲ್ಲಿ ಐದು ಮಂದಿ ಸಂಶೋಧನಾ ವಿದ್ಯಾರ್ಥಿಗಳು ಸಂಶೋಧನೆಯಲ್ಲಿ ನಿರತರಾಗಿದ್ದಾರೆ. ೨೪ ವರ್ಷಗಳ ಬೋಧನಾನುಭವ ಹಾಗೂ ಹದಿನೈದು ವರುಷಗಳಿಂದ ತನ್ನನ್ನು ಸಂಶೋಧನೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಪ್ರಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯ, ಜಾನಪದ ವಿಜ್ಞಾನ, ಜನಾಂಗೀಯ ಮತ್ತು ಪ್ರಾದೇಶಿಕ ಅಧ್ಯಯನ, ತುಳು ಮೌಖಿಕ ಮಹಾಕಾವ್ಯಗಳ ಅಧ್ಯಯನ ಅವರ ಆಸಕ್ತಿಯ ಕ್ಷೇತ್ರಗಳು.

ಇವರ ಪ್ರಕಟಿತ ಪುಸ್ತಕಗಳು ಭೂತಾರಾಧನೆ: ಕೆಲವು ಅಧ್ಯಯನಗಳು, ಜಾಲಾಟ ಸಂಶೋಧನ ಲೇಖನಗಳ ಸಂಕಲನ. ತಮ್ಮದೇ ಪ್ರಕಾಶನ ಸಂಸ್ಥೆ ಮದಿಪು ಪ್ರಕಾಶನದಲ್ಲಿ ಭೂತಾರಾಧನೆ ಜಾನಪದೀಯ ಅಧ್ಯಯನ ಪಿ.ಎಚ್.ಡಿ. ಮಹಾಪ್ರಬಂಧ, ಬಿಳಿಮಲೆಯವರ ಕರಾವಳಿ ಜಾನಪದ

ಅಧ್ಯಯನ ಕೃತಿಗಳನ್ನು ಹೊರತಂದಿದ್ದಾರೆ.

ಡಾ. ಚಿನ್ನಪ್ಪ ಗೌಡರು ದಕ್ಷಿಣ ಕನ್ನಡ ಜಿಲ್ಲೆಯ ಕೃಷಿಯತ್ತುಗಳು, ಪನಿಯಾರ, ರತ್ನ ಮಾನಸ, ಸೇರಿಗೆ ಮೊದಲಾದ ಕೃತಿಗಳನ್ನು ಸಂಪಾದಿಸಿದ್ದಾರೆ. ಪ್ರಸಾರಾಂಗ ಮಂಗಳೂರು ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸ ಮಾಲಿಕೆ, ಪ್ರಕಟಣೆಗಳ ಪ್ರಧಾನ ಸಂಪಾದಕರಾಗಿ, ಇಪ್ಪತ್ತೇಳು ಕೃತಿಗಳನ್ನು ಹೊರ ತಂದಿದ್ದಾರೆ. ಅದಲ್ಲದೆ ತುಳು ಸಿರಿ ಮಹಾಕಾವ್ಯ ಎರಡು ಸಂಪುಟಗಳನ್ನು ಇಂಗ್ಲಿಷ್‌ನಲ್ಲಿ ಹೊರತಂದಿದ್ದಾರೆ. (ಪ್ರೊ. ಲೌರಿ ಹಾಂಕೊ, ಪ್ರೊ. ವಿವೇಕ ರೈ, ಅನೆಲಿ ಹಾಂಕೊ ತಂಡದ ಇತರ ಸದಸ್ಯರು.) ಓರ್ವ ಸಂಶೋಧಕರಾಗಿರುವ ಚಿನ್ನಪ್ಪ ಗೌಡರ ಇಪ್ಪತ್ತೊಂಭತ್ತು ಸಂಶೋಧನ ಲೇಖನಗಳು ಕನ್ನಡದಲ್ಲೂ, ಹದಿನಾಲ್ಕು ಸಂಶೋಧನ ಲೇಖನ ಇಂಗ್ಲಿಷ್‌ನಲ್ಲಿ ಪ್ರಕಟಗೊಂಡಿವೆ. ಸುಮಾರು ಹನ್ನೆರಡಕ್ಕೂ ಮಿಕ್ಕಿದ ರಾಷ್ಟ್ರೀಯ, ಅಂತರಾಷ್ಟ್ರೀಯ ವಿಚಾರಗೋಷ್ಠಿ ಮತ್ತು ಕಮ್ಮಟಗಳಲ್ಲಿ ಪಾಲ್ಗೊಂಡಿದ್ದಾರೆ. ಐವತ್ತೈದು ಜಿಲ್ಲಾ ಮತ್ತು ರಾಜ್ಯಮಟ್ಟದ ವಿಚಾರಸಂಕಿರಣ, ಸಮ್ಮೇಳನ, ಕಮ್ಮಟಗಳಲ್ಲಿ ಭಾಗವಹಿಸಿದ್ದಾರೆ. ಸಂಪನ್ಮೂಲ ವ್ಯಕ್ತಿಯಾಗಿ ಸುಮಾರು ಮೂವತ್ತು ಕಮ್ಮಟಗಳಲ್ಲಿ ಭಾಗವಹಿಸಿದ ಅನುಭವ, ಓರ್ವ ಸಾಹಿತ್ಯ ಸಂಶೋಧನಾ ವಿದ್ಯಾರ್ಥಿ ಮಾತ್ರವಲ್ಲ ಡಾ. ಕೆ. ಚಿನ್ನಪ್ಪ ಗೌಡರು ಅತ್ಯುತ್ತಮ ಸಂಘಟಕರೂ ಕೂಡ ಆಗಿದ್ದು ನಾಡಿನ ಹಲವಾರು ಪ್ರತಿಷ್ಠಿತ ಸಂಘ ಸಂಸ್ಥೆಗಳ ಸದಸ್ಯರಾಗಿ ಜನಪ್ರಿಯರಾಗಿದ್ದಾರೆ. ಶ್ರೀಯುತರ ಅನೇಕ ಬರವಣಿಗೆಗಳು ಕನ್ನಡದ ಪ್ರಸಿದ್ಧ ಪತ್ರಿಕೆಗಳಲ್ಲಿ ಪ್ರಕಟವಾಗಿ ಓದುಗರ ಗಮನ ಸೆಳೆದಿವೆ. ಆಕಾಶವಾಣಿಯಲ್ಲಿ ಹಲವು ಬಾರಿ ಭಾಷಣ, ಚರ್ಚೆ ಸಂದರ್ಶನಗಳಲ್ಲಿ ಡಾ. ಚಿನ್ನಪ್ಪ ಗೌಡರು ಭಾಗವಹಿಸಿದ್ದಾರೆ.

ಅಪಾರ ಕ್ಷೇತ್ರಕಾರ್ಯದ ಅನುಭವಿ ಯುವ ಸಂಶೋಧಕ ಡಾ. ಚಿನ್ನಪ್ಪ ಗೌಡರ ಮನಸ್ಸಿನಲ್ಲಿ ಕರಾವಳಿಯ ಧಾರ್ಮಿಕ ರಂಗಭೂಮಿ - ಪದಕೋಶ ರಚನೆ, ತುಳು ಜನಪದ ಕತೆಗಳ ಎರಡು ಸಂಪುಟಗಳು ಇನ್ನು ಅನೇಕ ಯೋಜನೆಗಳಿದ್ದು ಅವು ಕಾರ್ಯರೂಪವನ್ನು ಹೊಂದಲು ಕಾದಿವೆ.

ಡಾ. ಚಿನ್ನಪ್ಪ ಗೌಡರ ಗುರುತರವಾದ ಸಾಧನೆ ಈಗಾಗಲೇ ಅನೇಕ ರೀತಿಯಲ್ಲಿ ಗುರುತಿಸಲ್ಪಟ್ಟಿದೆ. ೧೯೮೬ರಲ್ಲಿ ಕರ್ನಾಟಕ ರಾಜ್ಯ ಜೇಸಿಸ್ ಇವರಿಗೆ ಅತ್ಯುತ್ತಮ ಯುವ ಪ್ರಶಸ್ತಿಯನ್ನು ನೀಡಿ ಗೌರವಿಸಿತು. ಇವರ ದಕ್ಷಿಣ ಕನ್ನಡ ಜಿಲ್ಲೆಯ ಕೃಷಿಯತ್ತುಗಳು ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಭೂತಾರಾಧನೆ ಕೆಲವು ಅಧ್ಯಯನಗಳು ಕೃತಿಗೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ಅದಲ್ಲದೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಸಂಶೋಧನಾ ಕೃತಿ ಪ್ರಕಟಣೆಗಾಗಿ ಪ್ರೋತ್ಸಾಹ ಧನವನ್ನು ನೀಡಿ ಗೌರವಿಸಿದೆ. ಇವರ ಭೂತಾರಾಧನೆ ಜಾನಪದೀಯ ಅಧ್ಯಯನ ಕೃತಿಗೆ ಡಾ. ಶಿವರಾಮ ಕಾರಂತರ ಪುರಸ್ಕಾರ ಲಭಿಸಿದೆ. ಸಂದೇಶ ಪ್ರತಿಷ್ಠಾನ ಪ್ರಶಸ್ತಿಯನ್ನು ಇವರು ತಮ್ಮದಾಗಿಸಿಕೊಂಡಿದ್ದಾರೆ. ಜಾನಪದ ವಿಷಯದಲ್ಲಿ ಅಧಿಕಾರವಾಣಿಯಿಂದ ಮಾತನಾಡ ಬಲ್ಲ ಶ್ರೀಯುತರು ಫಿನ್ಲೆಂಡ್, ಜರ್ಮನ್, ಸ್ವೀಡನ್, ಜಪಾನ್ ದೇಶಗಳಿಗೆ ಕೆಲವು ಬಾರಿ ಭೇಟಿಯಿತ್ತು ಸಂಶೋಧನೆ ಹಾಗೂ ಉಪನ್ಯಾಸಗಳಲ್ಲಿ ಭಾಗವಹಿಸಿದ್ದಾರೆ. ಸಾಹಿತ್ಯಕ್ಕೆ ಕ್ಷೇತ್ರಕ್ಕೆ ಅದರಲ್ಲೂ ಜಾನಪದ ಕ್ಷೇತ್ರಕ್ಕೆ ಗೌಡ ಜನಾಂಗದ ಅತ್ಯಮೂಲ್ಯ ಕೊಡುಗೆಯಾಗಿದ್ದಾರೆ.

ಗೌಡ ಜನಾಂಗದಿಂದ ಜಾನಪದ ಜಗತ್ತಿಗೆ ತೆರೆದುಕೊಂಡ ಇನ್ನೊಂದು ಪ್ರತಿಭೆ ಡಾ. ಪುರುಷೋತ್ತಮ ಬಿಳಿಮಲೆ. ಸುಳ್ಯದ ಕುತ್ಕುಂಜ ಗ್ರಾಮದಲ್ಲಿ ಜನಿಸಿದ ಶ್ರೀ ಬಿಳಿಮಲೆಯವರು ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ ಪ್ರಥಮ ರ್‍ಯಾಂಕಿನೊಂದಿಗೆ ತೇರ್ಗಡೆ ಯಾದವರು. ಸುಳ್ಯ ಪರಿಸರದ ಗೌಡ ಜನಾಂಗ - ಸಾಂಸ್ಕೃತಿಕ ಅಧ್ಯಯನ ನಡೆಸಿದ ಇವರಿಗೆ ಮಂಗಳೂರು ವಿಶ್ವವಿದ್ಯಾನಿಲಯ ೧೯೮೫ರಲ್ಲಿ ಡಾಕ್ಟರೇಟ್ ಪದವಿಯನ್ನು ನೀಡಿದೆ. ಸುಮಾರು ಐದಕ್ಕೂ ಹೆಚ್ಚು ಪಿ.ಎಚ್.ಡಿ ಮತ್ತು ಆರು ಜನ ಎಂ.ಫಿಲ್ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದ್ದಾರೆ.

ಸ್ವತಃ ಯಕ್ಷಗಾನ ಕಲಾವಿದರಾದ ಇವರು ತಮ್ಮ ತಂಡದೊಂದಿಗೆ ಜಪಾನ್‌ನಲ್ಲಿ ಪ್ರದರ್ಶನ ನೀಡಿದ್ದಾರೆ. ಗ್ರಾಮದೇವತೆಗಳನ್ನು ಕುರಿತು ಅಧ್ಯಯನ ನಡೆಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ, ಅಧ್ಯಯನಾಂಗದ ನಿರ್ದೇಶಕರಾಗಿ, ಪ್ರಸಾರಾಂಗದ ನಿರ್ದೇಶಕರಾಗಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಸದಸ್ಯರಾಗಿ ಸೇವೆ ಸಲ್ಲಿಸಿರುತ್ತಾರೆ. ೧೯೯೫ ೧೯೯೮ರ ವರೆಗೆ ಫೈನ್ ಆರ್ಟ್ಸ್ ಫ್ಯಾಕಲ್ಟಿಯ ಡೀನ್ ಆಗಿರುತ್ತಾರೆ. ಇದೇ ವಿಶ್ವವಿದ್ಯಾನಿಲಯದ ಸಿಂಡಿಕೇಟ್ ಸದಸ್ಯರಾಗಿ, ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಸದಸ್ಯರಾಗಿ ವಿವಿಧ ಜವಾಬ್ದಾರಿಯನ್ನೂ ನಿರ್ವಹಿಸಿದ್ದಾರೆ.

ಬಿಳಿಮಲೆಯವರು ಕರಾವಳಿ ಜಾನಪದ, ಶಿಷ್ಟ ಪರಿಶಿಷ್ಟ, ಕೂಡುಕಟ್ಟು, ಹಂಪಿ ಜಾನಪದ, ಮೊಕಂಡುಳಿಕ್ಕೆಯುತ್ತು ಮೊದಲಾದ ಒಂಬತ್ತು ಸಂಶೋಧನಾ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಹಾಗೂ ಎಂಟು ಕೃತಿಗಳನ್ನು ಸಂಪಾದಿಸಿದ್ದಾರೆ. ಕೂಡುಕಟ್ಟು ಮತ್ತು ಕರಾವಳಿ ಜಾನಪದ ಕೃತಿಯಲ್ಲಿ ಗೌಡ ಜನಾಂಗದ ಸಂಸ್ಕೃತಿಯ ವಿಶ್ಲೇಷಣೆಯಿದೆ. ಸುಮಾರು ಐವತ್ತಕ್ಕೂ ಹೆಚ್ಚು ವಿವಿಧ ವಸ್ತು ವಿಚಾರ ಕುರಿತಾದ ಲೇಖನಗಳು ಪ್ರಕಟಗೊಂಡಿವೆ. ಡಾ. ಬಿಳಿಮಲೆಯವರಿಗೆ ತಮ್ಮ ಸಾಧನೆಗಾಗಿ ಡಾ. ಗುಂಡ್ಮಿ ಚಂದ್ರಶೇಖರ ಐತಾಳ ಪ್ರಶಸ್ತಿ, ಆರ್ಯಭಟ ಪ್ರಶಸ್ತಿ, ಬಿ.ಎಚ್. ಶ್ರೀಧರ ಪ್ರಶಸ್ತಿ ಲಭಿಸಿವೆ. ದ.ಕ.ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನಿತರಾಗಿದ್ದಾರೆ. ಪ್ರಸ್ತುತ ಇವರು ದೆಹಲಿಯ AIISಯಲ್ಲಿ ನಿರ್ದೇಶಕರಾಗಿ ದುಡಿಯುತ್ತಿದ್ದಾರೆ.

ಗೌಡ ಜನಾಂಗದ ವಿಮರ್ಶಕರಲ್ಲಿ ಶ್ರೀ ಶಿವಣ್ಣ ನೆಲಮನೆಯವರ ಹೆಸರು ಮುಂಚೂಣಿಯಲ್ಲಿದೆ. ವಸ್ತುನಿಷ್ಠತೆ ಮತ್ತು ಸಮಾಜಮುಖಿ ದೃಷ್ಟಿಕೋನ, ಪದಗಳ ಸೂಕ್ತ ಬಳಕೆ ಇವರ ವಿಶಿಷ್ಟತೆಗಳು. 'ಮಂಡ್ಯ ಜಿಲ್ಲೆಯ ವ್ಯವಸಾಯ ಜಾನಪದ', 'ದಾನ ಚಿಂತಾಮಣಿ ಅತಿಮಬ್ಬೆ ಒಂದು ಸಾಂಸ್ಕೃತಿಕ ಅಧ್ಯಯನ' ಎಂಬ ಸಂಶೋಧನೆಗಳನ್ನು ನಡೆಸಿರುವ ಇವರು ಅನೇಕ ವಿಚಾರಸಂಕಿರಣಗಳಲ್ಲಿ ಪ್ರಬಂಧಗಳನ್ನು ಮಂಡಿಸಿದ್ದಾರೆ. ವಿವಿಧ ಪತ್ರಿಕೆಗಳಲ್ಲಿ ಲೇಖನ ಪ್ರಕಟಿಸಿದ್ದಾರೆ. ಆಕಾಶವಾಣಿಯಲ್ಲಿ ಭಾಷಣಗಳನ್ನು ಬಿತ್ತರಿಸಿದ್ದಲ್ಲದೆ ಅನೇಕ ಕಿರುಗತೆಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಿರುವ ಇವರು ಹಲವು ಕೃತಿಗಳಿಗೆ ಮುನ್ನುಡಿ ಮತ್ತು ಹಿನ್ನುಡಿ ಬರೆದಿರುತ್ತಾರೆ. ಸಾಹಿತ್ಯ ಸೇವೆಗಾಗಿ ಕುರುಂಜಿ ವೆಂಕಟ್ರಮಣ ಗೌಡ ಪ್ರತಿಭಾ ಪ್ರಶಸ್ತಿ ಹಾಗೂ ಮೈಸೂರು ಮಿತ್ರ ಪತ್ರಿಕಾ ಬಳಗದ ಪುರಸ್ಕಾರ

ದೊರಕಿದೆ.

ನೆಹರೂ ಸ್ಮಾರಕ ಮಹಾವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕರಾಗಿರುವ ಶ್ರೀ ಪೂವಪ್ಪ ಕಣಿಯೂರು ಅವರು ತಾಲೂಕು ಮತ್ತು ಜಿಲ್ಲಾ ಮಟ್ಟದ ಸಾಹಿತ್ಯ ಸಮ್ಮೇಳನಗಳ ಕವಿ, ಸಾಹಿತ್ಯಗೋಷ್ಠಿಗಳಲ್ಲಿ ಭಾಗವಹಿಸಿದ್ದು ಪತ್ರಿಕೆಗಳಲ್ಲಿ ಹಾಗೂ ಸ್ಮರಣಸಂಚಿಕೆಗಳಲ್ಲಿ ಅನೇಕ ಲೇಖನಗಳನ್ನು ಪ್ರಕಟಿಸಿದ್ದಾರೆ. ಸುಳ್ಯದ ಸ್ವಂತಿಕಾ ಬಳಗದ ಕಾರ್ಯದರ್ಶಿಯಾಗಿ, ಕಾಲೇಜಿನ ಕನ್ನಡ ಸಂಘದ ಸಂಚಾಲಕರಾಗಿ ಅನೇಕ ಸಾಹಿತ್ಯ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸಿದ್ದಾರೆ. ತುಳು ಸಾಹಿತ್ಯದಲ್ಲಿಯೂ ದುಡಿದಿರುವ ಇವರ ಭಾಷಣಗಳು ಮಂಗಳೂರು ಆಕಾಶವಾಣಿಯಿಂದ ಪ್ರಸಾರವಾಗಿವೆ. ಪತ್ರಕರ್ತರಾಗಿಯೂ ಅನುಭವಿಯಾಗಿದ್ದಾರೆ.

ಯು.ಸು.ಗೌ. ಗುತ್ತಿಗಾರು ಬೆಳ್ಳಾರೆ ಪದವಿಪೂರ್ವ ಕಾಲೇಜಿನಲ್ಲಿ ಆಂಗ್ಲ ಉಪನ್ಯಾಸಕ. ಯು. ಸುಬ್ರಾಯ ಗೌಡ ಗುತ್ತಿಗಾರು 'ಚಿಗುರು' ಕವನ ಸಂಕಲನ 'ದೃಶ್ಯ' ರೂಪಕಗಳ ಸಂಕಲನ ಕೃತಿಗಳಿಂದ ಸಾಹಿತ್ಯ ಕ್ಷೇತ್ರದಲ್ಲಿ ಪರಿಚಿತರಾದವರು. ಅದರೊಂದಿಗೆ ನಾಟಕ, ಯಕ್ಷಗಾನ, ಅಭಿನಯ, ವಿಮರ್ಶೆ, ಕಥೆ, ಹನಿಕವನ, ಚುಟುಕು ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಇವರ ಕೆಲವು ರೂಪಕಗಳು, ಲೇಖನಗಳು, ಕವನಗಳು ಆಕಾಶವಾಣಿಯಲ್ಲಿ ಬಿತ್ತರಗೊಂಡಿವೆ. ಸುಳ್ಯದಲ್ಲಿ ನಡೆದ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ಶ್ರೀ ಕುರುಂಜಿ ವೆಂಕಟ್ರಮಣ ಗೌಡ ಪುರಸ್ಕಾರವನ್ನು ಪಡೆದಿರುವುದು ಇಲ್ಲಿ ಸ್ಮರಣೀಯ. ಮೈಸೂರು ಚುಟುಕು ಸಾಹಿತ್ಯ ಸಮಿತಿ ನಡೆಸಿದ ರಾಜ್ಯಮಟ್ಟದ ಚುಟುಕು ಸ್ಪರ್ಧೆಯಲ್ಲಿ ಇವರು ಬಹುಮಾನಿತರಾಗಿದ್ದಾರೆ.

ಸುಳ್ಯ, ಪುತ್ತೂರು, ಬೆಳ್ತಂಗಡಿಯಲ್ಲಿ ಸ್ಥಳೀಯ ಪತ್ರಿಕೆಗಳನ್ನು ಆರಂಭಿಸಿದ ಗೌಡ ಜನಾಂಗದ ಪ್ರಪ್ರಥಮ ಪತ್ರಿಕೋದ್ಯಮಿ ಡಾ. ಯು.ಪಿ. ಶಿವಾನಂದ. ಗೌಡ ಜನಾಂಗದ ಯುವ ಪ್ರತಿಭೆಗಳು ಮುದ್ರಣ ಮಾಧ್ಯಮದಲ್ಲಿ ಕಣ್ಣು ತೆರೆಯಲು ಇವರು ಕಾರಣರಾಗಿದ್ದಾರೆ. ವೈದ್ಯಕೀಯ ಶಿಕ್ಷಣ ಪಡೆದರೂ ವೃತ್ತಿಯನ್ನು ಕೈ ಬಿಟ್ಟು ಪತ್ರಿಕಾರಂಗಕ್ಕೆ ಕಾಲಿರಿಸಿ ಇವರು ಯಶಸ್ವಿ ಪತ್ರಿಕೋದ್ಯಮಿ ಯಾಗಿದ್ದಾರೆ.

ಗೌಡರ ಕುಲಕಸುಬಾದ ಕೃಷಿ ವಿಜ್ಞಾನದಲ್ಲಿ ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾನಿಲಯದಲ್ಲಿ ಎ.ಕೆ. ಓಮಕರ ಸಂಶೋಧನೆ ನಡೆಸಿದ್ದಾರೆ. ಕೃಷಿ ವಿಜ್ಞಾನದ ಇತಿಹಾಸ, ಕೃಷಿ ತಂತ್ರಜ್ಞಾನಕ್ಕೆ ಸಂಬಂಧಿಸಿದ ಸುಮಾರು ೨೦ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಸಾಮಾಜಿಕ ನ್ಯಾಯ, ಮೀಸಲಾತಿ ಕುರಿತಾಗಿ ಹಲವಾರು ಲೇಖನಗಳು ಪ್ರಕಟವಾಗಿವೆ. ಜನಮನದ ಕಂದ್ರಪಾಡಿ ಇವರ ಮೊತ್ತಮೊದಲ ಪ್ರಕಟಿತ ಕೃತಿ. ಮಕ್ಕಳ ಹಕ್ಕುಗಳ ಬಗ್ಗೆ ಇವರು ಅನುವಾದಿಸಿರುವ ಕೃತಿ 'ಏಳಿ ಎದ್ದೇಳಿ ನಿಮ್ಮ ಹಕ್ಕುಗಳಿಗಾಗಿ ಏಳಿ' ಲಂಡನ್‌ನಿಂದ ಪ್ರಕಟವಾಗಿದೆ. ಸಾವಯವ ಕೃಷಿಕ ಚೇರ್ಕಾಡಿ ರಾಮಚಂದ್ರರಾಯ ಬದುಕು ಮತ್ತು ವಿಚಾರ, ಕಲ್ಮಶ ಮತ್ತು ವಿಷ್, ಕುರಿತು ಅಪಾರ ಜನಮೆಚ್ಚುಗೆ ಪಡೆದ ಮನೆಗೆ ಬಂದ ನೀಲಿಕುದುರೆ ಮತ್ತು ಎಸೆದು ನೋಡಿ, ಸುಟ್ಟು ನೋಡಿ ಕನ್ನಡ ಸಾಹಿತ್ಯ ಪರಿಷತ್ತು ಅಧ್ಯಕ್ಷರಾಗಿ, ಭಾರತದಲ್ಲೇ ಮೊದಲ ಬಾರಿ ನವಸಾಕ್ಷರರ ಅಧ್ಯಕ್ಷರಾಗಿ ಮೊದಲ

ಬಾರಿ ನವಸಾಕ್ಷರರ ಸಮ್ಮೇಳನವನ್ನು ಸಂಘಟಿಸಿದ ಕೀರ್ತಿ ಇವರದು. ಗುತ್ತಿಗಾರನಲ್ಲಿ ಗೌಡಯುವ ವೇದಿಕೆ ಆಶ್ರಯದಲ್ಲಿ ನಡೆದ ಗೌಡ ಕನ್ನಡ ಕವಿಗೋಷ್ಠಿ ಇವರ ಪರಿಕಲ್ಪನೆ.

ದ.ಕ ಜಿಲ್ಲೆಯ ಒಟ್ಟು ಸಾಹಿತ್ಯ ಕ್ಷೇತ್ರವನ್ನು ಗಮನಿಸಿದಾಗ ಕಾದಂಬರಿಗಳ ಸಂಖ್ಯೆ ತೀರಾ ಕಡಿಮೆ. ತೀರಾ ಇತ್ತೀಚೆಗೆ ಬರವಣಿಗೆಗೆ ತೊಡಗಿರುವ ತೇಜಕುಮಾರ್ ಅವರು **'ಹಿರಣ್ಯಗರ್ಭ'** **'ಮದಿರೆಸಿಶ್ಚಲ'** ಎಂಬ ಎರಡು ಪ್ರಮುಖ ಕಾದಂಬರಿಗಳನ್ನು ಬರೆದಿದ್ದಾರೆ. ಹಿರಣ್ಯಗರ್ಭ ಸ್ಪಂದನ ಸಾಹಿತ್ಯ ಪ್ರಶಸ್ತಿಯನ್ನು ಪಡೆದುಕೊಂಡಿದೆ. ಹಲವಾರು ಸಣ್ಣಕತೆಗಳು ಕವನಗಳು ವಿವಿಧ ಪತ್ರಿಕೆಗಳಲ್ಲಿ ಮತ್ತು ಸ್ಮರಣಸಂಚಿಕೆಗಳಲ್ಲಿ ಪ್ರಕಟವಾಗಿವೆ.

ಬೆಳ್ತಂಗಡಿಯ ಸಿಡ್ಲೆ ಕೃಷಿ ಕುಟುಂಬದಿಂದ ಬಂದ ಜಿತು ಸಿಡ್ಲೆಯವರು ಕಾಲೇಜು ದಿನಗಳಿಂದ ಲೇಖಕರಾಗಿ ಹೊರ ಹೊಮ್ಮಿದವರು. ಅವರ **'ಯಾರು ಕಾಣದ ಹಾದಿಯಲ್ಲಿ'** ಪ್ರಥಮ ಕವನ ಸಂಕಲನ. ದೀವಟಿಕೆ ಪತ್ರಿಕೆಯನ್ನು ಹುಟ್ಟುಹಾಕಿ ಮೂರು ವರುಷ ಮುನ್ನಡೆಸಿದರು. ಇವರ ಕಾದಂಬರಿ (ಹಸ್ತಪ್ರತಿ) **'ಬಾವಲಿಗೆ'** ತರಂಗ ಮತ್ತು ರಾಮಕ್ಕ ದತ್ತಿ ನಿಧಿಯವರು ನಡೆಸಿದ ಕಾದಂಬರಿ ಸ್ಪರ್ಧೆಯಲ್ಲಿ ಬಹುಮಾನ. ತುಳು ಕಾದಂಬರಿ **'ಮೂಜಂಜ ಆನಗ'**ಕ್ಕೆ ತುಳುಕೂಟ ಉಡುಪಿ ಮತ್ತು ತುಳುಕೂಟ ಮುಂಬೈ ಇವರು ಜಂಟಿಯಾಗಿ ನೀಡುವ 'ಎಸ್.ಯು. ಪಣಿಯಾಡಿ ಪ್ರಶಸ್ತಿ' ಹಾಗೂ ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿಯ ಪುಸ್ತಕ ಪ್ರಶಸ್ತಿ. ಇವರ **'ಸರ್ಪಸುತ್ತು'** ಕತೆ ಸಂಕ್ರಮಣ ಪ್ರಶಸ್ತಿಯನ್ನು ಪಡೆದುಕೊಂಡಿದೆ. ಆಂಗ್ಲ ಮತ್ತು ಕನ್ನಡ ಪತ್ರಿಕೆಗಳಲ್ಲಿ ಹಲವು ಬಿಡಿ ಲೇಖನಗಳು ಮತ್ತು ನುಡಿಚಿತ್ರಗಳು ಪ್ರಕಟವಾಗಿವೆ. **'ಸೋಗೆ ಗುಡಿಸಲ ಚಿಮಣಿ ದೀಪ'** ಇವರ ಅಪ್ರಕಟಿತ ಕೃತಿ. **'ಮೌನದ ಮಾತುಗಳು'** ಇವರ ಮೊದಲ ಕಥಾ ಸಂಕಲನ.

ಗೌಡ ಸಂಸ್ಕೃತಿಯನ್ನು ತಮ್ಮ ಕತೆಗಳಲ್ಲಿ ಪರಿಣಾಮಕಾರಿಯಾಗಿ ಬಳಸಿರುವ ಖ್ಯಾತಯುವ ಕತೆಗಾರ ಕೆ.ಆರ್. ವಿದ್ಯಾಧರ. ಮೊದಲ ಕಥಾಸಂಕಲನ **'ಮಜಲು'** ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದಿರುತ್ತಾರೆ. ನಾಟಕ ಕ್ಷೇತ್ರದಲ್ಲಿ ತಮ್ಮ ಆಸಕ್ತಿಯನ್ನು ಬೆಳೆಸಿಕೊಂಡಿರುವ ವಿದ್ಯಾಧರರು **'ಕೆದಂಬಾಡಿ ರಾಮಗೌಡ'** ನಾಟಕ ಬರೆದಿದ್ದಾರೆ. ಹದವಾಗಿ ಭಾಷೆಯನ್ನು ಬಳಸಿಕೊಳ್ಳುವ ರೀತಿ, ಗೌಡ ಸಂಸ್ಕೃತಿಯ ಸತ್ವ, ಕಲಾತ್ಮಕ ನಿರೂಪಣೆ ಇವರ ವಿಶೇಷ. ಇವರ ಕಥೆ, ಕವನ, ಲೇಖನಗಳು ಅನೇಕ ಪತ್ರಿಕೆಗಳಲ್ಲಿ, ಸ್ಮರಣ ಸಂಚಿಕೆಯಲ್ಲಿ ಪ್ರಕಟವಾಗಿವೆ.

ಸಾಹಿತ್ಯವಲಯದಲ್ಲಿ ಸಕ್ರಿಯವಾಗಿ ಕೇಳಿಬರುತ್ತಿರುವ ಹೆಸರು ವೆಂಕಟ್ ಮೋಂಟಡ್ಕ ಅವರದು. ಶ್ರೀಯುತ ವೆಂಕಟ್ ಮೋಂಟಡ್ಕ ಚಿಂತನಶೀಲ ವ್ಯಕ್ತಿ. ಲೇಖಕರಾಗಿ, ಕತೆಗಾರರಾಗಿ ಸಾಹಿತ್ಯ ಸಂಘಟಕರಾಗಿ, ಕಲಾವಿದರಾಗಿ ಗಮನಾರ್ಹ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಕತೆಗೆ ರಾಜ್ಯಮಟ್ಟದ ಬಹುಮಾನ ಬಂದಿರುತ್ತದೆ. ಸುಳ್ಯ ತಾಲೂಕು ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿದ್ದರು. ಪರಸ್ಪರ ಚಿಂತನೆಯ ವೇದಿಕೆಯ ಸಂಚಾಲಕರಾಗಿ ಸಾಹಿತ್ಯ ಸಂಘಟಕರಾಗಿ ದುಡಿಯುತ್ತಿದ್ದಾರೆ.

ಕವನ, ಲೇಖನಗಳನ್ನು ರಾಜ್ಯದ ವಿವಿಧ ಪತ್ರಿಕೆಗಳಲ್ಲಿ ಬರೆಯುತ್ತಿರುವ ಶ್ರೀನಿವಾಸ ಕಾರ್ಕಳ

ನಿರಂತರವಾಗಿ ತಮ್ಮನ್ನು ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಕವಿಗೋಷ್ಠಿ ಸ್ಮರಣ ಸಂಚಿಕೆಗಳಲ್ಲಿ ಪ್ರಕಟವಾದ ಇವರ ಕವನ ಕಾವ್ಯಾಸಕ್ತರ ಗಮನಸೆಳೆದಿದೆ.

ಸಂಶೋಧನೆಯ ಮಜಲಿನಲ್ಲಿ ಗೌಡ ಜನಾಂಗದ ಹಲವು ಯುವ ಸಂಶೋಧಕರು ಕಂಡುಬರುತ್ತಾರೆ. ವೃತ್ತಿಯಲ್ಲಿ ಉಪನ್ಯಾಸಕರಾಗಿರುವ ಡಾ. ವಿಶ್ವನಾಥ ಬದಿಕಾನ ಜಾನಪದ ಕ್ಷೇತ್ರದಲ್ಲಿ ಯುವ ಸಂಶೋಧಕರಾಗಿ ತಮ್ಮ ಹೆಜ್ಜೆಗಳನ್ನು ಮೂಡಿಸಿದ್ದಾರೆ. **'ಕನ್ನಡ ಜಾನಪದ ಅಧ್ಯಯನದ ಮೊದಲ ಘಟ್ಟ'** ಮಹಾಪ್ರಬಂಧಕ್ಕೆ ಹಂಪಿ ವಿಶ್ವವಿದ್ಯಾಲಯದ ಪಿಹೆಚ್‌ಡಿ ಪದವಿಯನ್ನು ಪಡೆದಿರುತ್ತಾರೆ. ಡಾ. ಬದಿಕಾನರು ಮೊದಲ ಬಾರಿಗೆ ಸುಳ್ಯ ಪರಿಸರದಲ್ಲಿರುವ ಗೌಡ ಕನ್ನಡ ಜನಪದ ಕತೆಗಳನ್ನು ಸಂಗ್ರಹಿಸಿ ಕನ್ನಡ ಜಾನಪದ ವೈಜ್ಞಾನಿಕ ಅಧ್ಯಯನಕ್ಕೆ ಹೊಸ ಕಾಣಿಕೆಯನ್ನು ನೀಡಿದ್ದಾರೆ. ಇವರ **ಗೌಡ ಕನ್ನಡದ ಜನಪದ ಕತೆಗಳು ವರ್ಗ ಮತ್ತು ಆಶಯ ಸೂಚಿ** ಒಂದು ಮಹತ್ವಪೂರ್ಣ ಕೃತಿಯಾಗಿದೆ. **ಎ.ಕೆ. ರಾಮಾನುಜಮ್ ಬದುಕು ಬರಹ, ಗಾದೆಗಳು** ಇವರ ಇತರ ಕೃತಿಗಳು. ಹಲವಾರು ವಿಚಾರಸಂಕಿರಣ, ಕಮ್ಮಟಗಳಲ್ಲಿ ತಮ್ಮ ಸಂಶೋಧನಾ ಲೇಖನಗಳನ್ನು ಮಂಡಿಸಿರುತ್ತಾರೆ.

ಮಂಗಳೂರು ವಿಶ್ವವಿದ್ಯಾನಿಲಯ ತುಳು ಪೀಠದಲ್ಲಿ ಸಂಶೋಧನಾ ಸಹಾಯಕರಾಗಿರುವ ಶ್ರೀ ಯದುಪತಿ ಗೌಡ, ಬೆಳ್ತಂಗಡಿ ತಾಲೂಕು, ಪುದುವೆಟ್ಟು, ಗ್ರಾಮದ ಡೆಚ್ಚಾರು ಮನೆತನದವರು. ಶ್ರೀ ಯದುಪತಿ ಗೌಡ ಮೂರು ಪುಸ್ತಕಗಳನ್ನು ರಚಿಸಿದ್ದಾರೆ. **'ಮಲೆ ಕುಡಿಯರು'** ಸಂಶೋಧನಾ ಗ್ರಂಥ. **'ಮಾಯದ ಪೊಣ್ಣು'** ತುಳುವಿನ ಸಣ್ಣ ಕತೆಗಳು. **ಭೂತಾರಾಧನೆಯ ಬಣ್ಣಗಾರಿಕೆ** ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. ಸುಮಾರು ಹದಿನಾರಕ್ಕೂ ಮಿಕ್ಕಿದ ಸಂಶೋಧನ ಲೇಖನಗಳು ವಿವಿಧ ಪತ್ರಿಕೆ, ಸ್ಮರಣಸಂಚಿಕೆಗಳಲ್ಲಿ ಬೆಳಕು ಕಂಡಿವೆ. ಐದು ಸಂಶೋಧನಾ ಪ್ರಬಂಧಗಳನ್ನು ವಿವಿಧ ವಿಚಾರಗೋಷ್ಠಿಗಳಲ್ಲಿ ಮಂಡಿಸಿದ್ದಾರೆ. ನಾಡಿನಾದ್ಯಂತ ಸುಮಾರು ಹನ್ನೆರಡಕ್ಕೂ ಹೆಚ್ಚು ತರಬೇತಿ ಶಿಬಿರಗಳಲ್ಲಿ ವಿಶೇಷ ಉಪನ್ಯಾಸ ಹಾಗೂ ಸಂಪನ್ಮೂಲ ವ್ಯಕ್ತಿಯಾಗಿ ಪಾಲ್ಗೊಂಡಿದ್ದಾರೆ. ಸುಮಾರು ಇಪ್ಪತ್ತಾರಕ್ಕೂ ಮಿಕ್ಕಿ ತರಬೇತಿ ಶಿಬಿರ ಮತ್ತು ಕಮ್ಮಟದಲ್ಲಿ ಭಾಗವಹಿಸಿದ್ದಾರೆ. ಆಕಾಶವಾಣಿಯಲ್ಲಿ ಇವರ ಭಾಷಣ ಪ್ರಸಾರವಾಗಿದೆ. ಸಾಹಿತ್ಯ ಸಂಘಟಕರಾಗಿ ಶ್ರಮಿಸಿರುತ್ತಾರೆ.

ಮಾಣಿ ಪದವಿಪೂರ್ವ ಕಾಲೇಜಿನಲ್ಲಿ ಪ್ರಾಂಶುಪಾಲರಾಗಿರುವ ಶೇಷಗಿರಿ ಮೂಕಮಲೆ, ಮದರಾಸು ವಿಶ್ವವಿದ್ಯಾನಿಲಯದಿಂದ **'ಚದುರಂಗರ ಕಾದಂಬರಿಗಳು'** ಎಂಬ ಮಹಾಪ್ರಬಂಧಕ್ಕೆ ಎಂ.ಫಿಲ್. ಪದವಿಯನ್ನು ಪಡೆದಿರುತ್ತಾರೆ. **'ಶ್ರೀ ಕೃಷ್ಣ ಆಲನಹಳ್ಳಿಯ ಕೃತಿಗಳ ಅಧ್ಯಯನ'** ಕುರಿತು ಪ್ರಬಂಧ ರಚಿಸಿರುತ್ತಾರೆ. ಲೇಖನ ಕವನಗಳನ್ನೂ ಪ್ರಕಟಿಸಿರುತ್ತಾರೆ.

ವಿದ್ಯಾರ್ಥಿ ಜೀವನದಲ್ಲಿ ಯತಿರಾಜ ಭೂತಕಲ್ಲು **'ಅಭಿವ್ಯಕ್ತಿ'** ಕವನ ಸಂಕಲನ ಪ್ರಕಟಿಸಿರುತ್ತಾರೆ. ಏಳನೆಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕುರುಂಜಿ ವೆಂಕಟ್ರಮಣ ಗೌಡ ಪ್ರತಿಭಾ ಪುರಸ್ಕಾರ ಪ್ರಶಸ್ತಿ ಸಾಹಿತ್ಯ ಕೃಷಿಗಾಗಿ ಪಡೆದಿರುತ್ತಾರೆ. ಮಹೇಶ್‌ಕುಮಾರ್ ಸಿ.ಪಿ. **'ಚಿರಂಜೀವಿ'** ಎನ್ನುವ ಕವನ ಸಂಕಲನವನ್ನು ಪ್ರಕಟಿಸಿರುತ್ತಾರೆ.

ಪರಿಸರ ಕವಿಯೆಂದೇ ಗುರುತಿಸಲಾಗುತ್ತಿರುವ ಸಂಜೀವ ಕುದ್ಪಾಜೆಯವರು ಮದರಾಸು ವಿ.ವಿ.ದಲ್ಲಿ ಎಂ.ಎ. ಎಂ.ಫಿಲ್ ಪದವಿಯ ಅಧ್ಯಯನ ಮಾಡಿದ್ದಾರೆ. 'ಹರಿಹರ ಮತ್ತು ಪೆರಿಯ ಪುರಾಣ'ದ ಕುರಿತು ತೌಲನಿಕ ಅಧ್ಯಯನ ನಡೆಸಿರುತ್ತಾರೆ. ಪರಿಸರ ಜಾಗೃತಿಯ ಬಗ್ಗೆ ಪೂರ್ಣಪ್ರಮಾಣದ ಕವನ ಸಂಕಲನ 'ಕಾಮನಬಿಲ್ಲ ಸೈನಿಕರು' ಹೊರತಂದಿರುತ್ತಾರೆ. ಕನ್ನಡ ಕಾವ್ಯಗಳಲ್ಲಿ ಹಂದಿ ಬೇಟೆಯ ವರ್ಣನೆ ಕುರಿತು ಸಂಶೋಧನೆ ನಡೆಸಿದ್ದಾರೆ. ಅವರ ಅನೇಕ ಕಥೆ ಕವನ, ಲೇಖನಗಳು ಪ್ರಕಟವಾಗಿವೆ.

ಸಸ್ಯಶಾಸ್ತ್ರದ ವಿಚಾರವಾಗಿ ದೇಶದ ವಿವಿಧೆಡೆಯಲ್ಲಿ ಸಂಶೋಧನಾ ಪ್ರಬಂಧ ಮಂಡಿಸಿರುವ ಶ್ರೀ ದೇವಿಪ್ರಸಾದ್ ಕೆ.ಎಸ್. ಅವರು ಇಂಟರ್‌ನೆಟ್‌ನಲ್ಲೂ ತಮ್ಮ ಅಧ್ಯಯನವನ್ನು ಪ್ರಕಟಿಸಿದ್ದಾರೆ. 'ಅವನಿ' 'ಪೂಮಾಲೆ' ಮೊದಲಾದ ಕೃತಿಗಳ ಸಂಪಾದಕರಾಗಿದ್ದಾರೆ.

ದ.ಕ. ಜಿಲ್ಲಾ ಗೌಡ ಸಾಹಿತ್ಯ ಲೋಕವನ್ನು ಅವಲೋಕಿಸಿದಾಗ ಸಮೃದ್ಧ ಸಾಧಕರ ಚಿತ್ರಣ ಒಂದೆಡೆಯಾದರೆ ಸ್ಪಷ್ಟ ಭರವಸೆಗಳನ್ನು ಹೊತ್ತಿರುವ ಅನೇಕ ಬರಹಗಾರರು ನಮ್ಮ ಮುಂದೆ ಕಾಣಿಸಿಕೊಳ್ಳುತ್ತಾರೆ. ಸಾಹಿತ್ಯದ ವಿವಿಧ ಪ್ರಕಾರಗಳಾದ ಕಾವ್ಯರಚನೆ, ಕತೆ, ವೈಚಾರಿಕ ಲೇಖನಗಳು, ಸಂಶೋಧನೆ ಮೊದಲಾದ ಬರವಣಿಗೆಯಲ್ಲಿ ಹವ್ಯಾಸವಾಗಿ ಆದರೂ ಗಂಭೀರವಾಗಿ ತೊಡಗಿಸಿ ಕೊಂಡವರೆಂದರೆ ನೂಜಾಲು ಪದ್ಮನಾಭ ಗೌಡ, ಪಿ.ಯಂ ಆನಂದ ಗೌಡ, ಕೆ.ಆರ್. ಗಂಗಾಧರ್, ಕೆ.ವಿ. ದಾಮೋದರ ಗೌಡ, ಡಿ.ಜಿ. ನಡ್ಕ, ಕುಸುಮಾವತಿ ಕುಕ್ಕೆಟ್ಟಿ, ಜವರೇ ಗೌಡ, ಪುಟ್ಟಣ್ಣ ಗೌಡ ಅಂಬೆಕಲ್ಲು, ಜಯಪ್ರಕಾಶ್ ಕುಕ್ಕೆಟ್ಟಿ, ಲೋಹಿತಾಶ್ವ ಆನೆಕಲ್ಲು, ಪ್ರಸನ್ನ ಬಡ್ಡಡ್ಕ, ಯಂ.ಬಿ. ಸದಾಶಿವ, ಮೋಹನ್ ಪಾರೆಪ್ಪಾಡಿ, ಮಾಧವ ಮೂಕಮಾಲೆ, ಚಂದ್ರಶೇಖರ ಪೇರಾಲು, ಸೀತಾರಾಮ ಕೇವಳ, ಶರತ್ ಮಡ್ತಿಲ, ಯಶವಂತ ಕುಡೆಕಲ್ಲು, ಸತ್ಯಪ್ರಕಾಶ್ ದೇವಪ್ಪಜ್ಜನ ಮನೆ, ಜಯರಾಮ ದೇವಪ್ಪಜ್ಜನ ಮನೆ, ಯು. ಮಂಜುನಾಥ, ಬಾಬುಗೌಡ ಅಚ್ರಪ್ಪಾಡಿ, ಜಯರಾಮ ಹಾಡಿಕಲ್ಲು, ಎಂ.ಜಿ.ಕಜೆ, ಎಂ.ಎಸ್. ಪುರುಷೋತ್ತಮ, ಮೋಹನ್ ಸೋನಾ, ಕುಸುಮಾಧರ ಸೋನಾ, ರಾಜೇಶ್ ಸೋನಾ, ದೇವಸ್ಯ ಮನೋಹರ, ಜಯಶೇಖರ ಮಡಪ್ಪಾಡಿ, ತುಕರಾಮ ಪನೆಕಲ್ಲು, ಎಂ.ಬಿ. ಜಯರಾಮ, ದಿನೇಶ್ ಕುಕ್ಕಜಡ್ಕ, ಯು. ಕುಶಾಲಪ್ಪ, ಡಾ. ಶ್ರೀಧರ ಪಾಣತ್ತಿಲ, ಡಾ. ಧರ್ಮಪ್ರಕಾಶ್, ಲೋಕೇಶ್ ಪೆರ್ಲಂಪಾಡಿ, ಸೋಮಶೇಖರ ನೇರಳ, ಪದ್ಮ ಕಾರ್ಕಳ, ಷಣ್ಮುಖ ಕುತ್ಯಾಳ, ವೆಂಕಪ್ಪ ಕೇನಾಜೆ, ರವಿರಾಜ ವಳಂಬೆ, ಎನ್. ಜ್ಞಾನೇಶ್, ಚಂದ್ರಶೇಖರ ಕೇವಳ, ಮಾಧವ ಪೆರ್ಗಡ್ಕ, ಪದ್ಮಯ್ಯ ಸಿ.ಎಚ್. ನಾರಾಯಣ ಶೇಡಿ ಕಜೆ, ಕುಶ್‌ವಂತ್ ಕೆ.ಎಸ್. ಮೊದಲಾದವರು.

ದ.ಕ ಜಿಲ್ಲೆಯ ಗೌಡ ಜನಾಂಗದ ಮಹಿಳೆಯರಲ್ಲಿ ತಾಲೂಕು ಸಾಹಿತ್ಯ ಸಮ್ಮೇಳನದ ಪೀಠವನ್ನು ಅಲಂಕರಿಸಿದ ಮೊದಲ ಮಹಿಳೆ ಎನ್ನುವ ಕೀರ್ತಿಗೆ ಭಾಜನರಾದವರೇ ಶ್ರೀಮತಿ ಜಯಮ್ಮ ಚೆಟ್ಟಿಮಾಡ ಅವರು. ಸಾಹಿತ್ಯ ಮತ್ತು ಪ್ರಕಾಶನ ಎರಡು ಕ್ಷೇತ್ರಗಳಲ್ಲೂ ದುಡಿದಿದ್ದಾರೆ. ಕಾಡುಮೇಡಿನ ಜಾಡು ಕವನ ಸಂಕಲನ, 'ತನನ ದಿನನ', ಪುರುಷಾರ್ಥ ಸಾಧಕರು, ಕೈಮರ ಇವರ ಇತರ ಕೃತಿಗಳು. ಮುತ್ತು ಮಲ್ಲಿಗೆ, ಪನಿಹೊನಲು ಎರಡು ಪನಿಗವನಗಳ ಸಂಕಲನಗಳನ್ನು ಸಂಪಾದಿಸಿದ್ದಾರೆ. 'ಹಳಬರ

ಜೋಳಿಗೆ' ಮಾಲಿಕೆಯಲ್ಲಿ ನಾಲ್ಕು ಸಂಚಿಕೆಗಳನ್ನು ಸಂಪಾದಿಸಿದ್ದಾರೆ. ಕನ್ನಡ ಭಾಷಾ ಅಧ್ಯಾಪಕಿಯಾಗಿ ಭಾಷೆ ಮತ್ತು ವ್ಯಾಕರಣದಲ್ಲಿ ಒಳ್ಳೆಯ ಹಿಡಿತ ಸಾಧಿಸಿದ್ದಾರೆ. ಹಲವಾರು ಸ್ಮರಣಸಂಚಿಕೆಗಳಲ್ಲಿ ಲೇಖನ, ಕತೆ, ಕವನ, ವೈಚಾರಿಕ ಲೇಖನ ಪ್ರಕಟಗೊಂಡಿವೆ. ಗೌಡ ಜನಾಂಗದ ಹಿರಿಯ ಬರಹಗಾರ್ತಿಯರ ಸಾಲಿನಲ್ಲಿ ಇನ್ನೊಂದು ಹೆಸರು ಶ್ರೀಮತಿ ಎನ್. ಲಲಿತಾ ಅವರದು. ಕನ್ನಡ ಭಾಷಾ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಾ ಕನ್ನಡ ಭಾಷೆ ಸಾಹಿತ್ಯ ಅಲ್ಲದೆ ಗೌಡ ಕನ್ನಡದಲ್ಲೂ ವಿಶೇಷ ಆಸಕ್ತಿ ಪರಿಣತಿ ಹೊಂದಿದವರು. ಗೌಡ ಕನ್ನಡ ಕುರಿತಾಗಿ ಮತ್ತು ಗೌಡ ಕನ್ನಡದಲ್ಲಿ ಸಾಹಿತ್ಯ ರಚನೆ ಮಾಡಿದ್ದಾರೆ. ಗೌಡ ಕನ್ನಡವನ್ನು ಬರಹರೂಪದಲ್ಲಿ ಬಳಸುವಲ್ಲಿ ವಿಶೇಷ ಪ್ರಯೋಗಗಳನ್ನು ಮಾಡಿರುತ್ತಾರೆ.

ಶ್ರೀಮತಿ ಶೀಲಾವತಿ ಕೊಳಂಬೆಯವರು ಹಳೆ ತಲೆಮಾರಿನ ಮಹಿಳಾ ಲೇಖಕಿಯರಲ್ಲಿ ಪ್ರಮುಖರು. ಪ್ರಸಿದ್ಧ ಕೊಳಂಬೆ ಮನೆತನದ ಸಾಹಿತ್ಯ ಪ್ರೇರಣೆಯೊಂದಿಗೆ ತಮ್ಮನ್ನು ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವವರು. ಕಥೆ, ಕವನ, ಲೇಖನಗಳ ಮೂಲಕ ಸಾಹಿತ್ಯ ಲೋಕದಲ್ಲಿ ಗುರುತಿಸಿಕೊಂಡಿರುವ ಶ್ರೀಮತಿ ಶೀಲಾವತಿ ಕೊಳಂಬೆಯವರು ಉಪನ್ಯಾಸಕಿಯಾಗಿ, ಪ್ರಾಂಶುಪಾಲರಾಗಿ ಹುದ್ದೆಯನ್ನು ನಿರ್ವಹಿಸಿದವರು.  ಕೊಳಂಬೆ ಪುಟ್ಟಣ್ಣ ಗೌಡರ ಅಚ್ಚಗನ್ನಡ ಕೋಶ ಹೊರತರುವಲ್ಲಿ ಇವರ ಶ್ರಮ ಅಪಾರ.

ಶ್ರೀಮತಿ ಲಲಿತಾಜ ಮಲ್ಲಾರ ಇವರ ಪೂರ್ಣ ಹೆಸರು ಶ್ರೀಮತಿ ಲಲಿತಾ ಜನಾರ್ದನ ಮಲ್ಲಾರ. ದಕ್ಷಿಣ ಕನ್ನಡ ಜಿಲ್ಲೆಯ ಮೊದಲ ಗೌಡ ಜನಾಂಗದ ಕಾದಂಬರಿಗಾರ್ತಿ. 'ದಡ ಸೇರದ ದೋಣಿ' ಅವರ ಪ್ರಥಮ ಕಾದಂಬರಿ. ವೃತ್ತಿಯಲ್ಲಿ ಕೃಷಿಕರಾದವರು. ಪ್ರವೃತ್ತಿಯಲ್ಲಿ ಸಾಹಿತ್ಯ. ಕವನ, ಕಥೆ, ಲೇಖನ ಇವರ ಪ್ರಮುಖ ಸಾಹಿತ್ಯ ಪ್ರಕಾರಗಳು.

ಶ್ರೀಮತಿ ವೇದಾವತಿಯವರು ಪ್ರಾರಂಭದಿಂದಲೂ ಸಾಹಿತ್ಯ ಆಸಕ್ತಿಯನ್ನು ಬೆಳೆಸಿಕೊಂಡು ಕವಿತೆ, ಕವನಗಳನ್ನು ಹವ್ಯಾಸವಾಗಿರಿಸಿಕೊಂಡಿರುವ ಇವರ 'ಪಯಣ' ಅನ್ನುವ ಕೃತಿ ಪ್ರಕಟವಾಗಿದೆ. ಇವರ ಕವನ, ಲೇಖನಗಳು ಹಲವಾರು ಪತ್ರಿಕೆಗಳಲ್ಲಿ ಬೆಳಕು ಕಂಡಿವೆ.

ಡಾ. ರೇವತಿ ನಂದಾವರರು ವಿಜ್ಞಾನ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ದ.ಕ ಜಿಲ್ಲೆಯ ಗೌಡ ಜನಾಂಗದ ಮೊದಲ ಮಹಿಳೆ. ಇವರ ವಿಜ್ಞಾನ ಲೇಖನಗಳನ್ನೊಳಗೊಂಡ ಕೃತಿ 'ಪರಿಜ್ಞಾನ' ಪ್ರಕಟವಾಗಿದೆ. ಇವರು ಜೀವವಿಜ್ಞಾನ ಕ್ಷೇತ್ರದಲ್ಲಿ ಕನ್ನಡದ ಮೊದಲ ಪಿ.ಎಚ್.ಡಿ 'ಪಶ್ಚಿಮ ಘಟ್ಟದ ಇರುವೆಗಳ ವೈವಿಧ್ಯತೆ ಮತ್ತು ಬದುಕು' ಪ್ರಬಂಧಕ್ಕೆ ಲಭಿಸಿರುತ್ತದೆ.  ಲೇಖನಗಳು ಪ್ರಕಟಗೊಂಡಿವೆ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ.

ವಿದ್ಯಾರ್ಥಿ ದೆಸೆಯಲ್ಲಿಯೇ ಕವನ ಸಂಕಲನ ಹೊರತಂದಿರುವ ಶೈಲಜಾ ಸೋಣಂಗೇರಿ ಹೊಸ ಭರವಸೆಯನ್ನು ಮೂಡಿಸಿದ್ದಾರೆ. ಅನುರಾಧ ಕುರುಂಜಿ ಮತ್ತು ವೀಣಾ ಮಡಪ್ಪಾಡಿ 'ಚಿಂತನವಾಹಿನಿ' ನುಡಿಮುತ್ತುಗಳನ್ನು ಸಂಪಾದಿಸಿದ್ದಾರೆ. ಗುಲಾಬಿ ಬಿಳಿಮಲೆ ಕಾಲೇಜು ದಿನದಿಂದಲೇ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಕವಿಯಾಗಿ, ಲೇಖಕಿಯಾಗಿ, ಮಹಿಳಾಪರ ಚಿಂತನೆ,

ಮಹಿಳೆಯರ ಹೋರಾಟ ಮನೋಭಾವದ ಇವರು ಅನೇಕ ಸಾಹಿತ್ಯ ರಚನೆ ಮಾಡಿದ್ದಾರೆ. ಮಂಗಳೂರು ಕರಾವಳಿ ಬಳಗದ ಸಕ್ರಿಯ ಸದಸ್ಯೆಯಾಗಿದ್ದಾರೆ. ಮಹಿಳಾ ವಿಮೋಚನೆಯ ಬಗ್ಗೆ ಮಹಿಳೆಯರದೇ ಆದ 'ಸಂವೇದಿ' ಎಂಬ ಪತ್ರಿಕೆಯ ಸಂಪಾದಕ ಬಳಗದಲ್ಲಿದ್ದಾರೆ. ಇಂಗ್ಲಿಷಿನಿಂದ ಕನ್ನಡಕ್ಕೆ ಅನೇಕ ಲೇಖನಗಳನ್ನು ಅನುವಾದಿಸಿದ್ದಾರೆ. ಪ್ರಗತಿಪರ ಚಿಂತಕಿ, ಪತ್ರಕರ್ತೆಯಾಗಿ ಲೇಖಕಿಯಾಗಿ ನಿರಂತರ ಕ್ರಿಯಾಶೀಲರಾಗಿರುವ ಇನ್ನೊಂದು ಹೆಸರು ಹೇಮಾ ವೆಂಕಟ್. ಇವರ ಹಲವಾರು ಲೇಖನಗಳು, ಬರಹಗಳು, ಕವಿತೆಗಳು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ.

ಒಟ್ಟಾರೆ ಸಾಹಿತ್ಯಲೋಕದಲ್ಲಿ ಮಹಿಳೆಯರ ಪ್ರಮಾಣ ಬಹಳ ಕಡಿಮೆ. ಆದರೆ ಗೌಡ ಸಮುದಾಯದಲ್ಲಿ ಬರವಣಿಗೆಯ ಸಾಮರ್ಥ್ಯವನ್ನು ರೂಢಿಸಿಕೊಂಡ ಅನೇಕ ಕವಿ, ಲೇಖಕಿ, ಕಥೆ, ಕಾದಂಬರಿಗಾರ್ತಿಯರು ನಮ್ಮೊಂದಿಗಿದ್ದಾರೆ. ತಮ್ಮದೇ ಆದಂಥ ವಸ್ತು ವಿಚಾರ ಶೈಲಿಗಳಿಂದ ಶಕ್ತಿಶಾಲಿಯಾದ ಅಭಿವ್ಯಕ್ತಿ ಇವರಿಗೆ ಸಾಧ್ಯವಾಗಿದೆ. ಇವರಲ್ಲಿ ಅನೇಕರು ಅತ್ಯಂತ ಹಿರಿಯ ತಲೆಮಾರಿನವರು. ಇವರಲ್ಲಿ ಬಹಳಷ್ಟು ಮಂದಿ ಹೊಸ ಪೀಳಿಗೆಯವರೆನ್ನುವುದು ಆಶಾದಾಯಕ. ಶ್ರೀಮತಿ ಲೀಲಾವತಿ ಕಾನಲತ್ತಿ, ಶ್ರೀಮತಿ ಎಲ್. ಸುಮಂಗಲ, ಶ್ರೀಮತಿ ಯಶೋದಾ ರಾಮಚಂದ್ರ, ಶ್ರೀಮತಿ ಪಿ.ಬಿ. ಸರಸ್ವತಿ, ಶ್ರೀಮತಿ ಕಮಲ ಬಾಲಚಂದ್ರ, ತಾರಾಮತಿ ವಳಲಂಬೆ, ಪ್ರಶಾಂತಿ ಬಡ್ಡಡ್ಕ, ಎಂ.ಎಸ್. ಗೀತಾ, ಎಸ್.ಎಸ್. ರೇಣುಕಾ, ಶ್ರೀಮತಿ ವಾರಿಜ ಕಾಣೆಚ್ಚಾರು, ಹೇಮಲತಾ ಮೀನಗದ್ದೆ, ಶ್ರೀಮತಿ ಅನುರಾಧ ಬಾಲಕೃಷ್ಣ ಕಡ್ಯ, ನಿವೇದಿತಾ ಕುದ್ಪಾಜೆ, ಪೂರ್ಣಿಮಾ ಕುದ್ಪಾಜೆ, ಶ್ರೀಮತಿ ಲೋಕೇಶ್ವರಿ ವಿನಯಚಂದ್ರ, ಶ್ರೀಮತಿ ಕೆ.ವಿ. ಹರಿಣಾಕ್ಷಿ, ಶ್ರೀಮತಿ ಮೀನಾಕ್ಷಿ ಮೊದಲಾದ ಪ್ರಮುಖ ಬರಹಗಾರ್ತಿಯರಿದ್ದಾರೆ.

ನಮ್ಮವರ ಸಾಹಿತ್ಯ ಸಾಧನೆ ಮತ್ತು ಕೊಡುಗೆಗಳನ್ನು ಅವಲೋಕಿಸಿದಾಗ ಹಲವಾರು ವ್ಯಕ್ತಿಗತ ವೈಶಿಷ್ಟ್ಯಗಳು ವ್ಯಕ್ತವಾಗುತ್ತವೆ. ಪ್ರೊ. ಕೋಡಿಯವರು ಮದರಾಸು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ಕಾರಣ ಕರಾವಳಿಯ ಬಹುಮಂದಿ ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಸಿ ಕೊಳ್ಳಲು ಹೆಚ್ಚಿನ ಪ್ರೇರಣೆ. ಭಾಷಾ ಕ್ಷೇತ್ರ ಒಂದು ವಿಶಿಷ್ಟ ಕ್ಷೇತ್ರ. ಅದರಲ್ಲಿ ತಮ್ಮ ಪ್ರೌಢಿಮೆಯನ್ನು ಮೆರೆದವರು ಕೋಡಿಯವರು. ಹೊಸ ತಲೆಮಾರು ಶೈಕ್ಷಣಿಕ ಜಗತ್ತಿಗೆ ತೆರೆದುಕೊಂಡ ಬಳಿಕ ತಮ್ಮದೇ ಸಮುದಾಯದ, ಭಾಷೆ, ಕತೆ, ಸಾಧನೆ ವಿವಿಧ ಮಗ್ಗಲುಗಳ ಬಗ್ಗೆ ತೀವ್ರ ಸಂಶೋಧನೆ ಬೆಳೆದಿರುವುದು ವ್ಯಕ್ತವಾಗುತ್ತದೆ. ಗೌಡ ಜನಾಂಗದ ಸಾಂಸ್ಕೃತಿಕ ಅಧ್ಯಯನ ಬಿಳಿಮಲೆಯವರಿಂದ, ಗೌಡರ ಕುಲಕಸುಬು ಬಗ್ಗೆ ಹಿಮಕರ ಎ.ಕೆ. ಅವರಿಂದ, ಗೌಡ ಕನ್ನಡದ ಕತೆಗಳ ಬಗ್ಗೆ ಡಾ. ವಿಶ್ವನಾಥ ಬದಿಕಾನ ಅವರಿಂದ ಸಂಶೋಧನೆ ನಡೆದಿದೆ.

ಪ್ರೊ. ಕೋಡಿಯವರು 'ಗೌಡ ಕನ್ನಡ'ದ ಬಗ್ಗೆಯೇ ಪಿ.ಎಚ್.ಡಿ. ಮಾಡಿದ್ದಾರೆ. ಗೌಡ ಕನ್ನಡ ವಿಶಿಷ್ಟತೆಯನ್ನು ಲಂಡನ್ ಭಾಷಾ ವಿಜ್ಞಾನಿಗಳಿಗೆ ವಿವರಿಸಿದ್ದಾರೆ. ಅವರು ಗೌಡ ಕನ್ನಡದ ವಿಶಿಷ್ಟತೆಗೆ ಬೆರಗಾಗಿದ್ದಾರೆ. ಪ್ರೊ. ಮರಿಯಪ್ಪ ಭಟ್ಟರು ಹಾಗೂ ಕೋಡಿಯವರು ಅರೆಕನ್ನಡ, ಅರೆಭಾಷೆಗಿಂತ 'ಗೌಡ ಕನ್ನಡ' ಸರಿಯಾದ ಭಾಷಾ ಪ್ರಯೋಗವೆಂದು ಅಭಿಪ್ರಾಯಪಟ್ಟಿದ್ದಾರೆ. ಡಾ. ಚಿನ್ನಪ್ಪ ಗೌಡರು

ತುಳುನಾಡಿನ ಜಾನಪದ ಅಧ್ಯಯನ, ಗೌಡ ಜನಾಂಗದ ಭೂತಾರಾಧನೆ ಮೊದಲಾದವುಗಳನ್ನು ತಮ್ಮ ಅಧ್ಯಯನದಲ್ಲಿ ಶೋಧಿಸಿದ್ದಾರೆ. ವಿದ್ಯಾಧರ್, ವೆಂಕಟ ಮೋಂಟಡ್ಕ, ಲೋಹಿತಾಶ್ವ ಮೊದಲಾದ ಯುವ ಬರಹಗಾರರು ಗೌಡ ಕನ್ನಡವನ್ನು ಕಥೆಗಳಲ್ಲಿ ಸಮರ್ಥವಾಗಿ ಬಳಸುತ್ತಿದ್ದಾರೆ. ಯಶವಂತ ಕುಡೆಕಲ್ಲು ಗೌಡ ಕನ್ನಡದಲ್ಲೇ ಕಾವ್ಯ ಕೃಷಿ ಆರಂಭಿಸಿದ್ದಾರೆ.

ಇಪ್ಪತ್ತನೇ ಶತಮಾನದ ಕೊನೆಯ ಭಾಗಕ್ಕಾಗುವಾಗ ಸಾಹಿತ್ಯ ಕ್ಷೇತ್ರದಲ್ಲಿ ಗಮನಾರ್ಹ ಸಾಧನೆ ಮೆರೆದದ್ದು ಕಂಡುಬರುತ್ತದೆ. ತಮ್ಮ ಸಾಹಿತ್ಯಿಕ ಸೇವೆ ಕೊಡುಗೆಗಳಿಂದ ವಿದ್ವಾಂಸರ ಮತ್ತು ಓದುಗರ ಗಮನ ಸೆಳೆದಿದ್ದಾರೆ. ಕಳೆದೊಂದು ದಶಕದಿಂದ ಹೊಸ ತಲೆಮಾರಿನ ಬರಹಗಾರರು ಸಾಹಿತ್ಯ ಕ್ಷೇತ್ರದಲ್ಲಿ ತೊಡಗಿಸಿಕೊಂಡಿರುವುದು ಮಹತ್ವದ ಸಂಗತಿಯಾಗಿದೆ. ಭಾಷೆಯ ಸಮರ್ಥ ಬಳಕೆಯನ್ನು ಮಾಡಿ ಸಾಹಿತ್ಯಿಕವಾಗಿ ತಮ್ಮದೇ ಆದ ಪ್ರಾದೇಶಿಕ ಸಾಹಿತ್ಯವನ್ನು ಪ್ರತಿಬಿಂಬಿಸುವ ಸಾಹಿತ್ಯವನ್ನು ಸೃಷ್ಟಿಸಿದ್ದಾರೆ.

ಸಂಶೋಧನಾ ಕ್ಷೇತ್ರದಲ್ಲಿ, ಗೌಡ ಜನಾಂಗದ ಬಗ್ಗೆನೇ ಸಂಶೋಧನೆ ಮಾಡಿರುವ ಪುರುಷೋತ್ತಮ ಬಿಳಿಮಲೆ, ಅಧ್ಯಯನ, ಪ್ರಕಟಣೆ ಮತ್ತು ಸಂಶೋಧನೆಗಳಿಂದ ಅಂತರಾಷ್ಟ್ರೀಯ ಮಟ್ಟದಲ್ಲಿ ವಿದ್ವಾಂಸರಾಗಿ ಗುರುತಿಸಲ್ಪಟ್ಟಿರುವ ಡಾ. ಚಿನ್ನಪ್ಪ ಗೌಡ, ಅಂತರಾಷ್ಟ್ರೀಯ ಭಾಷಾ ವಿಜ್ಞಾನಿಯಾಗಿ ಮತ್ತು ಖ್ಯಾತ ಲಲಿತ ಪ್ರಬಂಧಕರಾಗಿ ಪ್ರೊ. ಕೋಡಿ, ಮಕ್ಕಳ ಶಿಕ್ಷಣ ಸಾಹಿತಿ ಡಾ. ಸುಕುಮಾರ ಗೌಡ, ದ.ಕ. ಗೌಡ ಜನಾಂಗದ ಮೊದಲ ಉಪ ಕುಲಪತಿ ಕೋಳಂಬೆ ಚಿದಾನಂದ ಮೊದಲಾದ ವಿಚಾರಗಳು ಗೌಡ ಜನಾಂಗಕ್ಕೆ ಮಹತ್ವಪೂರ್ಣ ತಿರುವನ್ನು ನೀಡಿವೆ.

ಪ್ರಾದೇಶಿಕವಾಗಿ ಗಮನಿಸಿದರೆ ದ.ಕ. ಜಿಲ್ಲೆಯ ಒಟ್ಟು ಸಾಹಿತ್ಯ ಕ್ಷೇತ್ರದಲ್ಲಿ ಸುಳ್ಯ ತಾಲೂಕು ಗಮನಾರ್ಹ. ಇದು ಸಾಹಿತಿಗಳ ಸಂಖ್ಯೆ ಮತ್ತು ಕೊಡುಗೆ ಎರಡರಲ್ಲೂ ಮೇಲುಗೈ ಸಾಧಿಸಿದೆ. ಇದಕ್ಕೆ ಕಾರಣ ದೊಡ್ಡ ಪ್ರಮಾಣದಲ್ಲಿ ಗೌಡ ಜನಾಂಗದವರು ಸಾಹಿತ್ಯ ಕ್ಷೇತ್ರದಲ್ಲಿ ಹೆಚ್ಚು ಹೆಚ್ಚು ತೊಡಗಿಸಿಕೊಂಡಿರುವುದು ಮತ್ತು ಕುರುಂಜಿಯವರ ಶಿಕ್ಷಣ ಕ್ರಾಂತಿ ಕಾರಣವಾಗಿದೆ.

ಯುವ ಜನಾಂಗದ ಬರಹಗಾರರು ಬಹಳ ಸಮರ್ಥವಾಗಿ, ಸಾಧನಾಶೀಲರಾಗಿ ಹೊರ ಹೊಮ್ಮುತ್ತಿರುವುದು, ಜನಾಂಗದ ಪರಿವರ್ತನೆಯ ದೃಷ್ಟಿಯಿಂದ ಗೌಡ ಜನಾಂಗವು ಶಿಕ್ಷಣ ಮತ್ತು ಸಾಹಿತ್ಯದ ಅಭಿವ್ಯಕ್ತಿ ಮೂಲಕ ಸಾಮಾಜಿಕ ಪರಿವರ್ತನೆ ಸಾಧಿಸಿಕೊಂಡಿರುವುದು ಕಂಡುಬರುತ್ತದೆ. ಲಿಖಿತ ಸಾಹಿತ್ಯದ ಪರಂಪರೆಯೇ ಇಲ್ಲದ ಜನಾಂಗವೊಂದು ಒಟ್ಟು ಸಮಾಜದ ಪ್ರಮುಖ ಅಭಿವ್ಯಕ್ತಿ ವಲಯವಾಗಿ ಪರಿಣಮಿಸುತ್ತಿದೆ. ರೈತಾಪಿ ವರ್ಗದ ಹಿತಾಸಕ್ತಿಗಳು, ಗೌಡ ಜನಾಂಗದ ಭಾಷೆಯನ್ನು ಸಮರ್ಥವಾಗಿ ಅಭಿವ್ಯಕ್ತಿಗೊಳಿಸಲು ಸಾಹಿತ್ಯದ ಹಲವು ಪ್ರಕಾರವನ್ನು ಬಳಸಿಕೊಂಡಿರುವುದು ಕಂಡುಬರುತ್ತದೆ.

# ಗೌಡರು - ಜನಾಂಗ ಮತ್ತು ಕುಣಿತ

**ಯದುಪತಿ ಗೌಡ**

ಗೌಡರು ಯಾನೆ ಒಕ್ಕಲಿಗರು ದಕ್ಷಿಣ ಕನ್ನಡ ಜಿಲ್ಲೆಗೆ ಒಂದು ಕಾಲದಲ್ಲಿ ವಲಸೆ ಬಂದ ಜನಾಂಗವಾದರೂ ಇಂದು ತುಳುನಾಡಿನಲ್ಲಿ ತನ್ನದೇ ಆದ ಸಾಂಸ್ಕೃತಿಕ ಅನನ್ಯತೆಯನ್ನು ಮೈಗೂಡಿಸಿಕೊಂಡು ಬದುಕುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು, ಸುಳ್ಯ, ಬೆಳ್ತಂಗಡಿ ಹಾಗೂ ಬಂಟ್ವಾಳ ತಾಲೂಕಿನಲ್ಲಿ ಗೌಡರು ಹೆಚ್ಚಾಗಿ ವಾಸಿಸುತ್ತಿದ್ದಾರೆ. ಇತ್ತೀಚೆಗೆ ಉದ್ಯೋಗದ ನಿಮಿತ್ತ ಗೌಡರು ಮಂಗಳೂರು ಮತ್ತು ಉಡುಪಿ ಕಡೆಗಳಲ್ಲಿ ಬಂದು ನೆಲೆಸಿದ್ದಾರೆ.

ಕರ್ನಾಟಕದಲ್ಲಿ ಬೇರೆ ಬೇರೆ ಜನಾಂಗದವರು 'ಗೌಡ' ಪದವನ್ನು ಹೆಸರಿನೊಂದಿಗೆ ಸೇರಿಸುವುದನ್ನು ನಾವು ಕಾಣುತ್ತೇವೆ. ಉದಾ: ಮಲೆಕುಡಿಯರು, ಕುಡುಬಿಗಳು, ಹಾಲಕ್ಕಿಗಳು, ಕುರುಬರು, ಬೈರರು, ಲಿಂಗಾಯಿತರು ಹಾಗೂ ಉತ್ತರ ಕನ್ನಡದಲ್ಲಿ ಜೈನರು ಈ ಪದವನ್ನು ಹೆಸರಿನೊಂದಿಗೆ ಸೇರಿಸುತ್ತಾರೆ. ಆದರೆ ಜಾತಿ ಪ್ರಮಾಣ ಪತ್ರ ದಾಖಲಾತಿಯಲ್ಲಿ ಗೌಡ ಅಥವಾ ಒಕ್ಕಲಿಗ ಪದವನ್ನು ಗೌಡ ಜನಾಂಗದವರಿಗೆ ಮಾತ್ರ ನೀಡಲಾಗುತ್ತದೆ.

ಗೌಡ ಅಂದರೆ ಒಡೆಯ, ಊರಿನ ಮುಖ್ಯಸ್ಥ ಎಂಬ ಅರ್ಥದಲ್ಲಿಯೂ ಬಳಕೆಯಾಗುತ್ತದೆ. ವರ್ತಮಾನ ಕಾಲದಲ್ಲಿ ಜಾತಿ ಸೂಚಕವಾಗಿ ಬಳಕೆಯಾಗುವ 'ಗೌಡ' ಪದವು ಮೂಲದಲ್ಲಿ ಸ್ಥಾನ ಸೂಚಕವಾಗಿತ್ತು. ಗೌಡರನ್ನು ಒಕ್ಕಲಿಗರೆಂದು ಗುರುತಿಸಲಾಗುತ್ತದೆ. ಒಕ್ಕಲಿಗ ಪದಕ್ಕೆ ಅರ್ಥಕೋಶದಲ್ಲಿ ಬೇಸಾಯಗಾರವೆಂಬ ಅರ್ಥವಿದೆ. ಕಿಟ್ಟೆಲ್ ನಿಘಂಟಿನಲ್ಲಿ, ಗೌಡ ಪದಕ್ಕೆ 'The Chief officer of a Village (sudra) ಎಂಬರ್ಥವಿದೆ. ಕನ್ನಡ ಸಾಹಿತ್ಯ ಅರ್ಥಕೋಶದಲ್ಲಿ 'ಗ್ರಾಮದ ಮುಖ್ಯಸ್ಥ, ಗಾಮುಂಡ' ಎಂಬ ವಿವರವಿದೆ.

ಶಾಸನಗಳಲ್ಲಿಯೂ ಸ್ಥಾನಸೂಚಕ ಅರ್ಥವಿದೆ. ಗ್ರಾಮದ ಹಿತರಕ್ಷಣೆಗೋಸ್ಕರ ಇನ್ನಿತರ ಅಧಿಕಾರಿಗಳೊಂದಿಗೆ ದುಡಿಯುವವನೇ ಗೌಡ, 'ಶ್ಯಾನುಭೋಗ, ಪಟೇಲ, ಕರಣಿಕ, ಗುರಿಕಾರ ಮೊದಲಾದವು' 'ಗೌಡ' ನೊಂದಿಗೆ ಇದ್ದ ಇತರ ಸ್ಥಾನಗಳು.

ಕ್ರಿ.ಶ ೭೨೫ರ ಧಾರವಾಡ ಸಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರದ ಶಾಸನದಲ್ಲಿರುವ 'ನಾಡ ಗಾಮುಂಡ' ಎಂಬ ಶಬ್ದವೇ 'ಗೌಡ' ವೃತ್ತಿಯ ಬಗ್ಗೆ ನಮಗೆ ಸಿಗುವ ಅತ್ಯಂತ ಪ್ರಾಚೀನ ಉಲ್ಲೇಖ. ಕ್ರಿ.ಶ. ೭೫೦ರ ಧಾರವಾಡದ ಹಾನಗಲ್ಲಿನ ಅಡೂರಿನ ಶಾಸನದಲ್ಲಿ ಸಿಗುವ 'ದೋಣ ಗಾಮುಣ್ಡ'

ಮತ್ತು 'ಎಳಗಾಮುಣ್ಡ' ಪದಗಳು ವ್ಯಕ್ತಿ ನಾಮದೊಂದಿಗೆ ವೃತ್ತಿ ಸ್ಥಾನವೂ ಹೆಣೆದುಕೊಂಡಿರುವುದಕ್ಕೆ ಪ್ರಾಚೀನ ಉದಾಹರಣೆಯಾಗಿದೆ.

ಗಾಮುಣ್ಡ ವೃತ್ತಿ ಅನುವಂಶಿಕವಾಗಿ ಬರುತ್ತಿದ್ದುದರಿಂದಲೇ ಅದೊಂದು ಪ್ರತ್ಯೇಕ ಜಾತಿಯಾಗಲು ಕಾರಣವಾಯಿತು. ಕ್ರಿ.ಶ. ೧೦೭೯ರ ಅರಸಿಕೆರೆಯ ಶಾಸನದಲ್ಲಿ ಗಂಡು ಮಕ್ಕಳಿಲ್ಲದ ಕಾರಣ ಬಾಚಲದೇವಿಯೇ 'ಗೌಡಿಕೆ' ಧನ ಸ್ವೀಕರಿಸಿದ್ದರ ಬಗ್ಗೆ ಉಲ್ಲೇಖವಿದೆ.

## ಗೌಡ ಪದ ನಿಷ್ಪತ್ತಿ

### ಗೌಡ ಪದದ ಬಗ್ಗೆ ವಿದ್ವಾಂಸರು ಮಂಡಿಸಿದ ವಾದಗಳು

೧. ಗ್ರಾಮ ವೃದ್ಧ ಎಂಬ ಪದದಿಂದ 'ಗಾವುಂಡ' ಸಿದ್ಧಿಸಿದೆ. ಕಾಲಾಂತರದಲ್ಲಿ ಇದುವೆ ಗೌಡ ಎಂದಾಗಿದೆ (ನರಸಿಂಹಯ್ಯ, ೧೯೬೧, ಪುಟ ೧೧೦).

೨. ಸಂಸ್ಕೃತ ಗೋವು ಪದದಿಂದ 'ಗೌಡ' ಪದ ನಿಷ್ಪನ್ನವಾಗಿದೆ (Stuart 1891,16).

೩. ದ್ರಾವಿಡ ಮೂಲದ್ದಾದ 'ಗೌಡ' ಶಬ್ದವು 'ಬೆಟ್ಟ' ಎಂಬರ್ಥವನ್ನು ಕೊಡುತ್ತದೆ. (Oppert, 1891, 103).

೪. 'ಗೌಡ' ಎಂದರೆ ಯಜಮಾನ ಎಂದರ್ಥ. ಅದು ರಾಜ್ಯದ ಆಡಳಿತದ ಒಂದು ಹುದ್ದೆಯ ಹೆಸರನ್ನು ಸೂಚಿಸುತ್ತದೆ. (ದೊಡ್ಡಪ್ಪ ಗೌಡ, ೧೯೭೮ ಪುಟ, ೧೮-೧೯).

೫. 'ಗೂಡ್' ಎಂದರೆ ಬೆಲ್ಲ ಎಂದರ್ಥ ಬಂಗಾಳದಲ್ಲಿ ಕಬ್ಬು ಹೆಚ್ಚು ಬೆಳೆಯುವುದರಿಂದ ಅದನ್ನು 'ಗೂಡ್ ದೇಶ್' ಎಂದು ಕರೆಯುತ್ತಾರೆ. ಗೌಡರು ಮೂಲತಃ ಬಂಗಾಳದವರು ಅಂದರೆ ಬೆಲ್ಲ ಮಾಡುವವರು ಎಂಬ ಅರ್ಥವಿದೆ. ಇಂದಿಗೂ ಮಂಡ್ಯ ಕಡೆಯ ಗೌಡರ ಪ್ರಮುಖ ವೃತ್ತಿ ಬೆಲ್ಲ ಮಾಡುವುದೇ ಆಗಿದೆ (ಪೂವಯ್ಯ ೧೯೭೦-೧೪).

೬. ಗಂಗಾತೀರದಿಂದ ದಕ್ಷಿಣಕ್ಕೆ ಬಂದ ಪಟ್ಟಿಕಾರರಲ್ಲಿ ಗೋವಳರದ್ದು ಒಂದು ಶಾಖೆ. ಈ ಗೋಪಾಲರೇ ಗೌಡರಾದರು (ಮೊಣ್ಣಪ್ಪ ೧೯೭೦, ೧೦-೧೭).

೭. ಸಂಸ್ಕೃತದ ಗ್ರಾಮ ಕೂಟ ಪದವು ಪ್ರಾಕೃತದಲ್ಲಿ ಗ್ರಾಮ ಊಡ - ಗ್ರಾಮ ಉಡ ಎಂಬ ರೂಪವನ್ನು ತಳೆದು ಕನ್ನಡದಲ್ಲಿ 'ಗಾಮುಂಡ' ಆಗಿದೆ. ಇದೇ ಕ್ರಮೇಣ ಗಾವುಂಡ, ಗೌಂಡ, ಗೌಡ ಎಂದಾಗಿದೆ (ಚಿದಾನಂದ ಮೂರ್ತಿ ೧೯೭೦ ಪುಟ ೩೫೬)

ಇಂದು ಬಳಕೆಯಲ್ಲಿರುವ ಗೌಡ ಪದವನ್ನು ತುಳು ಮಾತನಾಡುವ ಮಂದಿ 'ಗವುಂಡ' 'ಗಾವುಂಡ' ಎಂದು ಉಚ್ಚರಿಸುತ್ತಾರೆ. ಶಾಸನಗಳಲ್ಲಿರುವ ಪ್ರಯೋಗವು ಇದೇ ಆಗಿದೆ. ಗಾವುಂಡ ಪದದ ಅರ್ಥದಲ್ಲಿಯೇ ಗ್ರಾಮಕೂಟ ಎಂಬ ಪದವನ್ನು ವಿಜಯನಗರ ಕಾಲದ ಶಾಸನಗಳಲ್ಲಿಯೂ ಬಳಸಿದ್ದಾರೆ (ಸೋಮಶೇಖರ ಶರ್ಮ, ೧೯೪೮, ಪು. ೨೧೯). ಗ್ರಾಮದ ಅಧಿಕಾರಿ ಎಂಬುದು ಅದರ ಮೂಲಾರ್ಥ. ಇಂದಿಗೂ ಗ್ರಾಮಗೌಡ ಊರುಗೌಡ, ಎಂಬ ಪ್ರಯೋಗಗಳಲ್ಲಿ ಇದೇ ಅರ್ಥವಿದ್ದರೂ ಒಟ್ಟಾರೆಯಾಗಿ ಅದು ಜಾತಿ ಸೂಚಕವಾಗಿದೆ. ಒಟ್ಟಿನಲ್ಲಿ ಈ ಪದ ಬೆಳೆದು

ಬಂದಿರುವುದನ್ನು ಹೀಗೆ ಸೂಚಿಸಬಹುದು.

ಗ್ರಾಮಕೂಟ (ಸಂಸ್ಕೃತ) - ಗಾಮ ಊಡ - ಗಾಮ ಉಡ (ಪ್ರಾಕೃತ) - ಗಾಮುಣ್ಡ (ಕನ್ನಡ) - ಗಾಮುಂಡ-ಗಾವುಂಡ-ಗವುಂಡ-ಗೌಂಡ 'ಗೌಡ' ಪದ ಈಗ ಬಳಕೆಯಲ್ಲಿದೆ.

ಗೌಡ ಜನಾಂಗದವರು ಹಿಂದುಗಳು ಹಾಗೂ ತಿರುಪತಿ ವೆಂಕಟರಮಣ ದೇವರ ಭಕ್ತರು. ವೆಂಕಟರಮಣ ದೇವರನ್ನು ತಮ್ಮ ಕುಲದೇವರಾಗಿ ಪೂಜಿಸುತ್ತಾರೆ. ಅದಕ್ಕಾಗಿ 'ಮುಡಿಪು' ಕಟ್ಟಿ 'ಹರಿಸೇವೆ'ಯನ್ನು ಮಾಡಿಸುತ್ತಾರೆ. ಈ ಮುಡಿಪಿನ ಹಣವನ್ನು ತಿರುಪತಿಯ ಭಂಡಾರಕ್ಕೆ ಅರ್ಪಿಸುತ್ತಾರೆ. ಗೌಡರು ವಿಜಯ ನಗರ ಸಾಮ್ರಾಜ್ಯದ ಕೃಷ್ಣದೇವರಾಯನ ಕಾಲದಲ್ಲಿ ಇದ್ದರೆಂದು ಚರಿತ್ರೆಯಿಂದ ತಿಳಿದುಬರುತ್ತದೆ. ತಾಳಿಕೋಟೆಯ ಕದನದ ನಂತರ ವಿಜಯನಗರ ಸಾಮ್ರಾಜ್ಯ ಪತನವಾದ ಬಳಿಕ ಮುಸ್ಲಿಮರ ಆಳ್ವಿಕೆಗೆ ಇಷ್ಟ ಪಡದೆ ಅಲ್ಲಿಂದ ಇಕ್ಕೇರಿ ಸಂಸ್ಥಾನಕ್ಕೆ ಬಂದರು. ಇಕ್ಕೇರಿ ನಾಯಕರು ದಕ್ಷಿಣ ಕನ್ನಡ ಜಿಲ್ಲೆಯನ್ನು ಅಧಿಪತ್ಯಕ್ಕೆ ಒಳಪಡಿಸಿಕೊಂಡಾಗ ಐಗೂರು ಸೀಮೆಯಿಂದ ಗೌಡ ಜನಾಂಗದವರನ್ನು ದ.ಕ. ಜಿಲ್ಲೆಯ ಪಶ್ಚಿಮ ಘಟ್ಟದ ಪ್ರದೇಶಕ್ಕೆ ತಂದು ಭೂಮಿ ಕೊಟ್ಟು ನಿಲ್ಲಿಸಿದರೆಂದು ತಿಳಿದು ಬರುತ್ತದೆ. ಹೀಗೆ ದ.ಕ. ಜಿಲ್ಲೆಯಲ್ಲಿ ನೆಲೆಸಿದ ಗೌಡರು ವ್ಯವಸಾಯವನ್ನು ತಮ್ಮ ಮೂಲವೃತ್ತಿಯನ್ನಾಗಿ ಮಾಡಿಕೊಂಡರು. ದ.ಕ. ಜಿಲ್ಲೆಯಲ್ಲಿ ವಾಸಿಸುತ್ತಿದ್ದ ಗೌಡರಲ್ಲಿ ಕೆಲವರು ೧೮ನೇ ಶತಮಾನ ಮತ್ತು ೧೯ನೇ ಶತಮಾನದ ಆರಂಭದ ದಶಕದಲ್ಲಿ ಕೊಡಗಿಗೆ ಹೋಗಿ ನೆಲೆಸಿದರು.

ಕೊಡಗಿಗೆ ಇವರು ಹೋಗಿ ನೆಲೆಸಲು ಕಾರಣರಾದವರು ದೊಡ್ಡ ವೀರರಾಜೇಂದ್ರ ಒಡೆಯ. ಕೊಡಗು ಟಿಪ್ಪು ಸುಲ್ತಾನನ ಆಳ್ವಿಕೆಗೊಳಪಟ್ಟ ನಂತರ ಟಿಪ್ಪು ಸುಲ್ತಾನನ ಆಳ್ವಿಕೆಯನ್ನು ವಿರೋಧಿಸಿ ಕೊಡಗಿನವರು ಅನೇಕ ಬಾರಿ ದಂಗೆಯೆದ್ದರು. ಇದರಿಂದ ಟಿಪ್ಪು ಸುಲ್ತಾನನು ಕೊಡಗಿನ ಜನರ ಮೇಲೆ ಸಿಟ್ಟಾಗಿ ೧೭೮೫ರಲ್ಲಿ ಕೊಡಗಿನ ಜನರನ್ನು ಬಲತ್ಕಾರದಿಂದ ಹಿಡಿದು ಭಾಗಮಂಡಲದ ದೇವಟು ಪರಂಬುವಿನಲ್ಲಿ ಸಾವಿರಾರು ಜನರನ್ನು ಶ್ರೀರಂಗಪಟ್ಟಣಕ್ಕೆ ಎಳೆದುಕೊಂಡು ಹೋಗಿ ಅಲ್ಲಿ ಮುಸಲ್ಮಾನರನ್ನಾಗಿ ಮತಾಂತರಿಸಿದನು. ೧೭೯೨ರಲ್ಲಿ ಅಮರ ಸುಳ್ಯ ಮಾಗಣೆಗಳು ವೀರರಾಜೇಂದ್ರನ ವಶಕ್ಕೆ ಬಂದವು. ಆಗ ವೀರರಾಜೇಂದ್ರನು ಅಮರ ಸುಳ್ಯದಲ್ಲಿದ್ದ ಗೌಡ ಜನಾಂಗವನ್ನು ಕೊಡಗಿಗೆ ಬಂದು ಅಲ್ಲಿ ಪಾಳು ಬಿದ್ದ ಭೂಮಿಯಲ್ಲಿ ನೆಲೆಸುವಂತೆ ಒತ್ತಾಯಿಸಿದನು. ಹೀಗೆ ಹೊರ ಪ್ರದೇಶಗಳಿಂದ ಬಂದ ಎಲ್ಲಾ ಜನರಿಗೂ ದೊಡ್ಡ ವೀರರಾಜೇಂದ್ರ ಒಡೆಯನು ಜಮ್ಮ ಮತ್ತು ಉಂಬಳಿಯಾಗಿ ಭೂಮಿಯನ್ನು ಕೊಟ್ಟನು.

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು, ಬೆಳ್ತಂಗಡಿ, ಬಂಟ್ವಾಳ ತಾಲೂಕಿನ ಗೌಡರು ತುಳು ಮಾತನಾಡಿದರೆ, ಸುಳ್ಯ ತಾಲೂಕಿನ ಗೌಡರು ಹಾಗೂ ಮಡಿಕೇರಿ ಪ್ರಾಂತ್ಯದಲ್ಲಿ ನೆಲೆಸಿರುವ ಗೌಡರು 'ಗೌಡ ಕನ್ನಡ'ವನ್ನು ಮಾತನಾಡುತ್ತಾರೆ. ಉಳಿದಂತೆ ಕರ್ನಾಟಕದಾದ್ಯಂತ ಕನ್ನಡವೇ ಗೌಡರ ಮಾತೃಭಾಷೆಯಾಗಿದೆ.

ದ.ಕ ಜಿಲ್ಲೆಯ ಗೌಡರು ಹತ್ತು ಕುಟುಂಬ ಹದಿನೆಂಟು ಗೋತ್ರ (ಬಳಿ)ಗಳಿಗೆ ಸೇರಿದವರು

ಆದುದರಿಂದ ವಿವಾಹ ಸಂದರ್ಭದಲ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರ, ಜಾತಿ ಸಮಸ್ತರ ಸಂಗಡ ಒಪ್ಪಿಗೆ ಕೇಳಿಯೇ ಎಲ್ಲಾ ಕಾರ್ಯಗಳನ್ನು ಪ್ರಾರಂಭಿಸುತ್ತಾರೆ. ಈ ಹದಿನೆಂಟು ಗೋತ್ರ (ಬಳಿ)ಗಳು ಈ ರೀತಿ ಇವೆ

| | | | |
|---|---|---|---|
| ೧. | ನಂದರ | ೧೦. | ಕಬರ್ |
| ೨. | ಬಂಗರ | ೧೧. | ಗೌಡರ |
| ೩. | ಮೂಲರ | ೧೨. | ಕರ್ಂಬೆರ |
| ೪. | ಗುಂಡರ | ೧೩. | ದೇವರ |
| ೫. | ಚಾಲ್ಯರ | ೧೪. | ಬಳಸನ್ನ |
| ೬. | ಚಿತ್ತರ | ೧೫. | ಪೆರ್ಬನ್ನ |
| ೭. | ಕೆಲ್ಲರ | ೧೬. | ಪೆರ್ಗಡೆ |
| ೮. | ನಾಯರ | ೧೭. | ಹೆಮ್ಮನ |
| ೯. | ಜತ್ತರ | ೧೮. | ಲಿಂಗಾಯಿತ |

ಈ ೧೮ 'ಬಳಿ'ಗಳ ಹೆಸರುಗಳಲ್ಲಿ ಪ್ರಾದೇಶಿಕವಾಗಿ ವ್ಯತ್ಯಾಸಗಳಿವೆ. ಆದರೆ ಸಂಖ್ಯೆಯಲ್ಲಿ ಮಾತ್ರ ಹದಿನೆಂಟೇ ಬಳಿಗಳಿರುತ್ತವೆ.

ಗೌಡರ ಮದುವೆಯ ಮೊದಲ ಹಂತ ಪ್ರಾರಂಭವಾಗುವುದೆ 'ಬಳಿಯ ಆಯ್ಕೆಯಿಂದ' ಬಳಕೆಯಲ್ಲಿರುವ ೧೮ ಬಳಿಗಳಲ್ಲಿ ವರನು ತನ್ನ ಗೋತ್ರವನ್ನು ಬಿಟ್ಟು ತನಗೆ ಸರಿಹೊಂದುವ 'ಬಳಿ'ಯೊಂದನ್ನು ಆಯ್ಕೆಮಾಡಿಕೊಳ್ಳುತ್ತಾನೆ. ಆಸ್ತಿಯ ಒಡೆತನಕ್ಕೆ ಬಳಿಯೂ ತಂದೆಯಿಂದ ಮಗನಿಗೆ ಬರುವುದರಿಂದ ತಂದೆಯ 'ಬಳಿ'ಯ ಹುಡುಗಿಯನ್ನು ಮದುವೆಯಾಗುವಂತಿಲ್ಲ. ಆದರೆ ತಂದೆಯ ತಂಗಿಯನ್ನು ಬೇರೆ ಕಡೆಗೆ ಕೊಟ್ಟಿರುವುದರಿಂದ ಆಕೆಯ ಮಗಳನ್ನು ಮತ್ತೆ ಮದುವೆಯ ಮೂಲಕ ತರಬಹುದು ಮತ್ತು ಮಗಳನ್ನು ಕೊಡಬಹುದು. ಇಲ್ಲಿ ನಿಷೇಧವಿರುವುದು ಒಂದೇ ಬಳಿಯಲ್ಲಿ ಮದುವೆಯಾಗಬಾರದು ಎಂಬುದು ಮಾತ್ರ.

ಗೌಡ ಜನಾಂಗದವರಿಗೆ ಗುರುಮಠ ಶೃಂಗೇರಿಯಾಗಿತ್ತು. ಹಿಂದಿನ ಕಾಲದಲ್ಲಿ ಶೃಂಗೇರಿ ಮಠಕ್ಕೆ ಗುರುಕಾಣಿಕೆ ಕೊಡುವ ಕ್ರಮವಿತ್ತು. ಈಗಲೂ ಕೂಡ ವಿವಾಹ ಸಂದರ್ಭದಲ್ಲಿ 'ತೆರ' ಎಂದು ಗಂಡಿನ ಕಡೆಯವರು ಕೊಡುವ ೧೦-೫೦ ರೂಪಾಯಿಯಲ್ಲಿ ರೂಪಾಯಿ ೬.೨೫ನ್ನು ಹೆಣ್ಣಿನ ಮುತ್ತೈದೆತನಕ್ಕೆ ಶೃಂಗೇರಿ ಮಠಕ್ಕೆ ತಲುಪಿಸಬೇಕೆಂದು ಕೊಡುವ ಹಣವಾಗಿದೆ.

ತೆರವಿನ ಹಣ ರೂ. ೧೦-೫೦ ಇದರಲ್ಲಿ -

| | | | |
|---|---|---|---|
| ೧. | ಶೃಂಗೇರಿ ಮಠಕ್ಕೆ ಹುಡುಗಿಯ ಮುತ್ತೈದೆ ತನಕ್ಕೆ | ೬.೨೫ | |
| ೨. | ಎಲೆ ಅಡಿಕೆ ಖರ್ಚು | ೦.೫೦ | |
| ೩. | ಹಾಳೆ ಮರ ಪಾದಕಂಬಕ್ಕೆ | ೧.೨೫ | |
| ೪. | ಆರತಿಗಳಿಗೆ | ೧.೨೪ | |
| ೫. | ಸ್ಥಳ ಮರ್ಯಾದೆ | ೧.೨೫ | ಒಟ್ಟು ೧೦.೫೦ |

ಈ 'ತೆರ'ವಿನ ಹಣದಲ್ಲಿ ಕೂಡ ಪ್ರಾದೇಶಿಕವಾಗಿ ವ್ಯತ್ಯಾಸಗಳಿವೆ. ಕೆಲವು ಕಡೆ ೮.೫೦ ರೂಪಾಯಿಗಳಾಗಿರುತ್ತದೆ. 'ತೆರ'ವಿನ ಹಣವನ್ನು ಹಿಂದೆ ಊರು ಗೌಡರು, ಮಾಗಣೆ ಗೌಡರಲ್ಲಿ ಕೊಡುತ್ತಿದ್ದರು. ಮಾಗಣೆ ಗೌಡರು ಅದನ್ನು ಕಟ್ಟೆಮನೆಗೆ ಕಳುಹಿಸುತ್ತಾರೆ. ಕಟ್ಟೆಮನೆಯವರು ಆ ಹಣವನ್ನು ಗುರುಮಠಕ್ಕೆ ಕಳುಹಿಸುವ ವ್ಯವಸ್ಥೆ ಮಾಡುತ್ತಿದ್ದರು. ಇಂದು ಮಾಗಣೆ ಮತ್ತು ಕಟ್ಟೆ ಮನೆಗಳು ತನ್ನ ಅಧಿಕಾರವನ್ನು ಕಡಿದು ಕೊಂಡಿವೆ. ಕೇವಲ ಊರು ಗೌಡರು ಮಾತ್ರ ತಮ್ಮ ಜನಾಂಗದ ಆಚರಣೆಗಳು ಮತ್ತು ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಹಿಂದೆ ದ.ಕ. ಜಿಲ್ಲೆಯಲ್ಲಿ ಎರಡು ಕಟ್ಟೆಮನೆಗಳಿದ್ದವು- ಒಂದು ಪುತ್ತೂರಿನ ಬಲ್ನಾಡು ಕಟ್ಟೆಮನೆ, ಮತ್ತೊಂದು ಸುಳ್ಯದ ಕೂಜುಗೋಡು ಕಟ್ಟೆ ಮನೆ. ಅವರ ಕೈಕೆಳಗೆ ಮಾಗಣೆ ಗೌಡರು, ಊರು ಗೌಡರು ಮತ್ತು ಒತ್ತು ಗೌಡರು ಇರುತ್ತಿದ್ದರು.

ಗೌಡರ ಮದುವೆಯಲ್ಲಿ ವೀಳ್ಯ ಶಾಸ್ತ್ರಕ್ಕೆ ಬಹಳ ಮಹತ್ವವಿದೆ. ಸಾಮಾನ್ಯವಾಗಿ ಗೌಡರು ಮದುವೆಯ ಸಂದರ್ಭದ ವೀಳ್ಯ ಶಾಸ್ತ್ರದಲ್ಲಿ ಹನ್ನೆರಡು ವೀಳ್ಯಗಳನ್ನು ಕಟ್ಟುತ್ತಾರೆ. ಅವುಗಳೆಂದರೆ

೧. ಚೌಕದ ವೀಳ್ಯ
೨. ದೇವರ ವೀಳ್ಯ
೩. ಗುರು ವೀಳ್ಯ
೪. ದಶಮಾಗಣೆ ವೀಳ್ಯ (ದೇಶ ಮಹಾನಾಡು ವೀಳ್ಯ)
೫. ಗೌಡ ವೀಳ್ಯ
೬. ಮಾವನ ವೀಳ್ಯ
೭. ತಾಯಿ ತಂದೆ ವೀಳ್ಯ
೮. ತೆರವು ಮರವಿನ ವೀಳ್ಯ
೯. ಅಚ್ಚುಕಟ್ಟು ವೀಳ್ಯ
೧೦. ಬಣ್ಣ ಬಂಗಾರದ ವೀಳ್ಯ

ಉಳಿದಂತೆ ಹೆಣ್ಣು ನಿಶ್ಚಯದ ವೀಳ್ಯ ಮತ್ತು 'ಲಗ್ನದ ವೀಳ್ಯ' ವನ್ನು ಹೆಣ್ಣು ನಿಶ್ಚಿತಾರ್ಥದ ಸಂದರ್ಭದಲ್ಲಿ ನಡೆಸುತ್ತಾರೆ. ಈ ಎಲ್ಲಾ ವೀಳ್ಯಗಳಲ್ಲಿಯೂ ಸಾಮಾನ್ಯವಾಗಿ ಐದು ಕವಳಿಗೆ ಎಲೆ ಮತ್ತು ಐದು ಅಡಿಕೆಗಳಿರುತ್ತದೆ. ವೀಳ್ಯ ಶಾಸ್ತ್ರದ ಸಂದರ್ಭದಲ್ಲಿ ಸಮಸ್ತರಲ್ಲಿ ಕೇಳಿಯೇ ಕಟ್ಟುತ್ತಾರೆ. ಉದಾಹರಣೆಗೆ ತುಳುವಿನಲ್ಲಾದರೆ -

ಅರೆಮನೆತಕಲ್ ಕಿರುಮನೆತಕ್‌ಲ್ ಶೃಂಗೇರಿ ಗುರುಮಠತಕಲೆಡ
ಪಡ್ಡಾಯಿ ಒರುಂಬೊ ಮಾಗಣೆ ಮೂಡಾಯಿ ಒರುಂಬೊ ಮಾಗಣೆ
ಪತ್ತಪ್ಪೆ ಬಾಲೆಲು ಪದಿನೆಣ್ಮ ಬರಿ ಬಂಧುಲೆಡಲ
ಇತ್ತಿ ದಿಬ್ಬಣೆರಡಲ ಬತ್ತಿ ದಿಬ್ಬಣೆರಡಲ ಸಕಲ ಸಮಸ್ತೆರೆಡಲ
ಆಣ್‌ಗ್‌ಲ -ಪೊಣ್ಣಗ್‌ಲ -ವೀಳ್ಯ

ಕಟ್ಬ್‌ಬೆ ಪನ್ಪೆರ್.

ಆಗ ಉಳಿದವರು 'ಎಡ್ಡೆ ಪನ್ಪೆರ್' ಎಂದು ಹೇಳುತ್ತಾರೆ.[೧]

ಹೀಗೆ ಗೌಡರಲ್ಲಿ ಎಲ್ಲಾ ಕಾರ್ಯಕ್ರಮಗಳು ಶಾಸ್ತ್ರೋಕ್ತರಾಗಿಯೇ ನಡೆಯುತ್ತವೆ.

ಗೌಡರು ತಮ್ಮ ಜೀವನಾವರ್ತನದ ಆಚರಣೆಗಳಾದ ಹುಟ್ಟು, ಋತುಪ್ರಸ್ತ, ಮದುವೆ, ಬಯಕೆ, (ಸೀಮಂತ) ಸಾವು[೨] ಹಾಗೂ ಸಾವಿನ ನಂತರ ಆಚರಣೆಗಳನ್ನು ತಮ್ಮ ಜಾತಿ ಕಟ್ಟುಪಾಡುಗಳ ಒಳಗಡೆ ಬಹಳ ಶ್ರದ್ಧೆಯಿಂದ ನಡೆಸಿಕೊಂಡು ಬರುತ್ತಾರೆ. ಹಾಗೂ ವಾರ್ಷಿಕ ಹಬ್ಬ ಹರಿದಿನಗಳಾದ- ಆಟಿ ಅಮಾವಾಸ್ಯೆ, ಶ್ರಾವಣ ಶನಿವಾರ, ಯುಗಾದಿ, ದೀಪಾವಳಿ, ಹುತ್ತರಿ ಹಬ್ಬ, ಕೆಡ್ಡಸ, ಬಿಸು, ಕಾವೇರಿ ಸಂಕ್ರಮಣ ಮುಂತಾದ ವಾರ್ಷಿಕ ಹಬ್ಬಗಳನ್ನು ಆಚರಿಸುತ್ತಾರೆ. ಈ ಆಚರಣೆಗಳೆಲ್ಲವೂ ಕೂಡ ಕೃಷಿಗೆ ಸಂಬಂಧಪಟ್ಟಂತ ಆಚರಣೆಗಳಾಗಿರುವುದರಿಂದ ಅವುಗಳನ್ನು ನಿಷ್ಠೆಯಿಂದ ಆಚರಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಗೌಡರು ಭೂತಾರಾಧಕರು. ಇಲ್ಲಿ ಭೂತಾರಾಧನೆಯು ಕೃಷಿ ಸಂಸ್ಕೃತಿಯ ಜೊತೆಗೆ ಬೆಳೆದು ಬಂದುದರಿಂದ ಗೌಡರು ಕೃಷಿಸಂಸ್ಕೃತಿಗೆ ಸಂಬಂಧಪಟ್ಟ ಭೂತಗಳನ್ನು (ದೈವ) ಆರಾಧಿಸುತ್ತಾರೆ. ಮುಖ್ಯವಾಗಿ ಪಂಜುರ್ಲಿ, ಕಲ್ಲುರ್ಟಿ, ರಕ್ತೇಶ್ವರಿ, ಗುಳಿಗ. ಜುಮಾದಿ, ವಿಷ್ಣುಮೂರ್ತಿ, ಶಿರಾಡಿಭೂತ, ಮುಂತಾದ ಭೂತಗಳನ್ನು ಆರಾಧಿಸುತ್ತಾರೆ. ಪ್ರತಿಯೊಂದು ಗೌಡ ಕುಟುಂಬದವರಿಗೂ ಕುಟುಂಬ ದೈವಗಳಿರುತ್ತವೆ. ಜೊತೆಗೆ ಜಾಗದ ದೈವಗಳು, ಮನೆ ದೈವಗಳು ಹಾಗೆಯೇ ಗ್ರಾಮದೈವಗಳನ್ನು ಆರಾಧಿಸುತ್ತಾರೆ. ನೇಮ. ಕೋಲ, ತಂಬಿಲಗಳ ಮೂಲಕ ಇವುಗಳ ಆರಾಧನೆ ನಡೆಯುತ್ತದೆ. ಜಿಲ್ಲೆಯಲ್ಲಿ ಗೌಡರು ಕೆಲವು ಕಡೆ ಗ್ರಾಮದೈವದ ಮೊಕ್ತೇಸರರಾಗಿಯೂ, ಕೆಲವು ಕಡೆ ಪಾತ್ರಿಗಳಾಗಿಯೂ, ಮತ್ತೆ ಕೆಲವೆಡೆ ಭೂತ ಸೇವಕರಾಗಿಯೂ ಪರಂಪರೆಯಿಂದ ತಮ್ಮ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ.

## ಕುಣಿತ

ದ.ಕ ಜಿಲ್ಲೆಯ ಗೌಡ ಜನಾಂಗದವರು ಸುಗ್ಗಿ ತಿಂಗಳಲ್ಲಿ ಕುಣಿಯುವ ಕುಣಿತವೇ ಸಿದ್ಧವೇಶ ಅಥವಾ ಪುರುಷರ ಕುಣಿತ. ಸುಮಾರು ೧೧ನೇ ಶತಮಾನದಲ್ಲಿ ನಾಥಪಂಥ ತುಳುನಾಡಿನಲ್ಲಿ ಪ್ರಚಾರಕ್ಕೆ ಬಂತು. ಕದ್ರಿಯನ್ನು ಈ ಪಂಥದ ಪ್ರಚಾರಕರು ತಮ್ಮ ಕೇಂದ್ರವನ್ನಾಗಿಸಿಕೊಂಡು ಬಹಳಷ್ಟು ಕಡೆ ತಮ್ಮ ಮಠಗಳನ್ನು ತೆರೆದರು. ಈ ಪಂಥದ ಅನುಯಾಯಿಗಳನ್ನು ಜೋಗಿಗಳು ಅಥವಾ ಪುರುಷರು ಎಂದು ಕರೆಯುತ್ತಾರೆ. ಸಮಾಜದ ಕೆಳವರ್ಗದ ಜನರಿಗೆ ಒಪ್ಪುವ ವಿಚಾರಗಳೇ ಅದರ ಧಾರ್ಮಿಕತೆಯಾದುದರಿಂದ ವೈದಿಕ ಸಂಸ್ಕೃತಿ ಮತ್ತು ನಾಥ ಪಂಥದ ಮಧ್ಯೆ ಒಂದು ರೀತಿಯ ಸಂಘರ್ಷ ಬೆಳೆಯಿತು. ಇದರ ಪರಿಣಾಮವಾಗಿ ಸೃಷ್ಟಿಯಾದ ಕುಣಿತವೇ ಸಿದ್ಧವೇಶ ಅಥವಾ ಪುರುಷರ ಕುಣಿತ.

ಕುಣಿತ ಮಾನವನ ಸಹಜ ಕ್ರಿಯೆ, ಉತ್ಕಟ ಭಾವನೆಗಳನ್ನು ತಡೆದಿಟ್ಟುಕೊಳ್ಳಲು ಅಸಾಧ್ಯವಾದಾಗ ಅದನ್ನು ಕುಣಿತದ ಮೂಲಕ ಆತ ಸಡಿಲುಗೊಳಿಸುತ್ತಾನೆ. ಕುಣಿತ ಸಂತೋಷಕ್ಕಾಗಿ ಮಾತ್ರವೇ

ಅಲ್ಲ. ಬೇಸೆ ಬೇಸರಗಳನ್ನು ತೋಡಿಕೊಳ್ಳುವ, ಕೋಪ ತಾಪಗಳನ್ನು ಶಮಿಸಿಕೊಳ್ಳುವ ಸಾಧನವೂ ಆಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಒಂದು ಸಮೂಹಕ್ಕೆ ಆಗಿರುವ ಸಂತೋಷ, ದುಃಖ ಶೋಷಣೆಯಿಂದ ಆಗಿರುವ ಅನ್ಯಾಯ ದೋಷಗಳನ್ನು ಪ್ರಪಂಚಕ್ಕೆ ಮನಗಾಣಿಸಲು ಜನಪದರು ಆಯ್ದುಕೊಂಡಿರುವ ಮಾಧ್ಯಮವೇ ಕುಣಿತ.

ಪುರುಷ ಕುಣಿತವನ್ನು ದ.ಕ ಜಿಲ್ಲೆ ಬೆಳ್ತಂಗಡಿ ತಾಲೂಕಿನ ತುಳು ಮಾತಾನಾಡುವ ಗೌಡರು 'ಪುರುಷರೆ ಕಟ್ಟುನ' ಎಂದು ಕರೆಯುತ್ತಾರೆ. ಇದು ಹಾಡು ಕುಣಿತ ಪ್ರಧಾನವಾದ ಜನಪದ ಕಲೆ. ಸುಳ್ಯ ತಾಲೂಕಿನಲ್ಲಿ ಗೌಡರು ಇದನ್ನು 'ಸಿದ್ಧವೇಶ' ಎಂದು ಕರೆಯುತ್ತಾರೆ. ಸಿದ್ಧವೇಶದಲ್ಲಿ ಗೌಡರ ಮಾತ್ರ ಭಾಗವಹಿಸುತ್ತಾರೆ. ಬೆಳ್ತಂಗಡಿ ತಾಲೂಕಿನಲ್ಲಿ ನಡೆಯುವ ಪುರುಷರ ಕುಣಿತದಲ್ಲಿ ಬ್ರಾಹ್ಮಣ, ಪರಿಶಿಷ್ಟರನ್ನುಳಿದು ಊರಿನ ಇತರ ಎಲ್ಲಾ ಜಾತಿ ಜನಾಂಗದವರು ಭಾಗವಹಿಸುತ್ತಾರೆ. ಆದರೆ ಮುಖ್ಯ ಪಾತ್ರಗಳನ್ನು ಗೌಡರೇ ನಿರ್ವಹಿಸುತ್ತಾರೆ. ಈ ಕುಣಿತವನ್ನು ಸುಗ್ಗಿ ತಿಂಗಳ ಹುಣ್ಣಿಮೆಯ ಸಂದರ್ಭದಲ್ಲಿ ಕುಣಿಯುತ್ತಾರೆ. ಊರಿನ ಮುಖ್ಯಸ್ಥರೊಬ್ಬರ ಮುಂದಾಳುತನದಲ್ಲಿ ನಿಗದಿತವಾದ ಸ್ಥಳದಲ್ಲಿ ಜನರೆಲ್ಲ ಸೇರುತ್ತಾರೆ. ಕುಣಿತಕ್ಕೆ ಬೇಕಾದ ಸಿದ್ಧತೆಗಳನ್ನು ಅಲ್ಲೇ ನಡೆಸುತ್ತಾರೆ. ಮೊದಲು ದೇವರ ಮೂರ್ತಿಯನ್ನು ಸಿದ್ಧಮಾಡುತ್ತಾರೆ. ಮೆದು ಮರದ ಹಲಗೆಯನ್ನು ಉಪಯೋಗಿಸಿ ಅರ್ಧ ಗೋಲಾಕಾರದಲ್ಲಿ ಅದನ್ನು ರಚಿಸಿ ಅದರ ಅಂಚನ್ನು ಕೆಂಪು ಬಟ್ಟೆಯನ್ನು ಸುತ್ತಿ ದಂಡೆಯನ್ನು ಮಾಡುತ್ತಾರೆ. ಮಲ್ಲಿಗೆ, ಹಿಂಗಾರಗಳಿಂದ ಶೃಂಗರಿಸಿ ಅಲಂಕಾರ ಮಾಡುತ್ತಾರೆ. ಮಧ್ಯದಲ್ಲಿ ಒಂದು ಕನ್ನಡಿಯನ್ನು ಜೋಡಿಸುತ್ತಾರೆ. ಇದು ಒಟ್ಟು ಆಕಾರದಲ್ಲಿ ಜಾತ್ರೆಯ ಸಂದರ್ಭದಲ್ಲಿ ದರ್ಶನ ಪಾತ್ರಿ ಹೊರುವ ಬಲಮೂರ್ತಿಯ ಪ್ರಭಾವಳಿಯಂತಿರುತ್ತದೆ. ಇದನ್ನು ಕದ್ರಿ ಮಂಜುನಾಥನ ಮೂರ್ತಿಯೆಂದು ಕರೆಯುತ್ತಾರೆ. ಪುರುಷರ ಕುಣಿತದಲ್ಲಿರುವ ಮುಖ್ಯಪಾತ್ರಗಳು - ದೇವರ ಮೂರ್ತಿಯನ್ನು ಹೊರುವ ಒಬ್ಬ ಬ್ರಾಹ್ಮಣ ವೇಷಾಧಾರಿ ಒಬ್ಬ ಅರ್ಚಕ, ಒಬ್ಬ ಕೊಡಮಂತಾಯ, ಸನ್ಯಾಸಿ, ದಾಸಯ್ಯ, ಕೊರಗು ವೇಷ ಹಾಗೂ ಇನ್ನಿತರ ಸಣ್ಣ ಪುಟ್ಟ ವೇಷಗಳು ಇರುತ್ತವೆ.

ಬಿಳಿ ಪಂಚೆಯ ಕಚ್ಚೆ, ತಲೆಗೆ ಜುಟ್ಟು, ಹಣೆಗೆ ಮೈಗೆ ಗಂಧನಾಮ, ಹಾಗೂ ಜನಿವಾರ ಹಾಕಿಕೊಂಡು ದೇವರ ಪೂಜೆ ಮಾಡುವ ಅರ್ಚಕ, ತಲೆಗೆ ಮುಂಡಾಸು ಬಿಳಿ ಪಂಚೆಯ ಕಚ್ಚೆ ಹಾಕಿಕೊಂಡು ದೇವರನ್ನು ಹೊರುವ ಪಾತ್ರಿ. ಈ ದೇವರಿಗೆ ರಕ್ಷಕನಾಗಿ ಕೈಯಲ್ಲಿ ಮಣಿ (ಗಂಟೆ) ಕಡ್ತಲೆ (ಖಡ್ಗ) ಹಿಡಿದುಕೊಂಡು ತಲೆಗೆ ಮುಂಡಾಸು ಹಾಗೂ ಬಿಳಿ ಪಂಚೆಯನ್ನು ಕಚ್ಚೆ ಕಟ್ಟಿಕೊಂಡಿರುವ ಕೊಡಮಂತಾಯ. ಹಾಗೆಯೇ ಮೈಯನ್ನು ಒಣಗಿದ ಬಾಳೆ ಎಲೆಯಲ್ಲಿ ಪೂರ್ತಿಯಾಗಿ ಮುಚ್ಚಿಕೊಂಡು ತೆಂಗಿನ ನಾರಿನಿಂದ ಮಾಡಿದ ಗಡ್ಡ, ಸೊಂಟದ ಎದುರು ಭಾಗದಲ್ಲಿ ಉದ್ದಕ್ಕೆ ಹೊರಕಾಣುವಂತೆ ಬೈಹುಲ್ಲಿಗೆ ಬಾಳೆ ನಾರಿನಿಂದ ಸುತ್ತಿ ಉದ್ದವಾದ ಶಿಶ್ನವನ್ನು ಕಟ್ಟಿಕೊಂಡು, ಬುಡಭಾಗ ಸೀಳಾಗಿದ್ದು ನೆಲಕ್ಕೆ ಬಡಿಯುವಾಗ ಸದ್ದು ಬರುವಂತ ಬಿದಿರಿನಿಂದ ಮಾಡಿದ ದೊಡ್ಡ ದೊಣ್ಣೆಯನ್ನು ಹಿಡಿದುಕೊಂಡಿರುವ ಸನ್ಯಾಸಿಯ ವೇಷ, ಸನ್ಯಾಸಿಯ ವೇಷವನ್ನು ಎರಡು ಅಥವಾ ಮೂರು ಜನರು ಮಾಡುತ್ತಾರೆ. ಮತ್ತೊಬ್ಬ ದಾಸಯ್ಯನ ವೇಷ ಹಾಕುತ್ತಾನೆ ಆತ ಶಂಖ ಮತ್ತು

ಜಾಗಟೆ ಹಿಡಿದಿರುತ್ತಾನೆ. ಉಳಿದಂತೆ ಕೊರಗರ ವೇಷ, ಮುಸ್ಲಿಂ ವೇಷ, ಸ್ತ್ರೀ ವೇಷ, ಹಾಗೆ ಕೆಲವು ವೇಷಗಳು ಇರುತ್ತವೆ. ಉಳಿದ ಜನ ಬಿಳಿ ಅಂಗಿ ತಲೆಗೆ ಜೈರಾಸು ಕಟ್ಟಿಕೊಂಡಿರುವ ಪುರುಷರ ಮಕ್ಕಳು. ಜೊತೆಗೆ ಹಿಮ್ಮೇಳದಲ್ಲಿ ವಾದ್ಯ ಪರಿಕರಗಳಿರುತ್ತವೆ.

## ಪ್ರದರ್ಶನ

ಪುರುಷ ಕುಣಿತಕ್ಕೆ ವೇಷ ಕಟ್ಟಿದ ನಂತರ ಎಲ್ಲರು ಸೇರಿ ಕದ್ರಿ ಮಂಜುನಾಥೇಶ್ವರನನ್ನು ಮತ್ತು ಗ್ರಾಮದೈವವನ್ನು ನೆನೆದು - ನಾವು ಹಾಕಿದ ವೇಷದಲ್ಲಾಗಲಿ, ಕುಣಿತದಲ್ಲಾಗಲಿ ಹಾಗೂ ರಾತ್ರಿಯ ತಿರುಗಾಟದಲ್ಲಿ ಯಾವುದೇ ರೀತಿಯ ತೊಂದರೆಗಳು, ಬಾರದಂತೆ ಕಾಪಾಡಬೇಕೆಂದು ಪ್ರಾರ್ಥಿಸಿ ಊರಿನ ಮನೆಗಳಿಗೆ ಕುಣಿಯುವುದಕ್ಕೆ ಹೊರಡುತ್ತಾರೆ. ಹೋಗುವಾಗ ದಾರಿಯುದ್ದಕ್ಕೂ 'ಡಿಂಬಿಸಾಲೆ' ಎಂಬ ಸೊಲ್ಲನ್ನು ಕೂಗಿ ಹೇಳಿಕೊಂಡು ಹೋಗುತ್ತಾರೆ. ಮನೆಯ ಅಂಗಳದಲ್ಲಿ ಎಲ್ಲರೂ ಸೇರಿದ ಮೇಲೆ ಅಂಗಳದ ಸುತ್ತ ಹೊಯ್ಯ ಹೊಯ್ಯ ಎಂಬ ಸೊಲ್ಲನ್ನು ಹೇಳಿ ಕುಣಿಯುತ್ತಾರೆ. ಮಧ್ಯದಲ್ಲಿ ಸೊಲ್ಲನ್ನು ನಿಲ್ಲಿಸಿ - ಈ ಪುರುಷರ ಮಕ್ಕಳು ಯಾರು, ಯಾವ ತಳದವರು, ಯಾವ ಮಠದವರು, ಎಲ್ಲೆಲ್ಲಿಂದ ಬಂದವರು ಎಂದು ಹೇಳಿ ಮನೆಯ ಯಜಮಾನನನ್ನು ಹೊಗಳಿ, ಈಗ ಆಡಿದಂತ ಆಟ, ಕುಣಿದಂತ ಕುಣಿತ ಚೆನ್ನಾಗಿಲ್ಲ. ಇನ್ನೊಂದು ಆಟ ಸಾಲಾಗಿ ಕುಣಿಯಿರಿ ಪುರುಷರೆ ಎಂದು ಹೇಳಿ ಎಲ್ಲರೂ ಸಾಲಾಗಿ ಕುಣಿಯುತ್ತಾರೆ. ಕುಣಿತ ಮುಗಿದ ಕೂಡಲೇ ದೇವರನ್ನು ಹೊತ್ತವ, ಅರ್ಚಕ ಮತ್ತು ಕೊಡಮಂತಾಯ ಮನೆಯ ಎದುರು ನಿಲ್ಲುತ್ತಾರೆ. ಎಡಗಡೆ ಬಲಭಾಗದಲ್ಲಿ ಪುರುಷರ ಮಕ್ಕಳು ನಿಲ್ಲುತ್ತಾರೆ. ಅರ್ಚಕ ತೀರ್ಥ ಹಾಕಿ ಪೂಜೆ ಮಾಡುತ್ತಾನೆ. ಆಗ ಸನ್ಯಾಸಿಗಳು, ಕೊರಗರು ಅರ್ಚಕನಿಗೆ ಅಶ್ಲೀಲ ಪದಗಳನ್ನು ಹೇಳುತ್ತಾ ದಾರಿಗೆ ಅಡ್ಡ ಬರುತ್ತಾರೆ. ಸನ್ಯಾಸಿಗಳು ಮೊದಲು ನಮ್ಮ 'ಲಕ್‌ಡಿ' (ಶಿಶ್ನ) ಪೂಜೆಯಾಗಬೇಕು ಎಂದು ಹೇಳುತ್ತಾರೆ. ಆಮೇಲೆ ಮತ್ತೊಮ್ಮೆ ಅರ್ಚಕ ನೆಲ ಶುದ್ಧ ಮಾಡಿ ದೇವರ ಪೂಜೆಯನ್ನು ಮಾಡುತ್ತಾನೆ. ಮತ್ತೆ ಕೊಡಮಂತಾಯ ದರ್ಶನದಲ್ಲಿ ಕೊಡುತ್ತಾನೆ. ಇಲ್ಲಿಗೆ ಕುಣಿತದ ಮುಖ್ಯ ಅಂಶ ಮುಗಿಯುತ್ತದೆ.

ಪುರುಷ ಕುಣಿತದ ಪ್ರಧಾನ ಅಂಶಗಳು ಮುಗಿದ ಕೂಡಲೆ ಬೇರೆ ಬೇರೆ ವೇಷಾಧಾರಿಗಳು ಒಬ್ಬೊಬ್ಬರಾಗಿ ಮನೆಯ ಬಾಗಿಲಿಗೆ ಬಂದು ತಮ್ಮ ಪ್ರದರ್ಶನವನ್ನು ನೀಡುತ್ತಾರೆ. ಕೊರಗು, ಸ್ತ್ರೀವೇಷ, ಪೊರ್ಬು, ನರಸನ್ನ, ಮುಸ್ಲಿಂ ವೇಷ, ಮಂಗ ಕುಣಿತ, ದಾಸಯ್ಯ ಇವರೆಲ್ಲ ಪ್ರತ್ಯೇಕವಾಗಿ ಹಣ ಮತ್ತು ತೆಂಗಿನಕಾಯಿಯನ್ನು ಪಡೆದು ಮರೆಯಾಗುತ್ತಾರೆ. ಈ ರೀತಿಯ ವೇಷಗಳು ಜಾತಿ, ಕಸುಬು, ಮತ ಧರ್ಮಗಳ ಕುರಿತಂತೆ ಹಾಸ್ಯ ವಿಡಂಬನೆಗಳನ್ನು ಮಾಡಿ ಎಲ್ಲರಿಗೂ ಮನೋರಂಜನೆಯನ್ನು ನೀಡುತ್ತವೆ. ಹೀಗೆ ರಾತ್ರಿಯಿಂದ ಬೆಳಗ್ಗಿನ ವರೆಗೆ ಮನೆಯಿಂದ ಮನೆಗೆ ಕುಣಿತ ನಡೆಯುತ್ತ ಮುಂದುವರಿಯುತ್ತದೆ. ಈ ಪುರುಷರಿಗೆ ಮನೆಯವರು ಹಣ, ಅಕ್ಕಿ, ತೆಂಗಿನಕಾಯಿಯನ್ನು ನೀಡುತ್ತಾರೆ. ಬೆಳಗಾಗುವಾಗ ಒಂದು ಕಾಸರಕನ ಮರದ ಬುಡದಲ್ಲಿ ತಮ್ಮ ವೇಷಗಳನ್ನೆಲ್ಲ ಕಳಚಿಟ್ಟು ಮತ್ತೆ ಸಂಜೆ ಎಲ್ಲಿ ಸೇರುವುದೆಂದು ನಿಶ್ಚಯ ಮಾಡುತ್ತಾರೆ. ಹೀಗೆ

ಕುಣಿತವು ಸುಗ್ಗಿ ತಿಂಗಳ ಹುಣ್ಣಿಮೆಯ ಸಂದರ್ಭದಲ್ಲಿ ಮೂರು ಅಥವ ಐದು ದಿನಗಳ ವರೆಗೆ ನಡೆಯುತ್ತದೆ. ಪುರುಷರ ಕುಣಿತ ಸಂದರ್ಭದಲ್ಲಿ ಒಂದು ಗ್ರಾಮದ ಪುರುಷರು ಮತ್ತೊಂದು ಗ್ರಾಮದ ಪುರುಷರ ಎದುರುಬದರು ಆಗಬಾರದು ಎಂಬ ನಿಯಮವಿದೆ.

**ಪುರುಷ ಪೂಜೆ**

ಒಂದು ನಿಗದಿತ ದಿನ ನಿಶ್ಚಯ ಮಾಡಿ ಊರಿನ ಮುಖ್ಯಸ್ಥನ ಮನೆಯಲ್ಲೋ ಅಥವಾ ಬಯಲು ಪ್ರದೇಶದಲ್ಲೋ ಪುರುಷರ ಪೂಜೆ ನಡೆಯುತ್ತದೆ. ಅಂದು ಪುರುಷ ಕುಣಿತದಲ್ಲಿ ಭಾಗವಹಿಸಿದ ಎಲ್ಲಾ ಜನರು ಪೂಜೆಯಲ್ಲಿ ಭಾಗಿಗಳಾಗುತ್ತಾರೆ ಮತ್ತು ಪ್ರತಿಯೊಂದು ದಿನಕ್ಕೆ ಒಬ್ಬನಿಗೆ ಒಂದು ಸೇರು ಅವಲಕ್ಕಿಯನ್ನು ಮಜೂರಿಯ ರೂಪದಲ್ಲಿ ಕೊಡುತ್ತಾರೆ. ಕದ್ರಿ ಮಂಜುನಾಥ ದೇವರಿಗೆ ಪುರುಷರ ಲೆಕ್ಕದಲ್ಲಿ ಕಾಣಿಕೆ ಸಲ್ಲಿಸಲಾಗುತ್ತದೆ. ಮತ್ತು ಅಲ್ಲಿರುವ ಪ್ರಸಾದವನ್ನು ತರುತ್ತಾರೆ. ಭಾಗವಹಿಸಿದ ಜನಸಂಖ್ಯೆಯ ಅಂದಾಜಿನಲ್ಲಿ ಅವಲಕ್ಕಿಯನ್ನು ತಂದು ಬೆಲ್ಲ ತೆಂಗಿನಕಾಯಿ ಹಾಕಿ ಅಂಗಳದ ಮಧ್ಯೆ ದೊಡ್ಡ ರಾಶಿ ಹಾಕುತ್ತಾರೆ. ಕೆಲವು ಕಡೆ ಕೋಳಿಯ ಎಡೆಯನ್ನು ಹಾಕಿ ಬಡಿಸುವ ಕ್ರಮವಿದೆ. ಅವಲಕ್ಕಿಯ ರಾಶಿಯ ಎದುರು ದೇವರ ಮೂರ್ತಿಯನ್ನು ಸಿಂಗರಿಸಿ ಪೂಜೆ ಸಲ್ಲಿಸುತ್ತಾರೆ. ಅಂದು ಕುಣಿತದ ಸಂದರ್ಭದಲ್ಲಿ ವೇಷಗಳನ್ನು ನಿರ್ವಹಿಸಿದವರೆಲ್ಲರೂ ರಾಶಿಯ ಎದುರುಗಡೆ ತಮ್ಮ ಪ್ರದರ್ಶನವನ್ನು ನೀಡುತ್ತಾರೆ. ಹಾಗೂ ತಮ್ಮ ಕುಣಿತದ ಸಂದರ್ಭದಲ್ಲಿ ಯಾವುದೇ ರೀತಿಯ ತಪ್ಪುಗಳಿದ್ದರೂ ಅದಕ್ಕೆ ಕದ್ರಿ ಮಂಜುನಾಥ ದೇವರಲ್ಲಿ ಪ್ರಾರ್ಥಿಸುತ್ತಾರೆ. ಸೇರಿದ ಎಲ್ಲರೂ ಪ್ರಸಾದ ರೂಪದಲ್ಲಿ ಅವಲಕ್ಕಿಯನ್ನು ಬಡಿಸುತ್ತಾರೆ. ಆಮೇಲೆ ಪ್ರತಿಯೊಂದು ಮನೆಯವರಿಗೂ ಲೆಕ್ಕಾಚಾರದಂತೆ ಅವಲಕ್ಕಿಯನ್ನು ಹಂಚುತ್ತಾರೆ. ಉಳಿದ ಹಣದಲ್ಲಿ ಗ್ರಾಮಕ್ಕೆ ಬೇಕಾಗುವಂತೆ ಪಾತ್ರೆ ಸಾಮಾಗ್ರಿಗಳು ಅಥವಾ ಕುಣಿತಕ್ಕೆ ಬೇಕಾಗುವಂತೆ ಸಲಕರಣೆಗಳನ್ನು ಖರೀದಿಸುತ್ತಾರೆ. ಈ ರೀತಿಯಾಗಿ ಪುರುಷರು ಕುಣಿತ ಬೆಳ್ತಂಗಡಿ ತಾಲೂಕಿನಲ್ಲಿ ನಡೆಯುತ್ತದೆ.

ಪುರುಷರ ಕುಣಿತಕ್ಕೆ ಸಂವಾದಿಯಾಗಿ ಸುಳ್ಯ ತಾಲೂಕಿನಲ್ಲಿ ಗೌಡ ಜನಾಂಗದವರು ಸಿದ್ಧವೇಶವನ್ನು ನಡೆಸುತ್ತಾರೆ. ಈ ಕುಣಿತದಲ್ಲಿ ಗೌಡರ ಪಾತ್ರ ಭಾಗವಹಿಸುತ್ತಾರೆ. ಸುಗ್ಗಿ ಹುಣ್ಣಿಮೆಯ ಸಂದರ್ಭದಲ್ಲಿ ಹಿರಿಯ ಗೌಡನೊಬ್ಬನ ನೇತೃತ್ವದಲ್ಲಿ ಆಸಕ್ತ ಗೌಡ ಯುವಕರು ಊರಿನ ಭೂತದ ಚಾವಡಿಯಲ್ಲೋ ಅಥವಾ ಊರ ಮುಖಂಡನ ಮನೆಯಂಗಳದಲ್ಲೋ ಒಟ್ಟು ಸೇರಿ ಸಿದ್ಧವೇಶ ನಿರ್ಧಾರ ಮಾಡುತ್ತಾರೆ. ಉತ್ಸಾಹಿಗಳಾದ ಆರು ಅಥವಾ ಏಳು ಜನ ಯುವಕರು ಕುಣಿತಕ್ಕೆ ನಿಲ್ಲುತ್ತಾರೆ. ಅತ್ಯಂತ ಹಾಸ್ಯಪ್ರಜ್ಞೆ ಇರುವ ಒಬ್ಬ ಬ್ರಾಹ್ಮಣ ವೇಷವನ್ನು ಹಾಕುತ್ತಾನೆ. ಕ್ರಿಯಾಶೀಲವಾಗಿರುವ ಮತ್ತೊಬ್ಬ ಸನ್ಯಾಸಿಯ ವೇಷ ಹಾಕುತ್ತಾನೆ. ವಯಸ್ಸಿನಲ್ಲಿ ಹಿರಿಯರಾದವರಲ್ಲಿ ಒಬ್ಬ ದಾಸಯ್ಯನ ವೇಷವನ್ನು ಹಾಕುತ್ತಾನೆ. ಇದಿಷ್ಟು ಸಿದ್ಧವೇಶದ ಪಾತ್ರಗಳು.

ವೇಷ ಹಾಕಿದ ಮೇಲೆ ಸನ್ಯಾಸಿಯನ್ನು ಸಾಲಿನ ಮಧ್ಯದಲ್ಲಿ ನಿಲ್ಲಿಸಿಕೊಂಡು ಊರು ಸುತ್ತಲು ಹೋಗುತ್ತಾರೆ. ಹೋಗುವಾಗ 'ಡಿಂಬಸಾಲೆ' ಎಂಬ ಸೊಲ್ಲನ್ನು ಹಾಕಿಕೊಂಡು ಹೋಗುತ್ತಾರೆ.

ದೀಪವೊಂದನ್ನು ಅಂಗಳದ ಮಧ್ಯೆ ಇಟ್ಟು ವೃತ್ತಾಕಾರದಲ್ಲಿ ಅದರ ಸುತ್ತ ನಿಲ್ಲುವರು. ಒಬ್ಬಾತ ಸೊಲ್ಲನ್ನು ಆರಂಭಿಸುತ್ತಾನೆ.

ಸಿದ್ದುಲಿಂಗ ಮುದ್ದುಲುಂಗ ಸಿದ್ದವೇಸೋ

ನಾವು ಯಾವೂರು ಯಾವ ತಳ ಸಿದ್ದವೇಸೊ

ನಾವು ಕಾಶಿಯ ತಳದವರು ಸಿದ್ದವೇಸೊ || ಎಂದು ಹಾಡುವಾಗ

ಕುಣಿಯುವ ಗುಂಪು 'ಸಿದ್ದವೇಸೊ' ಎಂಬ ಸೊಲ್ಲನ್ನು ಪುನರಾವರ್ತಿಸುತ್ತ ವೃತ್ತಾಕಾರರಾಗಿ ಸುತ್ತಿ ಕುಣಿಯುತ್ತಾರೆ.[೩]

ಇಲ್ಲಿ ಕೂಡ ದಾಸಯ್ಯ ಮತ್ತು ಬ್ರಾಹ್ಮಣನನ್ನು ಸನ್ಯಾಸಿ ಲೇವಡಿ ಮಾಡುತ್ತಾನೆ. ಬ್ರಾಹ್ಮಣ ಮತ್ತು ದಾಸಯ್ಯನನ್ನು ಅಂಗಳ ಸುತ್ತ ಓಡಿಸುತ್ತಾನೆ.

ಹೀಗೆ ಪುರುಷರು ಕುಣಿತ ಮತ್ತು ಸಿದ್ದವೇಶಗಳನ್ನು ಗಮನಿಸುವಾಗ ನಮಗೆ ಮೂಲ ಆಶಯ ಒಂದೇ ಕಂಡರೂ ಪ್ರದರ್ಶನದ ಸ್ವರೂಪದಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ. ಮುಖ್ಯವಾಗಿ

೧. ಸಿದ್ದವೇಶದಲ್ಲಿ ನಿಗತ ಜನರು ಮಾತ್ರ ಭಾಗವಹಿಸಿದರೆ ಪುರುಷರ ಕುಣಿತದಲ್ಲಿ ಸಂಖ್ಯೆಯ ಮಿತಿ ಇಲ್ಲ. ಹಾಗೂ ವೇಷಗಳಿಗೂ ಮಿತಿ ಇಲ್ಲ.
೨. ಸಿದ್ದವೇಶದಲ್ಲಿ ಗೌಡರು ಮಾತ್ರ ಭಾಗವಹಿಸಿದರೆ ಪುರುಷರ ಕುಣಿತದಲ್ಲಿ ಪ್ರಧಾನ ಪಾತ್ರಗಳಲ್ಲಿ ಮಾತ್ರ ಗೌಡರು ನಿರ್ವಹಿಸುತ್ತಾರೆ. ಉಳಿದಂತೆ ಇತರ ಜನಾಂಗದವರು ಸಮಾನಭಾಗಿಗಳು.
೩. ಪುರುಷ ಕುಣಿತದಲ್ಲಿ ದೇವರ ಮೂರ್ತಿಯನ್ನು ಹೊರುವವ ಮತ್ತು ಉತ್ಸವ ಮೂರ್ತಿ ಇರುತ್ತದೆ. ಆದರೆ ಸಿದ್ದವೇಶದಲ್ಲಿ ಉತ್ಸವ ಮೂರ್ತಿ ಇಲ್ಲ.
೪. ಪುರುಷರ ಕುಣಿತದಲ್ಲಿ ಊರಿಗೆ ಬರುವ ಮಾರಿಯನ್ನು ಕಳೆಯುವ ಉದ್ದೇಶವಿದೆ. ಸಿದ್ದವೇಶದಲ್ಲಿ ಈ ಅಂಶಗಳು ಕಂಡುಬರುವುದಿಲ್ಲ.
೫. ಸುಳ್ಯ ತಾಲೂಕಿನಲ್ಲಿ ಪುರುಷರಿಗೆ ಸಂಬಂಧಿಸಿದಂತೆ ಪುರುಷ ಭೂತದ ಆರಾಧನೆ ಇದೆ. ಬೆಳ್ತಂಗಡಿ ತಾಲೂಕಿನಲ್ಲಿ ಪುರುಷ ಭೂತದ ಆರಾಧನೆ ಕಂಡುಬರುವುದಿಲ್ಲ.

ಒಟ್ಟು ಸಿದ್ದವೇಷ ಮತ್ತು ಪುರುಷರ ಕುಣಿತದಲ್ಲಿ ಬ್ರಾಹ್ಮಣ್ಯದ ನಿರಾಕರಣೆ ಇದೆ. ಇದು ಪುರೋಹಿತಶಾಹಿ ಪರಂಪರೆಯ ನಿರಾಕರಣೆಯೂ ಹೌದು. ಮೇಲುವರ್ಗದ ವಿಚಾರ ಪರಂಪರೆಗೆ ವಿರುದ್ಧವಾಗಿ ವೈದಿಕೇತರ ಸಂಪ್ರದಾಯದ ಪಳೆಯುಳಿಕೆಗಳಾಗಿ ಇಂದು ಸಿದ್ದವೇಷ ಮತ್ತು ಪುರುಷರ ಕುಣಿತಗಳು ಉಳಿದುಕೊಂಡಿವೆ.

ಇಂದು ಸಿದ್ದವೇಶ ಮತ್ತು ಪುರುಷರ ಕುಣಿತಗಳ ಪ್ರದರ್ಶನ ಕಡಿಮೆಯಾಗುತ್ತಾ ಬಂದಿದೆ. ಆಧುನಿಕ ಯಾಂತ್ರಿಕ ಜೀವನ ವಿಧಾನದ ಪರಿಣಾಮದಿಂದ ಸಾಂಘಿಕವಾಗಿ ನಡೆಯುವ ಕುಣಿತಗಳಂತ ಕಲಾಪ್ರಕಾರಗಳು ಇಂದು ಕಡಿಮೆಯಾಗುವುದಕ್ಕೆ ಕಾರಣಗಳು ಇರಬಹುದು. ಆದರೆ ಗೌಡ ಜನಾಂಗ ತಮ್ಮದೇ ಆದ ಅನನ್ಯತೆಯನ್ನು ಉಳಿಸಿಕೊಳ್ಳಬೇಕಾದರೆ ಸಿದ್ದವೇಶ ಮತ್ತು ಪುರುಷರ ಕುಣಿತವನ್ನು ಉಳಿಸಿಬೆಳೆಸಬೇಕಾದ ಅನಿವಾರ್ಯತೆ ಇದೆ.

## ಟಿಪ್ಪಣಿ

### ಕನ್ನಡಾನುವಾದ

೧. ಅರಮನೆಯವರು ಕಿರುಮನೆಯವರು ಶೃಂಗೇರಿ ಗುರುಮಠಽಲ್ಲಿ ಪಡು ಒಂಬತ್ತು ಮಾಗಣೆ ಮೂಡು ಒಂಬತ್ತು ಮಾಗಣೆ ಹತ್ತು ತಾಯಿ ಮಕ್ಕಳು ಹದಿನೆಂಟು ಬಳಿ (ಗೋತ್ರ) ಬಂಧುಗಳಲ್ಲಿ ಇದ್ದ ದಿಬ್ಬಣಿಗರಲ್ಲಿ ಬಂದ ದಿಬ್ಬಣಿಗರಲ್ಲಿ, ಸಕಲ ಸಮಸ್ತರಲ್ಲಿಯೂ ಗಂಡಿಗೂ------ಹೆಣ್ಣಿಗೂ------ವೀಳ್ಯ ಕಟ್ಟುತ್ತೇನೆಂದು ಹೇಳುತ್ತಾರೆ. ಉಳಿದವರು ಒಳ್ಳೆಯದು ಎನ್ನುತ್ತಾರೆ.

೨. ಸಾವಿನ ಸಂದರ್ಭದಲ್ಲಿ ಹೇಳುವ ಪಾರಿ. (ಕನ್ನಡ ಭಾಷಾಂತರ)

ಕಷ್ಟಕಾಯಿಲೆ ಬಂತು. ನೋಡುವಷ್ಟು ನೋಡಿದರು, ಕೇಳುವಷ್ಟು ಕೇಳಿದರು ಅವರಿಗೆ ಬದುಕಲು ಆಯುಷ್ಯ ಕಡಿಮೆ ಆಯಿತು. ಈ ಕುಟುಂಬದವರಿಗೆ ಇಟ್ಟುಕೊಳ್ಳುವ ಪುಣ್ಯ ಕಡಿಮೆ ಆಯಿತು. ಇಂದು ಸ್ವಾಮಿ ಪಾದ ಸೇರಿದರು. ಈ ಹೊತ್ತಿನಲ್ಲಿ ಕುಟುಂಬ ಸಂಸಾರದವರು, ಮಕ್ಕಳು ಮರಿಗಳು, ತುಳಸಿ ತುದಿಯಲ್ಲಿ ನೀರು ಬಿಟ್ಟರು. ಕುಟುಂಬ ಜಾತಿಯವರನ್ನು ಕರೆದರು, ಹೆಣ ಸ್ನಾನ ಮಾಡಿಸಿದರು ಹೆಣ ಶೃಂಗಾರ ಮಾಡಿದರು. ಬಂಗ ಬಾಳೆಯ ಎಲೆ ತಂದರು. ತೆಂಕು ಬಡಗು ಚಾವಡಿಯಲ್ಲಿ ಹೆಣ ಮಲಗಿಸಿದರು. ಬಿಳಿ ಬಟ್ಟೆ ಮುಸುಕು ಹಾಕಿದರು ತಲೆ ಮೇಲೆ ಕಾಲ ಕೆಳಗೆ ಅಕ್ಕಿ ಭತ್ತ ಕಟ್ಟಿದರು ತೆಂಗಿನ ಕಾಯಿಯ ಗಡಿಯಲ್ಲಿ ತಲೆ ಮೇಲೆ ಕಾಲ ಕೆಳಗೆ ನಂದಾದೀಪ ಬೆಳಗಿಸಿದರು. ಅಸಣ ಮಸಣದ ಗದ್ದೆಗೆ ಆ ಕಡೆ ಮಾವು ಈ ಕಡೆ ಹಲಸು ಕಡಿಸಿದರು, ಮಸಣದ ಕಾಟ ತೆಂಕುಬಡಗು ಕಟ್ಟಿದರು, ಅಲ್ಲಿಂದ ಬಂದು ಸೂಕರ ಕಟ್ಟಿಸಿದರು ಅರಿಯ ಮುರಿಯ ಸೇರಿಸಿದರು. ಹೆಣಕ್ಕೆ ಮೂರು ಸುತ್ತು ಬಲಿ ಬಂದರು. ಕುಟುಂಬ ಸಂಗಾತರು ಅಂಗೈಯಲ್ಲಿ ಹೆಣ ಹಿಡಿದುಕೊಂಡು, ಮುಂದೆ ಸೂಕರ ಹಿಡಿದುಕೊಂಡು ಮಸಣದ ಗದ್ದೆಗೆ ತೆಗೆದುಕೊಂಡು ಹೋಗಿ ಕಾಟಕ್ಕೆ ಮೂರು ಸುತ್ತು ಬಲಿ ಬಂದು, ತೆಂಕು ಬಡಗು ಹೆಣವನ್ನು ಕಾಟದಲ್ಲಿ ಮಲಗಿಸಿದರು. ಕುಟುಂಬ ಸಂಗಾತರು ಸ್ವರ್ಗ ನೀರು ಕೊಟ್ಟರು. ಮೂರುಸುತ್ತು ಬಲಿ ಬಂದು ತಲೆ ಮೇಲೆ ಕಾಲ ಕೆಳಗೆ ಅಗ್ನಿ ದೇವರನ್ನು ಅರ್ಪಿಸಿದರು ಭೂಮಿಗೆ ಬೂದಿ ಮಾಡಿದರು ಆಕಾಶಕ್ಕೆ ಹೊಗೆ ಕೊಟ್ಟರು. ಸಾವಲರು ಸ್ನಾನ ಮಾಡಿ ಬಂದರು ಸಾವಿನ ಭತ್ತ ಅಳತೆ ಮಾಡಿಸಿದರು, ಸಾವಿಗೆ ದಿನ ಇಟ್ಟರು. 'ಮಸ್ಸ'ನಲ್ಲಿ ಸಾವು ಕರೆಸಿದರು. ಮರುದಿನ ಜಾತಿಯವವನ್ನು ಇಟ್ಟುಕೊಂಡು ಕೊಲ್ಲಿ ಕೂಡಿಸಿದರು. ಐದನೆ ಇಂದು ಅಕ್ಕಿ ಚೆಲ್ಲುವ ಕ್ರಮದಲ್ಲಿ ಇಂದು ಕೂದಲು ತೆಗೆಸಿದರು ಬೂದಿ ಮುಚ್ಚಿ ದೂಪೆ ಮೆತ್ತಿ ಕೊಡಿ ಕಟ್ಟಿಸಿದರು ಅಕ್ಕಿ ಚೆಲ್ಲಿ ಸಾವು ಕರೆದು ಇಂದು ಅಕ್ಕಿ ಚೆಲ್ಲಿಸಿದರು ಅಂದಿನಿಂದ ಇಂದಿನ ತನಕ ಶುದ್ಧ ಮುದ್ರಿಕೆಯಲ್ಲಿ ಇಲ್ಲದಿದ್ದರೂ ಇಂದು ಮಡಿವಾಳ ಗುಂಡಿಯಲ್ಲಿ ಸ್ನಾನ ಮಾಡಿ, ಮಯಿಲೆ ಕಳಚಿ, ಮಡಿ ಉಟ್ಟು ಆ ಜೀವ ಬ್ರಾಹ್ಮಣನಿಗೆ ತಂಬಿಗೆಯಾಗದೆ, ಗಾಣಕ್ಕೆ ಎತ್ತು ಆಗದೆ, ಮೆಟ್ಟಿಲಿಗೆ

ಕಲ್ಲಾಗದೆ, ಶುದ್ಧವಾಗಿಕೊಂಡು ಒಳ್ಳೆ ಜನ್ಮದಲ್ಲಿ ಜನಿಸಿಕೊಂಡಿರಿ ಎಂದು ಪುತ್ತೂರು ಬಲ್ನಾಡ್ ಗೌಡರು ಹೇಳುವ ಪಾರಿ.

೩. ಹೆಚ್ಚಿನ ವಿವರಗಳಿಗೆ ನೋಡಿ, ಪ್ರಾ. ಪುರುಷೋತ್ತಮ ಬಿಳಿಮಲೆ, ೧೯೯೦ ಕರಾವಳಿ ಜನಪದ ಪುಟ ೧೯-೩೦.

## ಗ್ರಂಥ ಋಣ


೧. ಪುರುಷೋತ್ತಮ ಬಿ. ೧೯೮೫, ಸುಳ್ಯ ಪರಿಸರದ ಗೌಡ ಜನಾಂಗ-ಒಂದು ಸಾಂಸ್ಕೃತಿಕ ಅಧ್ಯಯನ (ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದ ಪಿಹೆಚ್‌ಡಿ ಮಹಾಪ್ರಬಂಧ ಅಪ್ರಕಟಿತ) ಮಂಗಳಗಂಗೋತ್ರಿ

೨. ಪುರುಷೋತ್ತಮ ಬಿಳಿಮಲೆ ೧೯೯೦ 'ಕರಾವಳಿ ಜಾನಪದ' ಮಂಗಳಗಂಗೋತ್ರಿ

೩. ದೇವಸ್ಯ ಮನೋಹರ (ಸಂ) ೨೦೦೨ 'ಕಲ್ಯಾಣ ಸ್ಮರಣ ಸಂಚಿಕೆ' ಗೌಡ ಸಮಾಜ (ರಿ) ಮುರ ನೆಹರು ನಗರ ಪುತ್ತೂರು.

೪. ವೈಯಕ್ತಿಕ ಮಾಹಿತಿ ನೀಡಿದವರು - ಓಬಯ್ಯ ಗೌಡ, ಪೆರಿಯಡ್ಕ ಮನೆ, ಚಿಬಿದ್ರೆ ಗ್ರಾಮ, ಬೆಳ್ತಂಗಡಿ ತಾಲೂಕು.

## ೧.೨ 'ಗೌಡ' ಶಬ್ದದ ಪ್ರಾಚೀನತೆ ಮತ್ತು ಅರ್ಥ

'ಗೌಡ' ಪದ ಈಗ ಜನಾಂಗ ಸೂಚಿಯಾಗಿದೆ. ಕ್ರಿ.ಶ. ೭೨೫ರ ಧಾರವಾಡದ ಶಿರಹಟ್ಟಿ ತಾಲೂಕಿನ ಲಕ್ಷ್ಮೀಶ್ವರದ ಶಾಸನದಲ್ಲಿರುವ 'ನಾಡಗಾಮುಂಡ' ಎಂಬ ಶಬ್ದವೇ 'ಗೌಡ' ವೃತ್ತಿಯ ಬಗ್ಗೆ ನಮಗೆ ಸಿಗುವ ಅತ್ಯಂತ ಪ್ರಾಚೀನ ಉಲ್ಲೇಖ. ಕ್ರಿ.ಶ. ೭೫೦ರ ಧಾರವಾಡದ ಹಾನಗಲ್ಲಿನ ಅಡೂರಿನ ಶಾಸನದಲ್ಲಿ ಸಿಗುವ 'ದೋಣ ಗಾಮುಣ್ಡ' ಮತ್ತು 'ಎಳಗಾಮುಣ್ಡ' ಪದಗಳು ವ್ಯಕ್ತಿ ನಾಮದೊಂದಿಗೆ ವೃತ್ತಿ ಸ್ಥಾನವೂ ಹೆಣೆದುಕೊಂಡಿದಕ್ಕೆ ಪ್ರಾಚೀನ ಉದಾಹರಣೆ. 'ಊರಿನಿಂದ ರಾಜನಿಗೆ ಸಲ್ಲಿಸ ಬೇಕಾಗಿರುವ ಆದಾಯವನ್ನು ಸಂಗ್ರಹಿಸುವ ಕೆಲಸ, ಊರಿನ ಕ್ಷೇಮ ಸಮಾಚಾರವನ್ನು ನೋಡಿಕೊಳ್ಳುವ ಕೆಲಸ ಗಾಮುಣ್ಡರದ್ದು ಆಗಿತ್ತು. ಪ್ರಭುಗಾಮುಣ್ಡ, ಪ್ರಭು ಪೆರ್ಗಡೆ, ನಾಯಕ ಪದಗಳು ಗಾಮುಣ್ಡ ಪದಕ್ಕೆ ಸಂವಾದಿಯಾಗಿ ಶಾಸನಗಳಲ್ಲಿ ಬಳಕೆಯಾಗಿವೆ.

''ವರ್ತಮಾನ ಕಾಲದಲ್ಲಿ ಜಾತಿಸೂಚಕವಾಗಿ ಬಳಕೆಯಾಗಿರುವ ಗೌಡ ಶಬ್ದವು ಮೂಲದಲ್ಲಿ ಒಬ್ಬ ವ್ಯಕ್ತಿಯ ಸ್ಥಾನ ಸೂಚಕವಾಗಿತ್ತು. '' (ಡಾ. ಪುರುಷೋತ್ತಮ ಬಿಳಿಮಲೆ ೧೯೮೫-೯) ಕಿಟ್ಟೆಲ್ ನಿಘಂಟುವಿನಲ್ಲಿ ಈ ಶಬ್ದಕ್ಕೆ ' The Chief Officer of a village' (Sudra) ಎಂಬ ಅರ್ಥವಿದೆ. (ಕಿಟ್ಟೆಲ್: ೧೯೭೭-೫೬೭) ಕನ್ನಡ ಸಾಹಿತ್ಯ ಪರಿಷತ್ತಿನವರು ಪ್ರಕಟಪಡಿಸಿದ ನಿಘಂಟುವಿನಲ್ಲಿ 'ಗ್ರಾಮದ ಮುಖ್ಯಸ್ಥ', 'ಗಾಮುಂಡ' ಎಂಬ ವಿವರಣೆಯಿದೆ. (ವೆಂಕಟ ಸುಬ್ಬಯ್ಯ ೧೯೭೫: ೩೦೯). 'ಅಳಿದ ಊರಿಗೆ ಉಳಿದವನೇ ಗೌಡ' ಎಂಬ ಜನಪ್ರಿಯ ನುಡಿಗಟ್ಟಿನಲ್ಲಿಯೂ ಇದೇ ಅರ್ಥದ ವಿವರವಿದೆ. ಶಾಸನಗಳಲ್ಲಿ ಸ್ಥಾನ ಸೂಚಕವಾದ ಅರ್ಥವಿದೆ. ಗ್ರಾಮದ ಹಿತರಕ್ಷಣೆಗೋಸ್ಕರ ಇನ್ನಿತರ ಕೆಲವು ಅಧಿಕಾರಗಳೊಂದಿಗೆ ದುಡಿಯುವವನೇ 'ಗೌಡ', ಶ್ಯಾನಭೋಗ, ಪಟೇಲ, ಕರಣಿಕ, ಗುರಿಕಾರ ಮೊದಲಾದವು ಗೌಡನೊಂದಿಗೆ ಇದ್ದ ಇತರ ಸ್ಥಾನಗಳು.

'ಗ್ರಾಮುಣ್ಡ' ವೃತ್ತಿ ಆನುವಂಶಿಕವಾಗಿ ಬರುತ್ತಿದ್ದುದರಿಂದಲೇ ಅದೊಂದು ಪ್ರತ್ಯೇಕ ಜಾತಿಯಾಗಲು ಕಾರಣವಾಯಿತು ಎಂದು ಊಹಿಸಬಹುದು. ಕ್ರಿ.ಶ. ೧೦೭೯ರ ಅರಸಿಕೆರೆ ಶಾಸನದಲ್ಲಿ, ಗಂಡು ಮಕ್ಕಳಿಲ್ಲದ ಕಾರಣ ಬಾಚಲದೇವಿಯೇ 'ಗೌಡಿಕೆಧನ' ಸ್ವೀಕರಿಸಿದ್ದರ ಬಗ್ಗೆ ಉಲ್ಲೇಖವಿದೆ. ವಿಜಯನಗರ ಕಾಲಕ್ಕೆ 'ಗ್ರಾಮಗವುಡ'ನಿದ್ದಂತೆ 'ಸ್ಥಳದ ಗವುಡಿಕೆ' ಎಂಬ ಹುದ್ದೆಯಿತ್ತು. ಈ ವೃತ್ತಿಯಿಂದ 'ಗವುಡ'ರುಗಳ ಸಂಖ್ಯೆ ಇನ್ನಷ್ಟು ಹೆಚ್ಚಾಗಿದೆ ಎಂಬುದು ಮುಖ್ಯ.

೮ ಮತ್ತು ೯ನೆಯ ಶತಮಾನದಲ್ಲಿ ಸ್ಪಷ್ಟವಾಗಿ ವೃತ್ತಿ ಅಥವಾ ಸ್ಥಾನಸೂಚಕವಾಗಿದ್ದ 'ಗಾಮುಣ್ಡ' ಶಬ್ದವು ೧೧ನೆಯ ಶತಮಾನದ ಕೊನೆಯಭಾಗದಲ್ಲಿ ತನ್ನ ಅರ್ಥವನ್ನು ಹಿಗ್ಗಿಸಿಕೊಂಡಿತು. ೧೨ನೆಯ ಶತಮಾನದ ಕೊನೆಯ ಭಾಗಕ್ಕಾಗುವಾಗ ಸಮಸ್ತ ಪ್ರಜೆಗಳಿಗೂ, ಅನ್ವಯಿಸುವಷ್ಟು ವಿಶಾಲಾರ್ಥವನ್ನು ಪಡೆದುಕೊಂಡಿತು. 'ಗೌಡಿಕೆ' ವೃತ್ತಿ ಮಾಡಿದವರೂ ಅವರ ಮನೆಯವರೂ ಆನುವಾಂಶಿಕವಾಗಿ 'ಗವುಡ'ರೆಂದೇ ಕರೆಯಿಸಿಕೊಂಡದ್ದು ಶಾಸನಗಳಿಂದ ಖಚಿತವಾಗಿ ತಿಳಿದು ಬರುತ್ತದೆ.

### ೧.೩ ಗೌಡ ಶಬ್ದದ ನಿಷ್ಪತ್ತಿ

‘ಗೌಡ’ ಶಬ್ದದ ಬಗೆಗೆ ವಿದ್ವಾಂಸರು ಮಂಡಿಸಿದ ವಾದಗಳು ಈ ಕೆಳಗಿನಂತಿವೆ.

ಅ) ‘ಗ್ರಾಮವೃದ್ಧ’ ಎಂಬ ಶಬ್ದದಿಂದ ‘ಗಾವುಂಡ’ ಸಿದ್ಧಿಸಿದೆ, ಕಾಲಾಂತರದಲ್ಲಿ ಇದುವೇ ‘ಗೌಡ’ ಎಂದಾಗಿದೆ. (ನರಸಿಂಹಯ್ಯ, ೧೯೬೧: ೧೧೦)

ಆ) ಸಂಸ್ಕೃತ ‘ಗೋವ್ರ’ ಪದಗಿಂದ ಗೌಡಪದ ನಿಷ್ಪನ್ನವಾಗಿದೆ. (ಸ್ಟುವರ್ಟ್, ೧೮೯೧-೧೬)

ಇ) ದ್ರಾವಿಡ ಮೂಲದ್ದಾದ ‘ಗೌಡ’ ಶಬ್ದವು ‘ಬೆಟ್ಟ’ ಎಂಬರ್ಥವನ್ನು ಕೊಡುತ್ತದೆ. (ಒಪರ್ಟ್, ೧೮೯೧.೧೦೩)

ಈ) ‘ಗೌಡ’ ಎಂದರೆ ಯಜಮಾನ ಎಂದರ್ಥ. ಅದು ರಾಜ್ಯದ ಆಡಳಿತಾಂಗದ ಒಂದು ಹುದ್ದೆಯ ಹೆಸರನ್ನು ಸೂಚಿಸುತ್ತದೆ. (ದೊಡ್ಡಪ್ಪ ಗೌಡ, ೧೯೭೮: ೧೮-೧೯)

ಉ) ‘ಗೂಡ್’ ಎಂದರೆ ‘ಬೆಲ್ಲ’ ಎಂದರ್ಥ, ಬಂಗಾಳದಲ್ಲಿ ಕಬ್ಬು ಬೆಳೆಯುವುದರಿಂದ ಅದನ್ನು ‘ಗೂಡ್ ದೇಶ’ ಎಂದು ಕರೆಯುತ್ತಾರೆ. ಗೌಡರು ಮೂಲತಃ ಬಂಗಾಳದವರು. ಅಂದರೆ ಬೆಲ್ಲ ಮಾಡುವವರು ಎಂಬ ಅರ್ಥವಿದೆ. ಇಂದಿಗೂ ಮಂಡ್ಯ ಕಡೆಯ ಗೌಡರ ಪ್ರಮುಖ ವೃತ್ತಿ ಬೆಲ್ಲ ಮಾಡುವುದೇ ಆಗಿದೆ (ಪೂವಯ್ಯ, ೧೯೭೦: ೧೪)

ಊ) ಗಂಗಾತೀರದಿಂದ ದಕ್ಷಿಣಕ್ಕೆ ಬಂದ ಹಟ್ಟಿಕಾರರಲ್ಲಿ ಗೋವಳರದ್ದು ಎಂಬ ಒಂದು ಶಾಖೆ. ಈ ‘ಗೋ’ಪಾಲರೇ ಗೌಡರಾದರು, (ಪೊನ್ನಪ್ಪ, ೧೯೭೦- ೧೬-೧೭)

ಎ) ಸಂಸ್ಕೃತದ ‘ಗ್ರಾಮಕೂಟ’ ಪದವು ಪ್ರಾಕೃತದಲ್ಲಿ ‘ಗ್ರಾಮ ಊಡ-ಗಾಮವುಡ’ ಎಂಬ ರೂಪವನ್ನು ತಳೆದು ಕನ್ನಡದಲ್ಲಿ ‘ಗಾಮುಂಡ’ ಆಗಿದೆ. ಇದೇ ಕ್ರಮೇಣ ಗಾವುಂಡ - ಗೌಡ- ಗೌಡ ಎಂದಾಗಿದೆ. (ಚಿದಾನಂದ ಮೂರ್ತಿ, ೧೯೭೦-೩೫೬).

ಇಂದು ಬಳಕೆಯಾಗುವ ‘ಗೌಡ’ ಪದವನ್ನು ತುಳು ಮಾತನಾಡುವ ಮಂದಿ ‘ಗವುಂಡ’, ‘ಗಾವುಂಡ’ ‘ಗವುಂಡೇರ್‌ನಕ್ಲು’ ಎಂದು ಉಚ್ಚರಿಸುತ್ತಾರೆ. ಶಾಸನಗಳಲ್ಲಿರುವ ಪ್ರಯೋಗವೂ ಇದೇ ಆಗಿದೆ. ‘ಗಾವುಂಡ’ ಪದದ ಅರ್ಥದಲ್ಲಿಯೇ ‘ಗ್ರಾಮಕೂಟ’ ಎಂಬ ಪದವನ್ನು ವಿಜಯನಗರ ಕಾಲದ ಶಾಸನಗಳಲ್ಲಿಯೂ ಬಳಸಿದ್ದಾರೆ (ಸೋಮಶೇಖರ ಶರ್ಮ, ೧೯೪೮.೨೧೯). ಗ್ರಾಮದ ‘ಅಧಿಕಾರಿ’ ಎಂಬುದು ಅದರ ಮೂಲ ಅರ್ಥ. ಇಂದಿಗೂ ‘ಗ್ರಾಮ ಗೌಡ’, ‘ಊರ ಗೌಡ’ ಎಂಬ ಪ್ರಯೋಗಗಳಲ್ಲಿ ಇದೇ ಅರ್ಥವಿದ್ದರೂ ಒಟ್ಟಾರೆಯಾಗಿ ಅದು ಜಾತಿ ಸೂಚಕವಾಗಿದೆ. ಒಟ್ಟಿನಿಂದ ಈ ಶಬ್ದ ಬೆಳಕಿಗೆ ಬಂದುದನ್ನು ಹೀಗೆ ನಿರೂಪಿಸಬಹುದು.

ಗ್ರಾಮಕೂಟ (ಸಂಸ್ಕೃತ) > ಗಾಮವಾಡ-ಗಾಮ ಉಡ (ಪ್ರಾಕೃತ) > ಗಾಮುಣ್ಣ (ಕನ್ನಡ) > ಗಾಮುಂಡ > ಗಾವುಂಡ > ಗವುಂಡ > ಗೌಂಡ > ಗೌಡ. ಗಾವುಂಡ > ಗೌಂಡ > ಗೌಡ - ಪ್ರಸ್ತುತ ‘ಗೌಡ’ ಪದವೇ ಬಳಕೆಯಲ್ಲಿದೆ.

### ೧.೪ ಗೌಡ ಜನಾಂಗದ ಪೂರ್ವ ಪರಿಚಯ

ಗೌಡರು ಯಾರು? ದಕ್ಷಿಣ ಕನ್ನಡ ಪರಿಸರಕ್ಕೆ ಗೌಡರು ಮೂಲ ನಿವಾಸಿಗಳೇ? ಕರಾವಳಿಯ ಈ ಪರಿಸರಕ್ಕೆ ಗೌಡರು ಎಲ್ಲಿಂದ ವಲಸೆ ಬಂದರು? ಮೊದಲಾದ ಪ್ರಶ್ನೆಗಳು ಉದ್ಭವಿಸುತ್ತವೆ. (ಟಿಪ್ಪಣಿ-೩). ಡಾ. ಪುರುಷೋತ್ತಮ ಬಿಳಿಮಲೆಯವರು ಗೌಡರನ್ನು ಒಕ್ಕಲಿಗರೆಂದು ಗುರುತಿಸಿದ್ದಾರೆ. 'ಒಕ್ಕಲಿಗ' ಪದಕ್ಕೆ 'ಬೇಸಾಯಗಾರ' ಎಂದು ಕಿಟ್ಟೆಲ್ ಅರ್ಥಕೋಶದಲ್ಲಿ ಅರ್ಥವಿದೆ. ಮಂಗರಸರ ಕಾಲದಲ್ಲಿ 'ಕೃಷಿಯ ಮಾಳ್ಪ ಒಕ್ಕಲಿಗ' ಎಂಬ ಪ್ರಯೋಗವಿತ್ತು. ಕೃಷಿ ಪ್ರಧಾನವಾದ ವೃತ್ತಿಯುಳ್ಳ ವರೆಲ್ಲರೂ ಒಕ್ಕಲಿಗರೇ ಆಗಿದ್ದಾರೆ. ಅದರಲ್ಲೂ ಮುಖ್ಯವಾಗಿ ಹೊಲವನ್ನು ಒಕ್ಕುವ ಕೆಲಸ. ಹೊಲವನ್ನು ಒಕ್ಕುವ ಕೆಲಸಮಾಡುತ್ತಿದ್ದ ಒಕ್ಕಲಿಗರು ಕರ್ನಾಟಕಕ್ಕೆ ಹೊರಗಿನಿಂದ ಬಂದವರೇ ಅಥವಾ ಅವರು ಇಲ್ಲಿಯ ಮೂಲನಿವಾಸಿಗಳಾಗಿದ್ದವರೇ ಎಂದು ನಿರ್ಣಯಿಸಲು ಸಾಕಷ್ಟು ಆಧಾರಗಳಿಲ್ಲ. ಕರ್ನಾಟಕದ ಪ್ರಾಚೀನ ಮತ್ತು ಪ್ರಖ್ಯಾತವಾದ ಗಂಗ ಅರಸರು ಒಕ್ಕಲಿಗ ಮೂಲದವರೆಂದು ವಿದ್ವಾಂಸರು ಸಾಧಾರವಾಗಿ ತರ್ಕಿಸಿದ್ದಾರೆ. ತಮ್ಮ ರಾಜ್ಯ ಶಿಥಿಲವಾದ ಬಳಿಕ, ಮೂಲ ಕಸುಬಿಗೇ ಹಿಂದಿರುಗಿದ ಇವರು ಅಭಿಮಾನದಿಂದ 'ಗಂಗ'ಕಾರರು ಎಂದು ಕರೆಯಿಸಿಕೊಳ್ಳುತ್ತಿದ್ದರು. ಕಾಲಾಂತರದಲ್ಲಿ ಕರ್ನಾಟಕದಾದ್ಯಂತ ಹರಡಿಕೊಂಡು ಅತ್ಯಂತ ದೊಡ್ಡ ಕೃಷಿಕರ ಪಂಗಡವೆಂದು ಇಂದು ಗುರುತಿಸಲು ಸಾಧ್ಯವಾಗುತ್ತಿದೆ. ಹಾಸನ ಜಿಲ್ಲೆಯಲ್ಲಿರುವ ಈ ಗಂಗಡಿಕಾರರೇ ಸುಳ್ಯ ಪರಿಸರದತ್ತ ವಲಸೆ ಹೋಗಿದ್ದಾರೆ ಎನ್ನಲು ಸಾಕಷ್ಟು ಕಾರಣಗಳಿವೆ. ಹಾಸನ ಜಿಲ್ಲೆಯ ಮಂಜರಾ ಬಾದಿನ ಸುತ್ತ ಮುತ್ತಲಿನ ಪ್ರದೇಶಗಳೆಲ್ಲ ಒಟ್ಟು ಸೇರಿ 'ಐಗೂರು ಸೀಮೆ' ಎಂದು ಕರೆಸಿಕೊಳ್ಳುತ್ತಿದೆ. ಕ್ರಿ.ಶ. ೧೫೭೦ರಲ್ಲಿ ಈ ಸೀಮೆಯನ್ನು ಕೃಷ್ಣಪ್ಪ ನಾಯಕನೆಂಬುವನು ಆಳಿಕೊಂಡಿದ್ದ. ಇವನು ತುಳುನಾಡಿನ ಕೆಲವು ಭಾಗಗಳಿಗೂ ಅಧಿಕಾರಿಯಾಗಿದ್ದಂತೆ ಡಾ.ಕೆ.ವಿ. ರಮೇಶರು 'A History of South Kanara (1970) ಕೃತಿಯಲ್ಲಿ ಚರ್ಚಿಸಿದ್ದಾರೆ. ಇವನ ಕಾಲದಲ್ಲಿ ಶೃಂಗೇರಿ ಸೀಮೆಯಿಂದ 'ದೇವರ ಮಕ್ಕಳು' ಎಂದು ಕರೆಸಿಕೊಳ್ಳುವ ಬಿಲ್ಲವರು ಐಗೂರಿಗೆ ವಲಸೆ ಬಂದಿದ್ದಾರೆ. ಈ ಕೃಷ್ಣಪ್ಪ ನಾಯಕನ ವಂಶಜನಾದ ಮೂರನೇ ವೆಂಕಟಾದ್ರಿ ನಾಯಕನು ಪ್ರಜಾಕಂಟಕನಾಗಿದ್ದಂತೆ ಐತಿಹ್ಯಗಳಿವೆ. ಹೀಗೆ ಲಿಂಗಾಯತ ನಾಯಕರುಗಳ ಕಾಲದಲ್ಲಿ ಐಗೂರು ಸೀಮೆಯಿಂದ ಗಂಗಡಿಕಾರ ಒಕ್ಕಲಿಗರು ದಕ್ಷಿಣ ಕನ್ನಡದ ಪರಿಸರಕ್ಕೆ ವಲಸೆ ಬಂದವರಿರಬೇಕು. ದಕ್ಷಿಣ ಕನ್ನಡ ಪರಿಸರದ ಗೌಡರಿಗೂ ಐಗೂರು ಸೀಮೆಯ ಗಂಗಡಿಕಾರರ ಒಕ್ಕಲಿಗರಿಗೂ ಇಂದಿಗೂ ಗುರುಮಠ ಶೃಂಗೇರಿಯೇ ಆಗಿದೆ. ಪ್ರತೀ ವರ್ಷವು ತೆರವು ಹಣವನ್ನು ಗುರುಮಠಕ್ಕೆ ಎರಡೂ ಕಡೆಯವರೂ ಒಪ್ಪಿಸಬೇಕು. (ಟಿಪ್ಪಣಿ.೪).

ದಕ್ಷಿಣ ಕನ್ನಡ ಪರಿಸರದಲ್ಲಿ ಸುಮಾರು ಎರಡು ಲಕ್ಷಕ್ಕೂ ಅಧಿಕ ಸಂಖ್ಯೆಯಲ್ಲಿ ಗೌಡರಿದ್ದಾರೆ. ಬಿಸಿಲೆ, ಕುಮಾರಪರ್ವತದ ಬುಡದಲ್ಲಿ ಒತ್ತೊತ್ತಾಗಿ ವಾಸಿಸುವ ಇವರ ಸಂಖ್ಯೆ ಕರಾವಳಿ ಕಡೆ ಬಂದಂತೆ ವಿರಳವಾಗುತ್ತಾ ಬಂದಿದೆ. ಐಗೂರಿನಿಂದ ಸುಬ್ರಹ್ಮಣ್ಯ ಪರಿಸರಕ್ಕೆ ಬಂದ ಜನರಿಗೆ ಕುಮಾರಧಾರಾ ನದಿಯ ಎರಡು ದಂಡೆಗಳಲ್ಲಿರುವ ಫಲವತ್ತಾದ ಭೂಮಿ ಕೃಷಿಯೋಗ್ಯವಾಗಿ

ಕಂಡಿರಬಹುದು.

ಸುಳ್ಯ ಪರಿಸರದಲ್ಲಿ ಒಂದು ಲಕ್ಷಕ್ಕಿಂತಲೂ ಅಧಿಕ ಸಂಖ್ಯೆಯಲ್ಲಿ ಗೌಡರಿದ್ದಾರೆ. ಹಾಗಾಗಿ ಸುಳ್ಯ ಪರಿಸರ ದಕ್ಷಿಣ ಕನ್ನಡ ಜಿಲ್ಲೆಯಲ್ಲೆ ಗೌಡರ ಸಂಖ್ಯೆಯ ದೃಷ್ಟಿಯಲ್ಲಿ ಮೊದಲ ಸ್ಥಾನದಲ್ಲಿದೆ. ಪುತ್ತೂರು (ಉಪ್ಪಿನಂಗಡಿಯೂ ಸೇರಿ), ವಿಟ್ಲದಲ್ಲಿ ಸಂಖ್ಯೆಯ ದೃಷ್ಟಿಯಲ್ಲಿ ಸುಳ್ಯಕ್ಕಿಂತ ಕಡಿಮೆಯಾದರೂ ಉಳಿದ ಜನಾಂಗಗಳಿಗಿಂತ ಗೌಡರೇ ಹೆಚ್ಚು. ಹೀಗೆ ನಿಧಾನವಾಗಿ ಜನಸಂಖ್ಯೆ ಹೆಚ್ಚಿದಂತೆ ಗೌಡರು ಪಶ್ಚಿಮದ ಕಡೆ ಹರಡಿಕೊಂಡಿದ್ದಾರೆ. ಬಂಟ್ವಾಳ, ಬೆಳ್ತಂಗಡಿ, ಮಂಗಳೂರಿನ ಪರಿಸರದಲ್ಲಿ ಈಗಿನ್ನೂ ವಿರಳವಾಗಿಯೇ ಇದ್ದಾರೆ. ಸುಳ್ಯ ಪರಿಸರದ ಸುಬ್ರಮಣ್ಯದ ಸಮೀಪದಲ್ಲಿರುವ ಕೂಜುಗೋಡಿನ ವಿಶಾಲ ಜಾಗದಲ್ಲಿ ವಾಸಿಸುತ್ತಿರುವ ಗೌಡರನ್ನು ಅತೀ ಪ್ರಾಚೀನರೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಪಾಡ್ದನಗಳಲ್ಲಿರುವ ವಿವರಗಳನ್ನು ಮತ್ತು ಗೌಡರು ವಾಸಿಸುತ್ತಿರುವ ಪ್ರದೇಶಗಳನ್ನು ಗಮನಿಸಿದರೆ ಗೌಡರು ತುಳುನಾಡಿಗೆ ಎರಡು ದಾರಿಯಾಗಿ ಬಂದಿದ್ದಾರೆಂದು ಹೇಳಬಹುದು. (ನೋಡಿ: ಪುರುಷೋತ್ತಮ ಬಿ. ೧೯೮೫:೧೪-೨೨) ಹಾಗಾಗಿ ದಕ್ಷಿಣ ಕನ್ನಡದ ಪರಿಸರಕ್ಕೆ ಗೌಡರು ಮೂಲನಿವಾಸಿಗಳಲ್ಲ. ಇವರು ಹಾಸನ ಜಿಲ್ಲೆಯ ಐಗೂರು ಸೀಮೆಯಿಂದ ಕ್ರಿ.ಶ. ೧೪೫೦-೧೬೦೦ರ ಮಧ್ಯೆ ಕರಾವಳಿಗೆ ವಲಸೆ ಬಂದಿದ್ದಾರೆ. ವಲಸೆ ಬಂದ ಕಾಲದಲ್ಲಿ ರಾಗಿ ಪ್ರಧಾನ ಬೆಳೆಯಾಗಿದ್ದರೂ ಅನಂತರದ ಕಾಲದಲ್ಲಿ ಆ ಸ್ಥಾನವನ್ನು ಭತ್ತ ಮತ್ತು ಅಡಿಕೆ ಆಕ್ರಮಿಸಿಕೊಂಡಿತು. (ಟಿಪ್ಪಣಿ. ೫). ಭತ್ತವನ್ನು ಹಣವನ್ನಾಗಿ ಮಾರ್ಪಡಿಸುವ ಬ್ರಿಟಿಷರ ಧೋರಣೆಯನ್ನು ಪ್ರತಿಭಟಿಸಿದ ಗೌಡರು ಕ್ರಿ.ಶ. ೧೮೩೦ರ ದಶಕದಲ್ಲಿ 'ಅಮರ ಸುಳ್ಯ'ದ ದಂಗೆಗೆ ಕಾರಣರಾದರು. ಪರಿಣಾಮವಾಗಿ ಆಳರಸರ ಅವಕೃಪೆಗೆ ತುತ್ತಾಗಿ ಹಿಂದುಳಿದರು. ಸ್ವಾತಂತ್ರ್ಯಾನಂತರದಲ್ಲಿ ಅಡಿಕೆ ಪ್ರಧಾನ ಬೆಳೆಯಾಯಿತು. ಭತ್ತದ ಗದ್ದೆಗಳೆಲ್ಲವೂ ಅಡಿಕೆ ತೋಟಗಳಾದವು. ಜೊತೆಗೆ ಕಾಡೆಲ್ಲಾ ಕಡಿದು ರಬ್ಬರ್ ಕೃಷಿ, ಕರಿಮೆಣಸು ಕೃಷಿ ಸುಳ್ಯ ಪರಿಸರದಲ್ಲಿ ಹಬ್ಬಿತು. ಈ ದಿನ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಳ್ಯ ಪುತ್ತೂರಿನ ಗೌಡರೆಂದರೆ ಶ್ರೀಮಂತರು ಎಂಬ ಹೆಗ್ಗಳಿಕೆ ಬಂದಿದೆ. ಶ್ರೀಮಂತಿಕೆಯೊಂದಿಗೆ ಸುಳ್ಯದಲ್ಲಿ ಕುರುಂಜಿಯವರ ಶಿಕ್ಷಣ ಸಂಸ್ಥೆಗಳೂ ಬೆಳೆದು ನಿಂತುವು. ಸುಳ್ಯ ಪರಿಸರದ ಗೌಡರ ಮಕ್ಕಳು ಉನ್ನತ ಶಿಕ್ಷಣ ಓದುವುದಕ್ಕೂ ಇಲ್ಲಿನ ಕೃಷಿ ಕ್ಷೇತ್ರ ಪೂರಕವಾಯಿತು. ಶಿಕ್ಷಣ ಕ್ಷೇತ್ರದಲ್ಲಿ ಕೃಷಿ ಆರಂಭಿಸಿದ ಶ್ರೀ ಕುರುಂಜಿ ವೆಂಕಟರಮಣ ಗೌಡರು ಅಮರ ಸುಳ್ಯದ ಶಿಲ್ಪಿಯಾದರು. ಈ ಪರಿಸರದ ಗೌಡ ಜನಾಂಗಕ್ಕೆ ಇದೊಂದು ಹೆಮ್ಮೆಯ ಸಂಗತಿ.

### ೧.೫ ಗೌಡರ ಕುಟುಂಬ ಪದ್ಧತಿ

ಗೌಡರ ಕುಟುಂಬಗಳಲ್ಲಿ ವಿಭಕ್ತ ಕುಟುಂಬ ಮತ್ತು ಅವಿಭಕ್ತ ಕುಟುಂಬಗಳೆಂದು ಎರಡು ಪ್ರಭೇದಗಳಿವೆ. ಅವಿಭಕ್ತ ಕುಟುಂಬಗಳಲ್ಲಿ ಸದಸ್ಯರ ಸಂಖ್ಯೆ ನೂರಕ್ಕೂ ಮಿಕ್ಕಿರುತ್ತದೆ (ಟಿಪ್ಪಣಿ ೬). ಈ ಎರಡೂ ನಮೂನೆಯ ಕುಟುಂಬದ ಸದಸ್ಯರ ಸ್ಥಾನಮಾನಗಳು ಸಾಂಪ್ರದಾಯಿಕ

ಪದ್ಧತಿಗಳಿಗನುಸಾರವಾಗಿಯೇ ಇರುತ್ತದೆ. ಭಾವನಾತ್ಮಕ ಸಂಬಂಧಗಳಿಗೆ ಇಲ್ಲಿ ಹೆಚ್ಚು ಬೆಲೆ ಇರುತ್ತದೆ. ರಕ್ತ ಸಂಬಂಧ ಕುಟುಂಬದ ವ್ಯಾಪ್ತಿಯನ್ನು ನಿರ್ಧರಿಸುವ ಮೂಲಭೂತ ಅಂಶ.

ಪ್ರಾಯದಲ್ಲಿ ಅತ್ಯಂತ ಹಿರಿಯನಾದವನು ಅವಿಭಕ್ತ ಕುಟುಂಬದ ಮುಖ್ಯಸ್ಥನಾಗಿ ಕೆಲಸ ನಿರ್ವಹಿಸುತ್ತಾನೆ. ಕುಟುಂಬದ ಹಿರಿತನ ಇಲ್ಲಿ ಆನುವಂಶಿಕವಾಗಿ ಬರದೆ ಹಿರಿತನಕ್ಕನುಗುಣವಾಗಿ ಬರುತ್ತದೆ. ಮನೆಯೊಳಗೆ ಉದ್ಭವವಾಗುವ ಎಲ್ಲಾ ರೀತಿಯ ಸಮಸ್ಯೆಗಳನ್ನು ಮನೆಯ ಹಿರಿಯನ ಮೂಲಕ ಪರಿಹರಿಸಿಕೊಳ್ಳುತ್ತಾರೆ. ಇಡೀ ಕುಟುಂಬದವರ ದುಡಿಮೆ, ಉತ್ಪತ್ತಿ ಮತ್ತು ಅದರ ವಿತರಣೆಯ ಮೇಲೆ ಆ ಹಿರಿಯನಿಗೆ ಹಿಡಿತವಿರುತ್ತದೆ.

ವಿಭಕ್ತ ಕುಟುಂಬದಲ್ಲಿ ಪತಿ, ಪತ್ನಿ ಮತ್ತು ಮಕ್ಕಳು ಸೇರಿರುತ್ತಾರೆ. ಇಲ್ಲಿ ತಂದೆಯೇ ಪ್ರಧಾನ ವ್ಯಕ್ತಿ. ವೃದ್ಧರಿಗೆ ಅಧಿಕಾರವಿಲ್ಲ. ಕುಟುಂಬದ ಪ್ರಧಾನ ರಕ್ಷಕನಾಗಿ ತಂದೆ ಕೆಲಸ ಮಾಡುತ್ತಾನೆ. ಅವನ ಮಕ್ಕಳು ಮದುವೆಯಾಗುವವರೆಗೆ ಅವನೊಂದಿಗಿರುತ್ತಾರೆ. ವಿವಾಹದ ನಂತರ ತಮಗೊದಗಿದ ಭೂಮಿಯನ್ನು ಕೃಷಿಮಾಡುತ್ತಾ ಬದುಕುತ್ತಾರೆ. ಹಾಗಾಗಿ ವಿಭಕ್ತ ಕುಟುಂಬದಲ್ಲಿ ಗಂಡು ಮಕ್ಕಳಿಗೆ ಮದುವೆಯಾಗುವುದು ಪ್ರಧಾನ ಘಟನೆಯಾಗುತ್ತದೆ.

ಗೌಡರು 'ಪಿತೃ ಪ್ರಧಾನ' ಕುಟುಂಬದವರು. ಪಿತೃಪ್ರಧಾನ ಕುಟುಂಬದಲ್ಲಿ 'ಬಳಿ ಪದ್ಧತಿ'ಯನ್ನು ತಂದೆಯಿಂದ ಗುರುತಿಸುತ್ತಾರೆ. (ಟಿಪ್ಪಣಿ-೭) ಹಾಗಾಗಿ ಆಸ್ತಿಯ ಹಕ್ಕು ತಂದೆಯಿಂದ ಮಗನಿಗೆ ಹೋಗುತ್ತದೆ. ದಕ್ಷಿಣ ಕನ್ನಡದಲ್ಲಿ ಬ್ರಾಹ್ಮಣರನ್ನು ಹೊರತು ಪಡಿಸಿ ಬಂಟರು, ಪೂಜಾರಿ, ಮೂಲ್ಯ ಮೊದಲಾದ ಪ್ರಧಾನ ಜನಾಂಗಗಳಲ್ಲಿ ಮಾತೃಪ್ರಧಾನದ 'ಅಳಿಯ ಕಟ್ಟು' ಜಾರಿಯಲ್ಲಿದೆ. ಆದರೆ ಗೌಡರಲ್ಲಿ ಪಿತೃಪ್ರಧಾನದ 'ಮಕ್ಕಳ ಕಟ್ಟು' ಜಾರಿಯಲ್ಲಿದೆ. (ಟಿಪ್ಪಣಿ -೮).

ಪಿತೃಪ್ರಧಾನ ಕುಟುಂಬವಾದುದರಿಂದ ಗೌಡರಲ್ಲಿ ತಂದೆಯ ಕಡೆಯ ರಕ್ತ ಸಂಬಂಧಿಗಳಿಗೆ ಹೆಚ್ಚು ಮಹತ್ವ ದೊರೆಯುತ್ತದೆ. ತಂದೆಯ ತಂದೆ 'ಅಜ್ಜ'ನೆಂದೂ ತಾಯಿಯ ತಾಯಿ 'ಅಜ್ಜಿ'ಯೆಂದೂ ಕರೆಸಿಕೊಳ್ಳುತ್ತಾರೆ. ಈ ಅಜ್ಜ-ಅಜ್ಜಿಗೆ ಮೊಮ್ಮಕ್ಕಳ ಮೇಲೆ ವಿಶೇಷ ಮಮತೆ ಇರುತ್ತದೆ. ಇಂತಹ ಸಂದರ್ಭದಲ್ಲಿ ಅಜ್ಜಿ ಮೊಮ್ಮಗುವಿಗೆ ಕಥೆ ಹೇಳುತ್ತಾಳೆ. ತನ್ನ ಕುಲದ ಬಗೆಗೆ, ಆಚಾರ- ವಿಚಾರದ ಬಗೆಗೆ ವಿವರಿಸುತ್ತಾಳೆ. ಮೊಮ್ಮಗು ತನ್ನ ಜನಾಂಗದ ಆಚಾರ-ವಿಚಾರ ಮತ್ತು ಪರಂಪರೆಯ ವಿವರಗಳನ್ನು ಕಲಿಯುತ್ತದೆ.

### ೧.೬. ಗೌಡ ಜನಾಂಗದ ಆಡಳಿತ ಪದ್ಧತಿ

ಗೌಡರಲ್ಲಿ ಕುಟುಂಬವು ಪ್ರಾಥಮಿಕ ಘಟಕವಾಗಿದೆ. ಕುಟುಂಬವನ್ನು ನೋಡಿಕೊಳ್ಳಲು ಊರಗೌಡ, ಮಾಗಣೆಗೌಡ ಮತ್ತು ಕಟ್ಟೆಮನೆ ಗೌಡರೆಂದು ಮೂರು ವಿಧದಲ್ಲಿ ಆಡಳಿತ ಕ್ರಮವಿದೆ. ಕುಟುಂಬದ ಹಿರಿಯರು ಯಜಮಾನರಾಗಿರುತ್ತಾರೆ. ಇವರಲ್ಲಿ ಕೆಲವು ಕುಟುಂಬದವರು ಬುದ್ಧಿವಂತ ರಾಗಿರುತ್ತಾರೆ. ಇಂತಹ ಹಲವು ಕುಟುಂಬಗಳಿಗೆ ಮತ್ತು ಬುದ್ಧಿವಂತರಿಗೆ ಊರಿಗೊಬ್ಬ 'ಊರು ಗೌಡ' ಇದ್ದಾನೆ. ಊರು ಗೌಡನು ಭಾಗವಹಿಸಲು ಅಸಾಧ್ಯವಾದಲ್ಲಿ 'ಒತ್ತು ಗೌಡ'ನೊಬ್ಬ ಇರುತ್ತಾನೆ.

ಭೂತಾರಾಧನೆ, ಮದುವೆ, ಸಾವು, ನ್ಯಾಯ ಪಂಚಾಯತಿಗಳಲ್ಲಿ ಊರು ಗೌಡನಿಗೆ ಪ್ರತ್ಯೇಕ ಆಮಂತ್ರಣ ಮತ್ತು ಸ್ಥಾನಮಾನ ಕೊಡುತ್ತಾರೆ. ಪ್ರತಿಯೊಂದು ಊರಿನಲ್ಲೊಬ್ಬ ಊರುಗೌಡ, ಇಂಥ ನಾಲ್ಕರಿಂದ ಆರುಜನ ಊರು ಗೌಡರನ್ನು ನೋಡಿಕೊಳ್ಳಲು ಒಬ್ಬ 'ಮಾಗಣೆ ಗೌಡ' ಇದ್ದಾನೆ. ಊರು ಗೌಡರಿಗಿಂತ ಈತ ಹೆಚ್ಚು ಪ್ರತಿಷ್ಠಿತ. ಇಂತಹ ಒಂಬತ್ತು ಮಾಗಣೆ ಗೌಡರನ್ನು ನೋಡಿಕೊಳ್ಳಲು ಒಬ್ಬ 'ಕಟ್ಟೆ ಮನೆ' ಗೌಡ ಇದ್ದಾನೆ. ಇವನು ಗೌಡರ ಆಡಳಿತದಲ್ಲಿ ಸರ್ವಶ್ರೇಷ್ಠ. ಇಂತಹ ಉಚ್ಚ ಆಡಳಿತದ ಎರಡು ಕಟ್ಟೆಮನೆಗಳಿವೆ.

೧. ಕೂಜುಗೋಡು ಕಟ್ಟೆ ಮನೆ-ಸುಳ್ಯ ಪರಿಸರ -ಗೌಡ ಕನ್ನಡ ಭಾಷೆ

೨. ಬಲ್ನಾಡು ಕಟ್ಟೆಮನೆ-ಪುತ್ತೂರು ಪರಿಸರ -ತುಳು ಭಾಷೆ

ಕಟ್ಟೆಮನೆಗಳಲ್ಲಿ ಕೂಜುಗೋಡು ಬಹು ಪ್ರಾಚೀನವೆಂದು ಈಗಾಗಲೇ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. (ನೋಡಿ ನಕ್ಷೆ:೨)

**ಗೌಡರ ಒಳಾಡಳಿತ**



ಗೌಡ ಜನಾಂಗದ ಕ್ಷೇಮಾಭ್ಯುದಯವನ್ನು ನೋಡುವ ಎರಡೂ ಕಟ್ಟೆ ಮನೆಗಳು ನೇರವಾಗಿ ಶೃಂಗೇರಿ ಪೀಠದ ಅಧಿಕಾರಕ್ಕೆ ಒಳಪಟ್ಟಿವೆ. ಕಟ್ಟೆಮನೆ ಗೌಡರನ್ನು ನೇಮಕ ಮಾಡುವ ಹಕ್ಕು ಶೃಂಗೇರಿ ಪೀಠಕ್ಕಿದೆ. ಗೌಡರು ಅದನ್ನು ಗುರುಮಠವೆಂದು ಕರೆಯುತ್ತಾರೆ. ಭಾಷೆಯ ದೃಷ್ಟಿಯಲ್ಲಿ ಎರಡೂ

ಕಟ್ಟೆಮನೆಗಳೂ ಭಿನ್ನ. ಪುತ್ತೂರು ಬಲ್ನಾಡು ಕಟ್ಟೆಮನೆಯ ಪರಿಸರಕ್ಕೆ ಸೇರಿದವರು ತುಳು ಭಾಷೆ ಮಾತನಾಡುತ್ತಾರೆ. ಕೂಜುಗೋಡು ಕಟ್ಟೆಮನೆ ಪರಿಸರಕ್ಕೆ ಸೇರಿದವರು ಅರೆಕನ್ನಡ ಅಥವಾ ಗೌಡ ಕನ್ನಡ ಭಾಷೆ ಮಾತನಾಡುತ್ತಾರೆ.

## ೨. ಗೌಡ ಜನಾಂಗವನ್ನು ಪ್ರತಿನಿಧಿಸುವ ಜನಪದ ಕಥೆಗಳ ಪಠ್ಯ ಪರಿಚಯ

ಸ್ಟಿತ್ ಥಾಮ್ಸನ್ ಮತ್ತು ಆರ್ನೆ ಥಾಮ್ಸನ್ನರ 'Types of Folktales' ಗ್ರಂಥದಲ್ಲಿ ಜನಪದ ಕಥೆಗಳನ್ನು ಈ ರೀತಿಯಾಗಿ ವರ್ಗೀಕರಿಸಲಾಗಿದೆ.

೨.೧. ಪ್ರಾಣಿ ಕಥೆಗಳು (Animal Tales)

೨.೨. ಸಾಮಾನ್ಯ ಜನಪದ ಕಥೆಗಳು (Ordinary Folktales)

೨.೩. ಹಾಸ್ಯ ಮತ್ತು ಹಸಿ ಕಥೆಗಳು (Jokes and Anecdotes)

೨.೪. ಸೂತ್ರಕಥೆಗಳು (Formula Tales)

೨.೫. ವರ್ಗೀಕರಿಸದ ಕಥೆಗಳು (Unclassified Tales)

ಈ ವರ್ಗೀಕರಣಗಳ ಒಂದು ಪ್ರಾಣಿಕಥೆಯನ್ನೂ ಆರು ಸಾಮಾನ್ಯ ಜನಪದ ಕಥೆಗಳನ್ನೂ ಮತ್ತು ಒಂದು ಹಾಸ್ಯ ಮತ್ತು ಹನಿಕಥೆಗಳನ್ನೂ ಪ್ರಬಂಧವಲ್ಲಿ ಚರ್ಚಿಸಲಾಗಿದೆ.

### ೨.೧. ಪ್ರಾಣಿಕಥೆಗಳು - ಕಾಡು ಪ್ರಾಣಿಗಳು

### ೨.೧.೧. ನರಿಯ ಕಥೆ

ಒಂದು ಊರಿಗೆ ಒಬ್ಬ ಊರು ಗೌಡನಿದ್ದನು. ಆತನ ಮನೆಯಲ್ಲಿ ನರಿ ಮತ್ತು ಹಂದಿ ಕೆಲಸಗಾರರಾಗಿ ಸೇರುತ್ತವೆ. ಒಂದು ದಿನ ನರಿ ಗದ್ದೆ ಉಳುವಾಗ ಗದ್ದೆಯ ಮಧ್ಯೆ ಒಂದು ಕಲ್ಲು ನೇಗಿಲಿಗೆ ಸಿಗುತ್ತದೆ. ಆ ಕಲ್ಲನ್ನು ತೆಗೆಯಲು ಆಗದಿರುವುದರಿಂದ ತೋಟೆ ಹಾಕುವ ಉಪಾಯವನ್ನು ನರಿ ಊರುಗೌಡನಿಗೆ ಹೇಳುತ್ತದೆ. ನರಿಯ ಉಪಾಯದಂತೆ ಕಲ್ಲಿಗೆ ತೋಟೆ ಹಾಕುವ ತಯಾರಿ ಮಾಡುತ್ತಾರೆ. ತೋಟೆಗೆ ಬೆಂಕಿ ಕೊಡಲು ಹಂದಿಯನ್ನು ಕಳುಹಿಸುತ್ತಾರೆ. ಹಂದಿ ಹೆಡ್ಡನಾದುದರಿಂದ ಬೆಂಕಿ ಕೊಡಲು ಒಪ್ಪಿತು. ಬೆಂಕಿ ಕೊಟ್ಟು, ಬೇಗ ಬರಬೇಕೆಂದು ನರಿ ಹೇಳಿರದ ಕಾರಣ ಹಂದಿ ಅಲ್ಲೇ ನಿಂತಿತು. ತೋಟೆ ಸಿಡಿದಾಗ ಹಂದಿಯ ಎರಡೂ ಕಣ್ಣುಗಳು ಹೋದವು. ಕಣ್ಣಿಲ್ಲದ ಹಂದಿಯನ್ನು ನರಿ ಕರೆದುಕೊಂಡು ಗೌಡರ ಮನೆ ದಾರಿ ಹಿಡಿಯಿತು. ಬರುವಾಗ ನರಿಗೆ ಇನ್ನೊಂದು ಉಪಾಯ ಹೊಳೆಯಿತು. ಹಂದಿಯನ್ನು ಕೆರೆಯೊಂದಕ್ಕೆ ಬೀಳುವಂತೆ ಮಾಡಿತು. ಗುಡ್ಡದ ಮೇಲೆ ನಿಂತು ಊರಿಗೆಲ್ಲಾ ಕೂಗಿ ಹೇಳಿತು. ಹಂದಿ ಕೆರೆಗೆ ಬಿದ್ದಿತೆಂದು ಎಲ್ಲಾ ಮನೆಯವರು ದೊಣ್ಣೆ, ಕೋವಿ, ಕತ್ತಿ ತಂದು ಹಂದಿಯನ್ನು ಸಾಯಿಸಿದರು. ಮಾಂಸ ಮಾಡಿದರು. ಈ ಕಡೆಯಲ್ಲಿ ನರಿ ಊರಿಗೆ ಹೋಗಿ ಎಲ್ಲರ ಮನೆಗಳಿಗೂ ಬೆಂಕಿಕೊಟ್ಟು, ಮತ್ತೆ ಜೋರಾಗಿ ಕೂಗಿ ಹೇಳಿತು. ಮನೆಗಳಿಗೆ ಬೆಂಕಿ ಬಿತ್ತೆಂದು ಜನ ಹಂದಿಮಾಂಸ ಬಿಟ್ಟು, ಮನೆಗೆ ಓಡಿದರು. ನರಿ ಹಂದಿಮಾಂಸ ಇದ್ದಲ್ಲಿಗೆ

ಬಂತು. ಬೇಕಾದಷ್ಟು ಮಾಂಸ ತಿಂದು, ಸ್ವಲ್ಪ ಬಾಲದಲ್ಲಿ ಸೇರಿಸಿಕೊಂಡು, ಇನ್ನು ಸ್ವಲ್ಪ ಕೈಕಾಲಲ್ಲಿ ಹಿಡಿದುಕೊಂಡು ಓಡಿತು. ಓಡುವ ರಭಸಕ್ಕೆ ಬಾಲದ ಮಾಂಸವೆಲ್ಲಾ ಬಿದ್ದು ಹೋಯಿತು. ಮಾಂಸ ಬಿದ್ದು ಹೋಯಿತೆಂದು ಕೋಪದಲ್ಲಿ ಬಾಲವನ್ನು ಚೆನ್ನಾಗಿ ಕಲ್ಲಿನಲ್ಲಿ ಗುದ್ದಿತು. ಮಾರನೆಯ ದಿನ ಪಕ್ಕದ ಊರಿನ ಬ್ರಾಹ್ಮಣರ ಮನೆಯಲ್ಲಿ ಮದುವೆ. ಒಬ್ಬ ತುಪ್ಪಕ್ಕೆಂದು ಊರೂರು ಹೋಗುತ್ತಿದ್ದನು. ಅವನಿಗೆ ಬೇಕಾದಷ್ಟು ತುಪ್ಪವನ್ನು ನರಿ ತನ್ನ ಬಾಲದಿಂದ ಹಿಂಡಿಕೊಟ್ಟಿತು. ನರಿಯ ಕುತಂತ್ರದಿಂದಾಗಿ ಮಾರನೆಯ ದಿನ ನರಿಯ ಬೇಟೆ ಮಾಡಿದರು. ಮೇಣದ ಬೊಂಬೆ ಮಾಡಿ ನರಿ ಬರುವ ದಾರಿಗೆ ಇಟ್ಟರು. ನರಿ ಬೊಂಬೆಯನ್ನು ಮುಟ್ಟಿ ಮೈಯೆಲ್ಲಾ ಮೇಣ ಅಂಟಿತು. ಮೇಣ ತೆಗೆಯಲು ನೆಲದಲ್ಲಿ ಬಿದ್ದು ಹೊರಳಾಡಿತು. ಮೈಬಣ್ಣ ಬದಲಾಯಿತು. ಮಾರನೆಯ ದಿನ ನರಿ ಊರಿಗೆ ಬಂತು. ತನ್ನ ಜಾತಿ ಬೇರೆ, ತನಗೆ ಭೂತ ಕಟ್ಟಲು ಗೊತ್ತಿದೆಯೆಂದು ಹೇಳಿತು. ಊರಿನವರೆಲ್ಲಾ ಸೇರಿ ನರಿ ಭೂತ ಕಟ್ಟುವ ದಿನ ನಿರ್ಧಾರ ಮಾಡಿದರು. ನರಿಯು ತನ್ನ ನರಿಜಾತಿಯವರನ್ನೆಲ್ಲಾ ಬರ ಹೇಳಿತು. ಊರೆಲ್ಲಾ ನರಿಗಳು ಸೇರಿದವು. ಊರವರೆಲ್ಲಾ ಭೂತ ಕಟ್ಟಿರುವುದು ನರಿಯೆಂದೇ ತೀರ್ಮಾನಿಸಿ, ಎಲ್ಲಾ ನರಿಗಳನ್ನು ಹೊಡೆದು ಸಾಯಿಸಿದರು.

ಗೌಡ ಜನಾಂಗದಲ್ಲಿ ಪ್ರಚಲಿತವಾಗಿರುವ ಈ ಕಥೆ 'ಜಾಣ ನರಿ'ಯು ತಾನೇ ಮೋಸಗೊಂಡು ಸಾವನ್ನಪ್ಪಿದೆ. ಆಶಯವನ್ನು ವರ್ಗಸೂಚಿ ೫೬Fನ್ನೂ ಒಳಗೊಂಡಿದೆ.

### ೨.೨. ಸಾಮಾನ್ಯ ಜನಪದ ಕಥೆಗಳು (Ordinary Folktales)

**ಅತಿಮಾನುಷ ಸಹಾಯಕರ ವರ್ಗಕ್ಕೆ ಸೇರುವ ಕಥೆಗಳು**

೨.೨.೧ ಒಬ್ಬ ಅರಸನಿದ್ದನು. ಆತನಿಗೆ ಮಕ್ಕಳಿರುವುದಿಲ್ಲ. ಒಮ್ಮೆ ಗದ್ದೆ ಕಡೆ ಸುತ್ತಾಡುತ್ತಿರುವಾಗ ಏಡಿಯೊಂದು ನೂರಾರು ಮರಿಗಳನ್ನು ಕೂಡಿಕೊಂಡು ಆಟವಾಡುತ್ತಿತ್ತು. ಅರಸನಿಗೆ ಏಡಿಯ ಸಂಸಾರವನ್ನು ಕಂಡು ಅಚ್ಚರಿಯಾಯಿತು. ಅರಮನೆಗೆ ಬಂದ ಅರಸ ಯಾರೊಡನೆಯೂ ಮಾತನಾಡದೆ ಮಲಗುವನು. ಅರಮನೆಗೆ ಆ ದಿನ ಒಬ್ಬ ಭಿಕ್ಷುಕ ಬರುವನು. ಮಕ್ಕಳಿಲ್ಲದ ಅರಸನಿಗೆ ಮಕ್ಕಳಾಗುವು ದೆಂದು ಆತ ಹಾರೈಕೆ ಮಾಡುವನು. ಅರಸಿಗೆ ಗರ್ಭನಿಲ್ಲುವುದು. ಆಕೆ ಮೀನನ್ನು ಹೆರುವಳು. ಅರಸ ಮೀನನ್ನು ತೋಟದ ಕೆರೆಯಲ್ಲಿ ಬಿಡುವನು. ಕೆಲವು ವರ್ಷಗಳಾದಾಗ ಮೀನು ದೊಡ್ಡದಾಗುತ್ತದೆ. ನನಗೆ ಮದುವೆಯಾಗಬೇಕೆಂದು ಅರಸನನ್ನು ಒತ್ತಾಯಿಸುತ್ತದೆ. ಅರಸ ಮೀನಿಗೆ ತಕ್ಕ ಹುಡುಗಿಯನ್ನು ಹುಡುಕಿ ಮದುವೆ ಮಾಡುವನು. ಮರುದಿನ ಹುಡುಗಿ ಕೆರೆಯ ಕಡೆ ಹೋದಾಗ ಮೀನು ಹುಡುಗಿಯನ್ನು ನುಂಗಿ ಬಿಡುವುದು. ಮರುದಿನ ಮೀನು ಮತ್ತೆ ಮದುವೆಯಾಗಬೇಕೆಂದು ಒತ್ತಾಯಿಸಿತು. ಹೀಗೆಯೇ ಎರಡನೆಯ ಮದುವೆಯೂ ಏರ್ಪಟ್ಟಿತ್ತು. ಎರಡನೆಯವಳನ್ನೂ ಮೀನು ನುಂಗಿತು. ಮೂರನೆ ಹುಡುಗಿಯನ್ನು ಹುಡುಕಿ ಮದುವೆ ಮಾಡಿದರು. ಹುಡುಗಿಗೆ ಹಿಂದಿನ ಹುಡುಗಿಯರ ಗತಿಯೆಂದು ಊರೆಲ್ಲಾ ಹಂಗಿಸಿದರು. ಹುಡುಗಿ ಬೇಸರದಿಂದ ತೋಟದಲ್ಲಿ ಕುಳಿತಿರಲು ಅಲ್ಲಿಗೆ ಶಿವ ಪಾರ್ವತಿಯರು ಬಂದರು. ಹುಡುಗಿಗೆ ಮೂರು ಮಂತ್ರದ ಕಲ್ಲು ಕೊಟ್ಟು,

ನೀನು ಮೀನಿನ ಹತ್ತಿರ ಹೋಗುವಾಗ ಈ ಕಲ್ಲನ್ನು ಹೊಡೆಯಬೇಕು. ಮದುಮಗಳು ಮೂರು ಕಲ್ಲನ್ನು ಸೆರಗಲ್ಲಿ ಕಟ್ಟಿಕೊಂಡು ಕೆರೆದಂಡೆಗೆ ಹೋದಳು. ಮೀನು ಆಕೆಯನ್ನು ತಿನ್ನಲು ಬರುವುದು. ಮೂರು ಕಲ್ಲನ್ನು ಒಂದೊಂದಾಗಿ ಕೆರೆಗೆ ಎಸೆದಾಗ ಮೀನು ಮನುಷ್ಯ ರೂಪವಾಗಿ ಪರಿವರ್ತನೆ ಹೊಂದುತ್ತದೆ. ಮೀನು ಅರಸು ಕುಮಾರನಾಗುತ್ತಾನೆ. ಕೆಲವು ತಿಂಗಳು ಕಳೆದಾಗ ಆಕೆ ಗರ್ಭಿಣಿ ಯಾಗುತ್ತಾಳೆ. ಆಕೆಯನ್ನು ತವರಿಗೆ ಕರೆದೊಯ್ಯುತ್ತಾರೆ. ತವರಲ್ಲಿ ಆಕೆಗೆ ಮಲತಾಯಿ ಇರುತ್ತಾಳೆ. ಆಕೆಗೊಬ್ಬಳು ಮಗಳಿರುತ್ತಾಳೆ. ಒಂದು ದಿನ ನದಿಗೆ ಸ್ನಾನಕ್ಕೆಂದು ಹೋದಾಗ ಮಲತಾಯಿ ಮಗಳು ಅಕ್ಕನನ್ನು ನೀರಿಗೆ ದೂಡಿ ಬಿಡುತ್ತಾಳೆ. ನೀರಿನಲ್ಲಿ ತೇಲುತ್ತಾ ಹೋಗುವಾಗ ಹಾವೊಂದು ಆಸರೆಯಾಗಿ ಸಿಗುತ್ತದೆ. ಆ ಹಾವಿಗೆ ೧೨ ವರ್ಷಗಳಿಂದ ಒಂದು ಬಾವು ಬಿದ್ದಿತ್ತು. ಇವಳ ಕೈ ಮುಟ್ಟಿದಾಗ ಅದು ಒಡೆಯುತ್ತದೆ. ಅಸಹಾಯಕಳಾದ ಗರ್ಭಿಣಿಗೆ ಆ ಹಾವು ಮಾಯದಲ್ಲಿ ಅರಮನೆಯನ್ನು ನಿರ್ಮಿಸುತ್ತದೆ. ಅವಳಿಗೆ ಅರಮನೆಯಲ್ಲಿ ಹೆರಿಗೆಯಾಗುತ್ತದೆ. ಗಂಡು ಮಗು ಹುಟ್ಟಿತು. ಮಗುವಿಗೆ ಮೀನುಕುಮಾರನೆಂದು ಹೆಸರಿಡುವಳು. ಮಗ ದೊಡ್ಡದಾಗುತ್ತದೆ. ಬಳೆಗಾರನೊಬ್ಬನ ಸಹಾಯದಿಂದ ಅರಸುಕುಮಾರನನ್ನು ಸೇರುತ್ತಾರೆ. ಈಗ ಸುಖವಾಗಿದ್ದಾರೆ.

ಇದೊಂದು ಮಾಂತ್ರಿಕ ಕಥೆ ವರ್ಗಸೂಚಿ: ೪೩೩F ವರ್ಗಕ್ಕೆ ಸೇರಿದೆ.

೨.೨.೨. ಒಂದು ಊರಲ್ಲಿ ಒಬ್ಬ ಧನಿಕನಿರುತ್ತಾನೆ. ಅವನಿಗೆ ಇಬ್ಬರು ಗಂಡು ಮಕ್ಕಳು. ಅವರಿಬ್ಬರನ್ನೂ ಧನಿಕ ದೇಶಾಂತರ ಕಳುಹಿಸುತ್ತಾನೆ. ದೇಶಾಂತರ ಹೋಗುವ ಮಕ್ಕಳಲ್ಲಿ ಒಬ್ಬನಿಗೆ ಗಂಜಿ ಬುತ್ತಿ ಮತ್ತು ಚಂದ್ರಾಯುಧವನ್ನೂ ಇನ್ನೊಬ್ಬನಿಗೆ ಹಣದ ಬುತ್ತಿ ಮತ್ತು ಬೆಳ್ಳಿ ಕುದುರೆ ಯನ್ನೂ ಕೊಡುತ್ತಾನೆ. ಗಂಜಿ ಬುತ್ತಿಯವನು ಹೋಗುವ ದಾರಿಯಲ್ಲಿ ಅರಸನ ಮನೆಯೊಂದು ಸಿಗುತ್ತದೆ. ಅಲ್ಲಿ ಸ್ವಯಂವರವನ್ನು ಏರ್ಪಡಿಸಿರುತ್ತಾರೆ. ಗಂಜಿ ಬುತ್ತಿಯವನು ಆ ಸ್ವಯಂವರವನ್ನು ಗೆಲ್ಲುತ್ತಾನೆ. ಅರಸನ ಮಗಳನ್ನು ಮದುವೆಯಾಗುತ್ತಾನೆ. ಆದರೆ ಅರಸನ ಮಗಳಿಗೆ ಪಾರಿಜಾತದ ಹೂವೊಂದು ಬೇಕೆಂಬ ಆಸೆಯಾಗುತ್ತದೆ. ಆತ ಪಾರಿಜಾತ ಹೂವಿಗಾಗಿ ಸಮುದ್ರದಾಚೆ ಹೊರಡುತ್ತಾನೆ. ಆತನಿಗೆ ಹೋಗುವಾಗ ಆಕಸ್ಮಿಕ ಅಪಾಯಗಳಾದರೆ ಜೀವಸೂಚಿಯಾಗಿ ತುಳಸಿಗಿಡ ಮತ್ತು ನೆಕ್ಕಿಗಿಡ ನೆಡುತ್ತಾನೆ. ಸಮುದ್ರದಾಚೆಯಲ್ಲಿ ಆತನಿಗೆ ಏಳುಜನ ಜಲಕನ್ನೆಯರು ಸಿಗುತ್ತಾರೆ. ಅವರು ಸ್ನಾನಮಾಡುವಾಗ ಒಬ್ಬಳ ಸೀರೆಯನ್ನು ಕದಿಯುತ್ತಾನೆ. ಅವಳು ಕರೆದಳೆಂದು ತಿರುಗಿ ನೋಡುವಾಗ ಆತ ಭಸ್ಮವಾಗುತ್ತಾನೆ. ಜಲಕನ್ನೆಯರು ಬಂದು ದರ್ಭೆ ಕಡ್ಡಿಯಲ್ಲಿ ಮಂತ್ರದ ನೀರು ತಾಗಿಸಿದಾಗ ಜೀವವಾಗುತ್ತಾನೆ. ಅವರು ಅವನಿಗೆ ಮೂರು ಮಂತ್ರದ ಕಲ್ಲು ಕೊಡುವರು. ಮಂತ್ರದ ಕಲ್ಲಿನ ಸಹಾಯದಿಂದ ಪಾರಿಜಾತ ಹೂವು ಕೊಯ್ಯಲು ಮರವೇರುವನು. ಮರದಿಂದ ಜಾರಿಬಿದ್ದು ಸಾಯುವನು. ಸಾವಿನ ಜೀವಸೂಚಿಯಾಗಿ ತುಳಸಿ ಗಿಡ ಮತ್ತು ನೆಕ್ಕಿ ಬಾಡುವುವು. ಅರಸನ ಮಗಳು ಸಮುದ್ರದಾಚೆ ಗಂಡನನ್ನು ಹುಡುಕಲು ಹೊರಟಳು. ಅವನನ್ನು ಹುಡುಕಿ ಬದುಕಿಸುವಳು. ಪಾರಿಜಾತ ಹೂವನ್ನು ಆಕೆಗೆ ಮುಡಿಸುವನು. ಅರಮನೆಗೆ ಬಂದು ಸುಖವಾಗಿರುತ್ತಾರೆ.

ಸಸ್ಯ ಜೀವಿಗಳಿಗೂ ಮಾಂತ್ರಿಕ ಶಕ್ತಿಯಿದೆ ಎಂಬ ನಿರೂಪಣೆ ಮಾರ್ಗಸೂಚಿ: ೫೭೭ ಕಥಾವರ್ಗ.

೨.೨.೩. ಒಂದು ಊರಲ್ಲಿ ಒಬ್ಬ ಅರಸನಿಗೆ ಒಬ್ಬಳೇ ಮಗಳು. ಅರಸ ತನ್ನ ಮಗಳನ್ನು ತಾನೇ ಮದುವೆಯಾಗುವುದೆಂದು ಡಂಗುರ ಸಾರುತ್ತಾನೆ. ಮಗಳಿಗೆ ಅರಸನ ನಿರ್ಧಾರವನ್ನು ಪ್ರತಿಭಟಿಸಲು ಆಗುವುದಿಲ್ಲ. ಏನೂ ಉಪಾಯವಿಲ್ಲದ ಅವಳು ಕಾಲ್ದೀಪವೊಂದರ ಒಳಗೆ ಕುಳಿತು, 'ಸಮುದ್ರದಾಚೆಗೆ ಗಾಳಿ ಬೀಸಿ ಕಾಲ್ದೀಪ ಹೋಗಲಿ, ಸಮುದ್ರಕ್ಕೆ ಬೀಳಲಿ' ಎನ್ನುತ್ತಾಳೆ. ಹಾಗೆ ಗಾಳಿ ಬೀಸಿತು. ಕಾಲ್ದೀಪ ಸಮುದ್ರಕ್ಕೆ ಬಿತ್ತು. ಕಾಲ್ದೀಪ ಸಮುದ್ರದಲ್ಲಿ ತೇಲುತ್ತಿತ್ತು. ಕಾಲ್ದೀಪ ತೇಲುತ್ತಾ ಈ ಊರಿನ ಮಂತ್ರಿಗೆ ಸಿಕ್ಕಿತು. ಮಂತ್ರಿ ಕಾಲ್ದೀಪವನ್ನು ಮನೆಗೆ ತರುವನು. ಮನೆಯಲ್ಲಿ ಈ ಕಾಲ್ದೀಪದ ಒಳಗಿನಿಂದ ಸುಂದರ ಯುವತಿಯೋರ್ವಳು ಬರುವಳು. ಅರಸನ ಮಗಳೆಂದು ತಿಳಿದ ಮಂತ್ರಿ ಅವಳ ಕಣ್ಣು, ಕೈ, ಕಾಲು, ತಲೆ, ದೇಹವನ್ನು ಬೇರ್ಪಡಿಸಿ ಬೇರೆ ಬೇರೆ ಕಡೆಗಳಲ್ಲಿ ಹೊಂಡದಲ್ಲಿ ಹಾಕುವನು.

ಮಂತ್ರಿ ಮನೆಗೆ ಹೂವು ಮಾರುವ ಹುಡುಗಿಯೊಬ್ಬಳು ಬರುವಳು. ಆಕೆಗೆ ಈ ವಿಚಾರ ತಿಳಿದು ಆ ಬೇರ್ಪಟ್ಟ ಅಂಗಗಳನ್ನು ಸೇರಿಸುವಳು. ಅದು ಸುಂದರ ಯುವತಿ ಆಕಾರ ಪಡೆದು ಜೀವ ತುಂಬುವುದು. ಅವಳ ಸೌಂದರ್ಯವನ್ನು ಕಂಡು ಮಂತ್ರಿ ಮಗ ಮದುವೆಯಾಗಿ ಸುಖದಲ್ಲಿರುವರು.

ಮಗಳನ್ನು ಮದುವೆಯಾಗ ಬಯಸುವ ತಂದೆ: ಮಗಳು ಕಾಲುದೀಪವಾಗಿ ರೂಪ ಪರಿವರ್ತನೆ ಯಾದ ಈ ಕಥೆಯ ವರ್ಗಸೂಚಿ ೫೧೦.

೨.೨.೪. ಒಂದು ಊರಲ್ಲಿ ಗಂಡ ಹೆಂಡತಿ ಮತ್ತು ಇಬ್ಬರು ಮಕ್ಕಳು. ಮೊದಲ ಮಗು ಗಂಡು. ಆತ ಗದ್ದೆ ಕೆಲಸ ಮಾಡುತ್ತಾನೆ. ಎರಡನೆಯದು ಹೆಣ್ಣುಮಗು. ಆಕೆ ಅಡುಗೆ ಕೆಲಸ ಮಾಡುತ್ತಾಳೆ. ಒಂದು ದಿನ ಅಣ್ಣ ಗದ್ದೆ ಕೆಲಸ ಮಾಡುವಲ್ಲಿಗೆ ತಂಗಿ ಬುತ್ತಿ ಊಟ ತರುತ್ತಾಳೆ. ಆಕೆ ಅಡುಗೆ ಮಾಡಿ ಬುತ್ತಿ ತರುವಾಗ ಸ್ವಲ್ಪ ತಡವಾಗುತ್ತದೆ. ಆಗ ಅಣ್ಣ ತಂಗಿಯೊಂದಿಗೆ ಕೋಪಗೊಂಡು ಕಲ್ಲಲ್ಲಿ ಗುದ್ದಿ ಮುಳ್ಳು ಚುಚ್ಚುತ್ತಾನೆ. ತಂಗಿ ಕೂಗುತ್ತಾ ಮನೆಗೆ ಬಂದು ಅಣ್ಣ ಕೊಟ್ಟ ಶಿಕ್ಷೆಯನ್ನು ತಂದೆಗೆ ವಿವರಿಸುತ್ತಾಳೆ. ಮಗನ ವರ್ತನೆಯನ್ನು ತಿಳಿದ ಅಪ್ಪ ಆತನನ್ನು ಕೊಲ್ಲುವ ಸಂಚು ಹೂಡುತ್ತಾನೆ. ಅವನು ಮಧ್ಯಾಹ್ನ ಬರುವಾಗ ಹಟ್ಟಿಯ ಬಾಗಿಲಿಗೆ ಹಾವು ಬಿಡುತ್ತಾನೆ. ಎತ್ತುಗಳನ್ನು ಹೊಡೆದುಕೊಂಡು ಬಂದ ಮಗನನ್ನು ಹಾವು ಕಚ್ಚಿ ಸಾಯಿಸುತ್ತದೆ. ಮಗನನ್ನು ಹೊಂಡದಲ್ಲಿ ಹಾಕಿ ಮುಚ್ಚುತ್ತಾನೆ. ಈ ಹೊಂಡದ ಮೇಲೊಂದು ಸಂಪಿಗೆ ಗಿಡ ಬೆಳೆಯುತ್ತದೆ. ಅದು ಬೆಳೆದು ಮರವಾಗಿ ಹುಟ್ಟುತ್ತದೆ. ಹೂವುಕೊಯ್ಯಲು ಹೋದ ಮಗಳನ್ನು ಮರ ನಿಂದಿಸುತ್ತದೆ. ಮಗನ ಪುನರ್ ಜನ್ಮವೆಂದು ತಿಳಿದು ಅಪ್ಪ ಆ ಮರವನ್ನು ಕಡಿದು ಹಾಕುತ್ತಾನೆ.

ಮನುಷ್ಯ ಮರವಾಗುವ, ರೂಪ ಪರಿವರ್ತನೆ ಗುಣ, ಅತಿಮಾನುಷ ಶಕ್ತಿಯ ಈ ಕಥೆಯು ವರ್ಗಸೂಚಿ:೪೫೦ B ಆಗಿದೆ.

೨.೨.೫. ಒಬ್ಬನಿಗೆ ಬೆಳ್ಳಿ ಜುಟ್ಟಿನ ಮಗಳು ಚಿನ್ನ ಹೊಕ್ಕಳಿನ ಮಗ ಹುಟ್ಟುತ್ತಾರೆ. ಒಮ್ಮೆ ಅಣ್ಣ ತಂಗಿ ಗೊಬ್ಬರ ಹಾಕುತ್ತಾರೆ. ನಂತರ ಅವರಿಬ್ಬರೂ ನದಿಗೆ ಸ್ನಾನಕ್ಕೆ ಹೊಗುತ್ತಾರೆ. ತಂಗಿ ನದಿಯ ಮೇಲ್ಭಾಗದಲ್ಲಿ ಸ್ನಾನ ಮಾಡುತ್ತಾಳೆ. ತಂಗಿಯ ಒಂದು ಕೂದಲು ಅಣ್ಣನ ಹೊಕ್ಕಳಿಗೆ ಸುತ್ತಿಕೊಳ್ಳುತ್ತದೆ. ಅಣ್ಣ ಅದೇ ಕೂದಲಿನ ಹುಡುಗಿಯನ್ನು ಮದುವೆಯಾಗಬೇಕೆಂದು ಹಟ

ಹಿಡಿಯುತ್ತಾನೆ. ಊರಿನ ಯಾವ ಭಾಗದಲ್ಲೂ ಬೆಳ್ಳಿ ಕೂದಲಿನ ಹೆಣ್ಣು ಸಿಗುವುದಿಲ್ಲ. ಅಣ್ಣ ತಂಗಿಯನ್ನು ಮದುವೆಯಾಗುವುದೆಂದು ಹಟ ಹಿಡಿಯುತ್ತಾನೆ. ಅಣ್ಣನ ಹಟದಿಂದ ತಂಗಿಗೆ ಬೇಸರವಾಗುತ್ತದೆ. ಆಗ ಅವಳಿರುವ ಕೋಣೆಗೆ ಹೆಗ್ಗಣವೊಂದು ಬರುತ್ತದೆ. ಆಕೆಯ ಕಷ್ಟವನ್ನು ತಿಳಿದ ಹೆಗ್ಗಣ ಸುರಂಗ ಮಾರ್ಗ ಮಾಡಿ ಆಕೆಯನ್ನು ಕಾಡಿಗೆ ಬಿಡುತ್ತದೆ. ಅಲ್ಲಿ ಅವಳು ನೇರಳೆ ಮರ ಹತ್ತಿ ಕುಳಿತುಕೊಳ್ಳುತ್ತಾಳೆ. ಅವಳ ದುಃಖದ ಕಣ್ಣೀರು ಕೆರೆಯಾಗುತ್ತದೆ. ಮನೆಯಿಂದ ಯಾರೇ ಬಂದು ಕರೆದರು ಆಕೆ ಇಳಿಯುವುದಿಲ್ಲ. ಕೊನೆಗೆ ಅಣ್ಣ ಬಂದು ಕರೆಯುತ್ತಾನೆ. ಮರವೇರುತ್ತಾನೆ. ಅಣ್ಣ ಕೊಂಬೆಗೆ ಹೋದಾಗ ಆಕೆ ಗೆಲ್ಲಿಗೆ ಹೋಗುತ್ತಾಳೆ. ಅಣ್ಣ ಗೆಲ್ಲಿಗೆ ಹೋದಾಗ ಆಕೆ ನೀರಿಗೆ ಹಾರಿ ಬೀಳುತ್ತಾಳೆ. ಬಾಳೆ ಮೀನಾಗಿ ಪರಿವರ್ತನೆಯಾಗುತ್ತಾಳೆ. ಅಣ್ಣನೂ ಹಾರುತ್ತಾನೆ. ಮುಗುಡು ಮೀನಾಗುತ್ತಾನೆ.

ಇದೇ ಕಥೆಯ ಇನ್ನೊಂದು ಪಾಠ.

ಒಬ್ಬ ಅರಸನಿಗೆ ಏಳು ಜನ ಗಂಡು ಮಕ್ಕಳು. ಒಬ್ಬಳೇ ಹೆಣ್ಣು ಮಗಳು. ಅವರಲ್ಲಿ ಆರು ಜನ ಗಂಡು ಮಕ್ಕಳಿಗೆ ಮದುವೆಯಾಗಿರುತ್ತದೆ. ಒಂದು ದಿನ ಕೊನೆಯವ ಒಂದು ಹೂವಿನ ಗಿಡ ನೆಡುತ್ತಾನೆ. ಅದರಲ್ಲಿ ಒಂದು ಹೂವು ಆಗುತ್ತದೆ. ಆ ಹೂವನ್ನು ಕೊಯ್ದು ಮನೆಯ ಬಾಗಿಲ ಮೇಲೆ ಇಡುತ್ತಾನೆ. ಈ ಹೂವನ್ನು ಮುಡಿದವರನ್ನು ಮದುವೆಯಾಗುವುದೆಂದು ಪಣ ತೊಡುತ್ತಾನೆ. ಅದನ್ನು ತಂಗಿ ಮುಡಿಯುತ್ತಾಳೆ. ಅಣ್ಣ ತಂಗಿಯನ್ನು ಮದುವೆಯಾಗುವುದೆಂದು ಹಠ ಮಾಡುತ್ತಾನೆ. ತಂಗಿ ಬೇಸರದಲ್ಲಿ ಕಾಡಿಗೆ ಹೋಗಿ ಮರವೊಂದರಲ್ಲಿ ಕುಳಿತು ಅಳುತ್ತಾಳೆ. ಮರದ ಕೆಳಗೆ ಕಣ್ಣೀರ ಕೆರೆಯಾಗುತ್ತದೆ. ಅದೇ ಮರದ ಕೆಳಗೆ ಬಾಯಾರಿದ ರಾಕ್ಷಸಿಯೊಬ್ಬಳು ನೀರು ಕುಡಿಯಲು ಬರುತ್ತಾಳೆ. ಆಗ ಆಕೆ ರಾಕ್ಷಸಿಗೆ ಮುದ್ರೆಯುಂಗುರ ನೀಡಿ ತನ್ನ ಕಥೆಯನ್ನು ಹೇಳುತ್ತಾಳೆ. ರಾಕ್ಷಸಿ ನೇರ ಅರಮನೆಗೆ ಬರುತ್ತದೆ. ಮುದ್ರೆಯ ಉಂಗುರ ತೋರಿಸಿ ತಂಗಿಯ ಹುಡುಕಾಟಕ್ಕೆ ಸಹಾಯ ಮಾಡುತ್ತದೆ. ಎಲ್ಲರೂ ಬಂದು ಆಕೆಯನ್ನು ಕರೆದರೂ ಆಕೆ ಮರದಿಂದ ಇಳಿಯುವುದಿಲ್ಲ, ಕೊನೆಗೆ ಅಣ್ಣನೂ ಕರೆಯುತ್ತಾನೆ. ಆತನೂ ಮರವೇರುತ್ತಾನೆ. ಆಕೆ ನೀರಿಗೆ ಬಿದ್ದು ಮೀನಾಗುತ್ತಾಳೆ. ಆತನೂ ಬಿದ್ದು ಮೀನಾಗುತ್ತಾನೆ.

ಅಣ್ಣ ತಂಗಿಯನ್ನು ಮದುವೆಯಾಗ ಬಯಸಿ ಇಬ್ಬರೂ ನೀರಿಗೆ ಬಿದ್ದು ಮೀನಾಗ ಬಯಸಿದ ಕಥೆ. ಇದರ ವರ್ಗಸೂಚಿ:೭೨೨A.

೨.೨.೬. ಒಂದು ಊರಲ್ಲಿ ತಾಯಿ ಮತ್ತು ಮಗ ಇಬ್ಬರಿರುತ್ತಾರೆ. ಮಗನಿಗೆ ಊರೆಲ್ಲಾ ಸ್ನೇಹಿತರು. ಒಂದು ದಿನ ತಾಯಿಗೆ ಮಗನ ಸ್ನೇಹಿತರನ್ನು ಪರೀಕ್ಷೆ ಮಾಡುವ ಯೋಚನೆಯಾಗುತ್ತದೆ. ಮಗನೊಂದಿಗೆ ಆಕೆ ಕೆಲವು ಪ್ರಶ್ನೆ ಕೇಳುತ್ತಾಳೆ. ಮಗ ನಿನ್ನ ಸ್ನೇಹಿತರಿಂದ ಏನು ಲಾಭ? ನಿನಗಾಗಿ ಅವರು ಏನು ಮಾಡಿಯಾರು? ಎಂಬುದಾಗಿ. ತಾಯಿಯ ಮಾತಿನಂತೆ ಅವರನ್ನು ಬರಹೇಳಿದಳು. ಮಗನಿಗೆ ಹೇಳಿದಳು, ಮಗ, ಈ ದಿನ ನಾನು ಸತ್ತೆನೆಂದು ನಿನ್ನ ಮಿತ್ರರೆಲ್ಲರಿಗೂ ಹೇಳಬೇಕು. ನನ್ನ ಹೆಣದ ರೂಪ ಮಾಡಿ ಚಾವಡಿಯಲ್ಲಿ ಬಿಳಿ ಬಟ್ಟೆ ಹೊದಿಸಬೇಕು. ಆ ಬಿಳಿ ಬಟ್ಟೆಯಡಿಯಲ್ಲಿ ಅವಲಕ್ಕಿ, ಬೆಲ್ಲ, ತೆಂಗಿನಕಾಯಿ ಮಿಶ್ರ ಮಾಡಿ ನನ್ನ ರೂಪಮಾಡಿಡಬೇಕು. ಎಲ್ಲರೂ ಮಿತ್ರರು

ಬಂದಮೇಲೆ ನನ್ನ ಅಮ್ಮನನ್ನು ಸುಡುವುದು ಬೇಡ. ಹೊಂಡಕ್ಕೆ ಹಾಕುವುದೂ ಬೇಡ. ಎಲ್ಲರೂ ಕೂಡಿಕೊಂಡು ತಿನ್ನೋಣ ಎನ್ನಬೇಕು. ಆಗ ಅವರಲ್ಲಿ ನಿನ್ನ ಪ್ರಾಣ ಸ್ನೇಹಿತ ಯಾರೆಂದು ಗುರುತು ಹಚ್ಚಬಹುದು. ತಾಯಿಯ ಉಪಾಯದಂತೆ ಪ್ರಾಣ ಸ್ನೇಹಿತನನ್ನು ಪರೀಕ್ಷಿಸುವ ತಯಾರಿಯಾಗುತ್ತದೆ. ಮಿತ್ರರೆಲ್ಲರೂ ಬರುತ್ತಾರೆ. ತಾಯಿಯ ಉಪಾಯದಂತೆ ಎಲ್ಲವನ್ನೂ ವಿವರಿಸಿದ. ಮಿತ್ರರೆಲ್ಲರೂ ಕೋಪಗೊಂಡು, ಕೆಲವರು ಆತನಿಗೆ ಹೊಡೆಯಲು ಬಂದರು. ಒಬ್ಬ ಮಾತ್ರ ಹಾಗೇ ಕುಳಿತಿರುತ್ತಾನೆ. ಉಳಿದವರೆಲ್ಲರೂ ಹೊರಟು ಹೋದರು. ಉಳಿದ ಮಿತ್ರನನ್ನು ಕೂಡಿಕೊಂಡು ತಿನ್ನಲು ಪ್ರಾರಂಭಿಸುತ್ತಾನೆ. ಆಗ ತಾಯಿ ಹೇಳುತ್ತಾಳೆ ಇವನೇ ನಿನ್ನ ಪ್ರಾಣ ಸ್ನೇಹಿತ. ಹಾಗಾಗಿ ಒಬ್ಬನಿಗೆ ಒಬ್ಬನೇ ಮಿತ್ರ, ಒಬ್ಬನಿಗೆ ಒಬ್ಬಳೇ ಹೆಂಡತಿ.

ಇದೊಂದು ರಮ್ಯ ಕಥೆ. ವರ್ಗ ಸೂಚಿ: ೮೯೩

**೨.೩. ಹಾಸ್ಯ ಮತ್ತು ಹಸಿಕಥೆಗಳು (Jokes and Anecdotes)**

೨.೩.೧. ಒಬ್ಬಳಿಗೆ ಪೆದ್ದ ಮಗನಿರುತ್ತಾನೆ. ಅದೇ ಊರಿನ ಅರಸನಿಗೆ ಒಬ್ಬಳೇ ಮಗಳಿರುತ್ತಾಳೆ. ಒಂದುದಿನ ಅರಸನ ಮಗಳು ಪೆದ್ದನನ್ನು ನೋಡಿ ನಗುತ್ತಾಳೆ. ಮಗಳನ್ನು ನಗಿಸಿದಕ್ಕಾಗಿ ಪೆದ್ದನಿಗೆ ಆಕೆಯನ್ನು ಮದುವೆ ಮಾಡಿಕೊಡುತ್ತಾರೆ. ಪೆದ್ದ ಆಕೆಯನ್ನು ತನ್ನ ಗುಡಿಸಲಿಗೆ ಕರೆದುಕೊಂಡು ಬರುವಾಗ, ಆಕೆಯ ಬಕ್ಕತಲೆಯನ್ನು ಕಂಡು ಅವಳ ತಲೆ ಒಡೆದಿದೆ ಎನ್ನುತ್ತಾನೆ. ಕೆಲವು ದಿನ ಕಳೆದು ಮಗಳನ್ನು ಅರಮನೆಗೆ ಕರೆದೊಯ್ಯುತ್ತಾರೆ. ಆದಿನ ಪೆದ್ದನೂ ಅರಮನೆಗೆ ಹೋಗುವನು. ಅರಮನೆಯಲ್ಲಿ ಊಟಕ್ಕೆ ಪಾಯಸ ಮಾಡಿರುತ್ತಾರೆ. ಪೆದ್ದ ಪಾಯಸವೆಂದರೆ 'ಅಂಬಲಿ' ಎಂದು ತಿಳಿದು - ಬೇಡ ಬೇಡವೆಂದ. ನಮ್ಮ ಮನೆಯಲ್ಲಿ ದಿನನಿತ್ಯ ಮಾಡುತ್ತಾರೆಂದು ಬಣ್ಣಿಸಿದ. ಆದರೂ ಬಿದ್ದದ್ದನ್ನು ನೆಕ್ಕಿ ನೋಡುವನು. ಅದು ಸಿಹಿಯಾಗಿದ್ದರೂ ಮತ್ತೆ ಕೇಳಿ ತಿನ್ನಲು ನಾಚಿಕೆಯಾಯಿತು. ಪೆದ್ದನಿಗೆ ರಾತ್ರಿಯಿಡೀ ನಿದ್ದೆ ಬರಲಿಲ್ಲ. ಎಲ್ಲರೂ ಮಲಗಿದ ರಾತ್ರಿಯಲ್ಲಿ ಪೆದ್ದ ಪಾಯಸ ತಿನ್ನಲು ಅಡುಗೆ ಮನೆಗೆ ನುಗ್ಗಿದ. ಕಳ್ಳ ಬೆಕ್ಕು ಬಂದಿತೆಂದು ಅತ್ತೆ ದೊಣ್ಣೆಯಿಂದ ಹೊಡೆಯುತ್ತಾಳೆ. ಪೆಟ್ಟು ತಿಂದು ಪೆದ್ದ ಚಾಪೆಗೆ ಬರುತ್ತಾನೆ ಚಾಪೆಯಲ್ಲಿ ಹೆಂಡತಿ ಮಲಗಿರುತ್ತಾಳೆ. ಹೆಂಡತಿಯೊಂದಿಗೆ ಮಲಗುವುದಕ್ಕೆ ಪೆದ್ದನಿಗೆ ನಾಚಿಕೆಯಾಗುತ್ತದೆ. ಪೆದ್ದ ಪೆದ್ದನಾಗಿಯೇ ಉಳಿದ.

ಪೆದ್ದ ಅಳಿಯ ಕಥೆಯ ವರ್ಗಸೂಚಿ :೧೬೮೫ A

## ೩. ಜನಪದ ಕಥೆಗಳಲ್ಲಿ ಜಾನಪದ ಸಿದ್ಧಾಂತ ಮತ್ತು ಸಾಂಸ್ಕೃತಿಕ ಅನನ್ಯತೆ

**೩.೧. ವರ್ಗ ಮತ್ತು ಆಶಯಸೂಚಿ:**

ಸ್ಟಿತ್‌ಥಾಮ್ಸನ್ನರ ಪ್ರಕಾರ, 'ವರ್ಗ' ಎಂದರೆ ಸ್ವತಂತ್ರ ಅಸ್ತಿತ್ವದಲ್ಲಿ ಇರಬಹುದಾದ ಸಾಂಪ್ರದಾಯಿಕ ಕಥೆ. ಇದು ಸ್ವಯಂ ಪೂರ್ಣವಾಗಿದ್ದು ತನ್ನ ಅರ್ಥಕ್ಕಾಗಿ ಮತ್ತೊಂದು ಕಥೆಯನ್ನು ಅವಲಂಬಿಸಿರುವುದಿಲ್ಲ. ಇಂತಹ ಪ್ರತಿಯೊಂದು ವರ್ಗದಲ್ಲಿಯೂ ಒಂದು ಅಥವಾ ಹಲವಾರು

ಆಶಯುಗಳಿರುತ್ತವೆ. ಈ ಹಿನ್ನಲೆಯಲ್ಲಿ ಆರ್ನೆ ಥಾಮ್ಸನ್ನರು ಜನಪದ ಕಥೆಯ ವರ್ಗಗಳು (Types of the Folktales) ಎಂಬ ಬೃಹತ್ ಗ್ರಂಥವನ್ನು ಸಿದ್ಧಪಡಿಸಿದರು. ಇದರಿಂದಾಗಿ ಜಗತ್ತಿನ ಕಥೆಗಳನ್ನು ತೌಲನಿಕವಾಗಿ ಅಭ್ಯಸಿಸಲು ಸಾಧ್ಯವಾಯಿತು.

ಜಾನಪದದ ಒಂದು ಅಂಶವನ್ನು ವಿಶ್ಲೇಷಣಾತ್ಮಕವಾಗಿ ಒಳಗೊಂಡಿರುವ ಯಾವುದೇ ವಿಷಯವಾಗಿರಲಿ ಅದನ್ನು 'ಆಶಯ'ವೆಂದು ವಿಶ್ಲೇಷಿಸಲಾಗುತ್ತದೆ. ಜನಪದ ಕಥೆಯ ಕನಿಷ್ಠ ಘಟಕವೇ 'ಆಶಯ' (Motif). ಒಂದು ಪ್ರಕಾರವನ್ನು ಮತ್ತೊಂದು ಪ್ರಕಾರದಿಂದ ಬೇರ್ಪಡಿಸಲು, ಒಂದು ಪ್ರಕಾರವನ್ನೇ ಮತ್ತೆ ಕೆಲವು ವರ್ಗಗಳಾಗಿ ವಿಂಗಡಿಸಲು ಆಶಯಗಳು ತಳಹದಿ.

ಆರ್.ಎಸ್. ಬಾಗ್ಸ್‌ವ ಪ್ರಕಾರ ''ಜನಪದ ಕಥೆಗಳು ಘಟನೆಗಳ ಸರಳವಾದ ಅಥವಾ ಸಂಕೀರ್ಣವಾದ ರಚನೆಯಾಗಿದೆ''. ಜಾನಪದದ ಹಲವು ಸಿದ್ಧಾಂತಗಳು ಜನಪದ ಕಥೆಯ ಆಧಾರದಲ್ಲೇ ವಿಶ್ಲೇಷಣೆಗೊಂಡಿವೆ. ೨೦ನೆಯ ಶತಮಾನದಲ್ಲಿ ಜನಪದ ಕಥೆಗಳ ಅಧ್ಯಯನದಲ್ಲಿ ಸಾಂದರ್ಭಿಕ (Contextual) ಸಿದ್ಧಾಂತ ಬಳಕೆಗೆ ಬಂತು. ೧೮೬೦ರಲ್ಲಿ ರಷ್ಯನ್ ಜಾನಪದ ವಿದ್ವಾಂಸರು ಕಥೆಗಾರನ ಸೃಜನಾತ್ಮಕ ಚಟುವಟಿಕೆ ಮತ್ತು ಭೌಗೋಳಿಕ, ಸಾಮಾಜಿಕ ಹಿನ್ನೆಲೆಯನ್ನು ಆಧರಿಸಿ ಒಂದು ಕಥೆಯು ಭಿನ್ನ ಪಠ್ಯಗಳಾಗುವ ಅಂಶಗಳನ್ನು ಅಧ್ಯಯನಿಸಿದರು. ಕಥೆಯೊಂದರ ಅಸ್ತಿತ್ವಕ್ಕೆ ಕಾಲ-ದೇಶ-ವ್ಯಕ್ತಿ-ಭಾಷೆ ಅನಿವಾರ್ಯ ಅಂಗಗಳು. ಇವು ಏಕಕಾಲಕ್ಕೆ ನಡೆಯುವ ಪಠ್ಯವೊಂದರ ನಿರೂಪಣೆಯ ಸಂದರ್ಭ ಬದಲಾದಾಗ ರಚನೆಯಲ್ಲೂ ವ್ಯತ್ಯಾಸವನ್ನು ಪಡೆಯುತ್ತದೆ.

**ಗೌಡ ಜನಾಂಗದ ಜನಪದ ಕಥೆಯೊಂದರ ಸಾಂದರ್ಭಿಕ ಚೌಕಟ್ಟು**



ಈ ಚೌಕಟ್ಟಿನ ಪ್ರಕಾರ ಕಾಲ-ದೇಶ-ವ್ಯಕ್ತಿ-ಭಾಷೆಗಳು ಬದಲಾದಾಗ ಕಥೆಯ ಆಶಯ ಬದಲಾಗುತ್ತದೆ. ಆಶಯವನ್ನು ಆಧರಿಸಿದ ವರ್ಗೀಕರಿಸಿದ ವರ್ಗಸೂಚಿ ಬದಲಾಗುತ್ತದೆ. ಆಗ ಒಂದೇ ಕಥೆ ಭಿನ್ನಪಠ್ಯವು ಪ್ರತ್ಯೇಕ ಸ್ವತಂತ್ರ ವರ್ಗಸೂಚಿಯಾಗಿ ನಿಲ್ಲುತ್ತದೆ.

**೩.೨. ಗೌಡ ಜನಾಂಗದ ಸಾಂಸ್ಕೃತಿಕ ಅನನ್ಯತೆ:**

ಪ್ರಸ್ತುತ ಪ್ರಬಂಧದಲ್ಲಿ ಒಟ್ಟು ಎಂಟು ಕಥೆಗಳ ವರ್ಗಸೂಚಿ ಬರೆದು ಪಠ್ಯವನ್ನು ವಿವರಿಸಲಾಗಿದೆ.

೩.೨.೧. ವರ್ಗಸೂಚಿ ೫೬F: ಪ್ರಾಣಿ ಕಥಾ ವರ್ಗಕ್ಕೆ ಸೇರುವ ಕಾಡುಪ್ರಾಣಿ ನರಿಯ ಕಥೆ ಆ ವರ್ಗಸೂಚಿಯಲ್ಲಿ ಬರುತ್ತದೆ. ಪ್ರಾಣಿವರ್ಗದಲ್ಲಿ ನರಿ ಜಾಣ ಪ್ರಾಣಿ. ಮಾನವರಲ್ಲಿ ಜಾಣನಾದವನು ಸೋಲುವುದಿಲ್ಲ, ಮೋಸಹೋಗುವುದಿಲ್ಲ. ಕುಠಿಲತೆ, ಕುತಂತ್ರ ಜಾಣತನದ ಅಸ್ತ್ರಗಳು. ಹಾಗಾಗಿ ಕುಠಿಲತೆ, ಕುತಂತ್ರವಿರುವವನು ಜಾಣ ನರಿಯಂತೆ ಎಂಬ ಹೋಲಿಕೆಯಿದೆ. ಪಂಚತಂತ್ರದಲ್ಲಿ ನರಿಯ ಕಥೆಯನ್ನು ನೀತಿ ಕಥೆಗಳಾಗಿ ಬಳಕೆ ಮಾಡಲಾಗಿದೆ.

ಆದರೆ ಗೌಡಜನಾಂಗದಲ್ಲಿ ನರಿ ಕಥೆ ವಿಶಿಷ್ಟ ವರ್ಗಸೂಚಿಯಾಗಿದೆ. ನರಿ-ಇಲ್ಲಿ ಸೋಲುತ್ತದೆ, ಮೋಸಹೋಗುತ್ತದೆ. ತನ್ನ ಸಾವಿಗೂ ಕಾರಣವಾಗುತ್ತದೆ. ಸೋಲಿಸುವುದು, ಮೋಸಗೊಳಿಸುವುದು ಹೇಗೆ ಉಪಾಯವಾಗುತ್ತದೋ ಹಾಗೆಯೇ ಸೋಲುವ, ಮೋಸ ಹೋಗುವ ಅಪಾಯವನ್ನು ಅಜ್ಜಿ ಮೊಮ್ಮಗುವಿಗೆ ಜಾಗ್ರತೆಯ ಅರಿವನ್ನು ಮೂಡಿಸುವಂತಿದೆ.

ಈ ಕಥೆಯಲ್ಲಿ ನರಿ ಊರು ಗೌಡನೊಂದಿಗೆ ಕೆಲಸಕ್ಕೆ ಸೇರಿಕೊಳ್ಳುತ್ತದೆ. ದಡ್ಡ ಹಂದಿ ಜಾಣ ನರಿಯ ಮಾತು ಕೇಳಿ ಸಾಯುತ್ತದೆ. ಅದೇ ನರಿ ತಾನು ಮೇಲು ಜಾತಿಯವನು, ನರಿ ಜಾತಿಗಿಂತ ಬೇರೆ, ನನಗೆ ಭೂತ ಕಟ್ಟಲು ಬರುತ್ತದೆ - ಎಂಬ ವಿವರಣೆಗಳಿವೆ. ನರಿ ಬ್ರಾಹ್ಮಣರಿಗೆ ತುಪ್ಪ ಕೊಟ್ಟು, ಮೋಸ ಮಾಡುತ್ತದೆ. ಹಂದಿಗೆ ಮೋಸ ಮಾಡಿ ಹಂದಿ ಸತ್ತಿತು. ಬ್ರಾಹ್ಮಣರಿಗೆ ತುಪ್ಪ ಕೊಟ್ಟು, ನರಿ ಸತ್ತಿತು.

ನರಿ ಸಾಯುವ ಹಲವಾರು ಕಥೆಗಳು ಈ ಪರಿಸರದಲ್ಲಿ ಇದೆಯೆಂದಾದರೆ ಜಾಣರನ್ನು ಸಾಯಿಸುವ ಜಾಣರು ಈ ಪರಿಸರದಲ್ಲಿ ಇದ್ದಾರೆಂದೇ ಅರ್ಥ. ಗೌಡ ಸಂಸ್ಕೃತಿಯಲ್ಲಿ ಇಂತಹ ಜಾಣತನದ ಅನನ್ಯತೆ ಇದೆಯೆಂಬುದು ಇಲ್ಲಿ ಉಲ್ಲೇಖನೀಯ.

**೩.೨.೨. ವರ್ಗಸೂಚಿ:೪೩೩F.**

ಮಾಂತ್ರಿಕ ಕಥಾವರ್ಗದಲ್ಲಿ ಅತಿಮಾನುಷ ಸಹಾಯಕರಿಂದ ಎದುರಾಳಿಗಳನ್ನು ಗೆಲ್ಲುವ, ಆಶಯವನ್ನು ಕಾಣಬಹುದು. ಈ ಕಥೆಯಲ್ಲಿ ಹಲವು ಆಶಯಗಳ ಸಂಕೀರ್ಣ ರಚನೆಯಿದೆ. ಮಕ್ಕಳಾಗದಿರುವ ಬಂಜೆತನದ ನೋವುಗಳ ಆಶಯವಿರುವ ಸಾವಿರಾರು ಕಥೆಗಳು ದಕ್ಷಿಣ ಕನ್ನಡದಲ್ಲಿ ಸಿಗುತ್ತವೆ. ಮನುಷ್ಯನಿಗೆ ಮೀನು ಹುಟ್ಟುವುದು ವಿಕೃತಿ. ಆದರೆ ಅದೇ ಮೀನು ಮನುಷ್ಯ ಪ್ರಯತ್ನದಿಂದ ಅರಸು ಕುಮಾರನಾಗುವುದು. ಮಲತಾಯಿ ಕಿರುಕುಳ ಕೊಡುವ ಹಲವು ಕಥೆಗಳು ಈ ಪರಿಸರದಲ್ಲಿವೆ.

ಆದರೂ ಮನುಷ್ಯನಿಗೆ ಪ್ರಕೃತಿಯೇ ಸಹಾಯಕವೆಂಬ ಸತ್ಯ ಈ ಕಥೆಯಲ್ಲಿದೆ. ಇದೊಂದೇ ಕಥೆಯಲ್ಲಿ ಹಲವು ವರ್ಗದ ಕಥೆಗಳಿರುವುದು ಇಲ್ಲಿನ ವೈಶಿಷ್ಟ್ಯ.

೩.೨.೩. ವರ್ಗಸೂಚಿ: ೫೭೭

ವೈದಿಕ ಪದ್ಧತಿಯಲ್ಲಿ ತುಳಸಿಗಿಡ ಕಟ್ಟೆಯಲ್ಲಿ ಪೂಜೆಗೆ ಅರ್ಹತೆ ಪಡೆದಿದೆ. ಆದರೆ ಜನಪದದಲ್ಲಿ ತುಳಸಿಗಿಡ ನೆಕ್ಕಿ ಗಿಡಗಳು ಮನುಷ್ಯನ ಜೀವಸೂಚಿಯ ಸಾಮರ್ಥ್ಯವನ್ನು ಪಡೆದಿವೆ.

ಗೌಡ ಜನಾಂಗದ ಚರಿತ್ರೆಯ ಪ್ರಕಾರ ಗೌಡರು ಲಾಕುಲ ಶೈವ ಸಂಸ್ಕೃತಿಯನ್ನು ಅವಲಂಬಿಸಿದವರು. ಆದರೆ ಕರಾವಳಿಯಲ್ಲಿ ವೈದಿಕ ಪದ್ಧತಿ ಶೈವ ಸಂಸ್ಕೃತಿಗಿಂತ ಪ್ರಭಾವಶಾಲಿ. ಗೌಡರಲ್ಲಿ ಅಮವಾಸ್ಯೆ ಊಟ ಮಾಡುವ ಕ್ರಮ, ತುಳಸಿಗೆ ನೀರೆರೆದ ಕ್ರಮ ಎಲ್ಲವೂ ಬ್ರಾಹ್ಮಣ ಸಂಸ್ಕೃತಿಯ ಪಡಿಯಚ್ಚು. ಆದರೆ ಮನೆಯಿಂದ ಹೊರಹೋದವನಿಗೆ 'ತುಳಸಿ' ಜೀವ ಸೂಚಿಯಾಗಿರುವುದು ಗೌಡ ಸಂಸ್ಕೃತಿಯಲ್ಲಿ ವಿಶಿಷ್ಟ.

೩.೨.೪. ವರ್ಗಸೂಚಿ :೫೧೦

ಹೆತ್ತ ಮಗಳನ್ನೇ ಮದುವೆಯಾಗುವುದು ಮಾನವ ಸಂಸ್ಕೃತಿಯಲ್ಲಿ ನಿಷೇಧ. ಪ್ರಾಣಿ ಸದೃಶ ಗುಣಗಳು ಮಾನವನಲ್ಲಿ ಇಲ್ಲದಿಲ್ಲ ಅನ್ನೋದಕ್ಕೆ ಇದೊಂದು ಉದಾಹರಣೆ. ಮುಗ್ಧ ಮಕ್ಕಳಿಗೆ ಅಜ್ಜಿ ಕ್ರೂರ ಅಪ್ಪಂದಿರ ಪರಿಚಯ ಮಾಡುತ್ತಾಳೆ. ಮಗುವಿನ ಬೌದ್ಧಿಕ ಮತ್ತು ಸಾಂಸ್ಕೃತಿಕ ಅನನ್ಯತೆ ಜಾಗೃತಗೊಳ್ಳುವುದು.

೩.೨.೫. ವರ್ಗಸೂಚಿ ೪೫೦B

ಮನಶಾಸ್ತ್ರಜ್ಞರ ಪ್ರಕಾರ ಅಣ್ಣ ತಂಗಿಗೆ ಕಿರುಕುಳ ಕೊಡುವುದು ಕಾಮಭಾವನೆಯನ್ನು ವ್ಯಕ್ತಪಡಿಸುವುದಾಗಿರಬಹುದು. ಮಕ್ಕಳನ್ನು ಪಾಲನೆ-ಪೋಷಣೆ ಮಾಡಬೇಕಾದ ಅಪ್ಪನೇ ಮಕ್ಕಳ ಸಾವಿಗೆ ಕಾರಣವಾಗುವುದು ವಿರಳ. ಮತ್ತೊಮ್ಮೆ ಕ್ರೂರ ಅಪ್ಪನ ಪಾತ್ರವನ್ನು ಅಜ್ಜಿ ಮೊಮ್ಮಕ್ಕಳಿಗೆ ಪರಿಚಯಿಸುತ್ತಾಳೆ. ಮನುಷ್ಯನ ಸಾವಿಗೆ ಅತಿಮಾನಷ ಶಕ್ತಿಯ ಸಹಾಯ ಬೇಕಾಗುವುದು, ಮನುಷ್ಯ ಮರವಾಗಿ ಪರಿವರ್ತನೆಯಾಗುವುದು - ಇಲ್ಲೆಲ್ಲಾ ಮಾನವ ಪ್ರಕೃತಿಯಿಂದ ಪಾಠ ಕಲಿತಿದ್ದಾನೆ ಎಂಬುದು ವ್ಯಕ್ತವಾಗುತ್ತದೆ.

೩.೨.೬. ವರ್ಗ ಸೂಚಿ ೭೨೨A

ಅಣ್ಣ ತಂಗಿಯನ್ನು ಮದುವೆಯಾಗುವುದು ನಿಷೇಧ. ಪ್ರಾಣಿವರ್ಗದಲ್ಲಿ ಒಂದೇ ತಾಯಿ ಮಕ್ಕಳಿಗೆ ಲೈಂಗಿಕ ಸಂಬಂಧವಿದೆ. ಅಣ್ಣ ತಂಗಿಯನ್ನು ಮದುವೆಯಾಗಬಾರದು - ಆದರೆ ಕೈಕಾಲು ಹೋಗುತ್ತದೆ, ಕಣ್ಣು ಹೋಗುತ್ತದೆಂಬ ಭಯವನ್ನು ಅಜ್ಜಿ ಮೊಮ್ಮಗುವಿಗೆ ಹುಟ್ಟಿಸುತ್ತಾಳೆ. ಒಂದೇ

'ಬಳಿ'ಯಲ್ಲಿ ಮದುವೆಯ ನಿಷೇಧವೂ ಗೌಡರಲ್ಲಿದೆ. ಇಲ್ಲೂ ಅಣ್ಣ ತಂಗಿ-ಬಾಳೆ ಮೀನು, ಮುಗುಡು ಮೀನು ಕಥೆಯನ್ನು ಹೇಳುತ್ತಾರೆ. ವೈಜ್ಞಾನಿಕವಾಗಿ ಅಣ್ಣ-ತಂಗಿ ರಕ್ತ ಸಂಬಂಧಿಗಳಾದುದರಿಂದ ಈ ನಿಷೇಧವನ್ನು ಜಾರಿಗೊಳಿಸಲಾಗಿದೆ. ಆದರೂ ಕುಟುಂಬದಲ್ಲಿಯ ನಿಯಮ ಮೀರಿ ಮದುವೆಯಾದ ಹಲವಾರು ಘಟನೆಗಳಿವೆ. ಕುಟುಂಬದ ಹಿರಿಯರು, ಊರು ಗೌಡರು ಸೇರಿ ಅಂತಹವರನ್ನು ಕುಟುಂಬದಿಂದ ಉಚ್ಚಾಟನೆ ಮಾಡಿದ ಘಟನೆಗಳೂ ಇವೆ. ಒಟ್ಟಿನಲ್ಲಿ ಅಣ್ಣ-ತಂಗಿ ಜೊತೆಯಾಗಿ, ಆರೋಗ್ಯಕರವಾಗಿ ಬಾಳುವ ಸಾಂಸ್ಕೃತಿಕ ಜವಾಬ್ದಾರಿಯನ್ನು ಅಜ್ಜಿ ಮೊಮ್ಮಕ್ಕಳಿಗೆ ಕಲಿಸುತ್ತಾಳೆ.

### ೩.೨.೭. ವರ್ಗಸೂಚಿ:೮೯೩

ಇದೊಂದು ರಮ್ಯ ಕಥೆ. ಆತ್ಮೀಯ ಸ್ನೇಹಿತನನ್ನು ಆಯ್ಕೆ ಮಾಡುವ ಜನಪದ ಕ್ರಮ ವಿಶಿಷ್ಟವಾದದ್ದು. ಒಬ್ಬನಿಗೆ ಒಬ್ಬನೇ ಮಿತ್ರ ಒಬ್ಬನೇ ಹೆಂಡತಿ ಎಂಬ ಆಶಯವಿದೆ.

### ೩.೨.೮. ವರ್ಗ ಸೂಚಿ :೧೬೮೫A

'ಅಂಬಲಿ' ಗೌಡರ ಊಟದ ಸಂಸ್ಕೃತಿಯಲ್ಲಿ ಇತ್ತು. ಗಟ್ಟದ ಕಡೆಯಿಂದ ಬಂದ ಗೌಡರು ಇಲ್ಲಿ ರಾಗಿ ಬೆಳೆಸುತ್ತಿದ್ದರು. ಪೆದ್ದನಿಗೆ ಪಾಯಸದ-ಸಂಸಾರದ ಸಿಹಿ ಎರಡೂ ತಿಳಿದಿರಲಿಲ್ಲ. ಪಾಯಸವನ್ನು ಅಂಬಲಿಯೆಂದು ತಿಳಿದವನು ಮಲಗಿದ ಹೆಂಡತಿಯನ್ನು ಏನೆಂದು ತಿಳಿದಿರುವನೋ. ಪೆದ್ದರ ಹಲವಾರು ಕಥೆಗಳು ಈ ಪರಿಸರದಲ್ಲಿವೆ. ಮಗು ಬೆಳೆದಂತೆ ಅಜ್ಜಿ ಮಗುವಿಗೆ ಸಂಸಾರದ ಕಥೆಯನ್ನು ಹೇಳುತ್ತಾಳೆ.

## ೪. ಪ್ರಬಂಧದ ಫಲಿತಾಂಶ

೪.೧. ಜಾಣ ನರಿ ಎಂದೇ ಹೆಸರುವಾಸಿಯಾಗಿರುವ ನರಿ ಕಥೆಯು ಗೌಡ ಸಂಸ್ಕೃತಿಯಲ್ಲಿ ಸೋತ ನರಿಯ ಕಥೆಯಾಗಿದೆ. ಇದು ಆರ್ನೆ -ಥಾಮ್ಸನರ ವರ್ಗಸೂಚಿ, ಆಶಯ ಸೂಚಿಗೆ ಹೊಸ ಸೇರ್ಪಡೆ. ಇಂಥ ಹಲವಾರು ಕಥೆಗಳ ಭಿನ್ನ ಪಾಠಗಳು ಈ ಪರಿಸರದಲ್ಲಿವೆ.

೪.೨. ಅಣ್ಣ-ತಂಗಿ, ತಂದೆ ಮಗಳು, ಒಂದೇ ಗೋತ್ರ (ಬಳಿ)ದ ಗಂಡು ಹೆಣ್ಣು ಪರಸ್ಪರ ಮದುವೆಯಾಗುವುದು, ಲೈಂಗಿಕ ಆಸಕ್ತಿ ವಹಿಸುವುದು ಗೌಡ ಸಂಸ್ಕೃತಿಯಲ್ಲಿ ನಿಷೇಧ. ಡಾ. ಬಿಳಿಮಲೆಯವರ 'ಕರಾವಳಿ ಜಾನಪದ' ಕೃತಿಯಲ್ಲಿ ೨೧ ಕಥೆಗಳನ್ನು ಭಿನ್ನ ಪಠ್ಯಗಳ ನೆಲೆಯಲ್ಲಿ ಅಧ್ಯಯನಿಸಲಾಗಿದೆ.

೪.೩ ಡಾ. ಪುರುಷೋತ್ತಮ ಬಿಳಿಮಲೆಯವರ ಸಂಶೋಧನ ಗ್ರಂಥ ''ಸುಳ್ಯ ಪರಿಸರದ ಗೌಡ ಜನಾಂಗದ ಸಾಂಸ್ಕೃತಿಕ ಅಧ್ಯಯನ'' ಗ್ರಂಥದಲ್ಲಿ ಗೌಡ ಜನಾಂಗದ ಬಗೆಗೆ ವಿಸ್ತೃತವಾದ ಚರ್ಚೆಯಿದೆ. ಈ ಹಿನ್ನೆಲೆಯಲ್ಲಿ ಗೌಡ ಜನಾಂಗದ ಸಾಂಸ್ಕೃತಿಕ ನೆಲೆಗಳನ್ನು ಜನಾಂಗದ ಸ್ಥೂಲ ಪರಿಚಯದೊಂದಿಗೆ ವಿವರಿಸಲಾಗಿದೆ.

೪.೪ ಪ್ರಬಂಧದಲ್ಲಿ ೮ ಜನಪದಕಥೆಗಳನ್ನು ಸಂದರ್ಭ ಸಿದ್ಧಾಂತದ ನೆಲೆಯಲ್ಲಿ ವರ್ಗ ಮತ್ತು ಆಶಯ ಸೂಚಿಗಳನ್ನು ಆಧಾರವಾಗಿಟ್ಟುಕೊಂಡು ವಿವರಿಸಲಾಗಿದೆ. ಜೊತೆಗೆ ಸಿದ್ಧಾಂತದ ಪ್ರಕಾರ ಜನಪದ ಕಥೆಗಳಲ್ಲಿ ಜನಾಂಗದ ಸಾಂಸ್ಕೃತಿಕ ಅನನ್ಯತೆಯನ್ನು ಚರ್ಚಿಸಲಾಗಿದೆ.

ಒಟ್ಟಿನಲ್ಲಿ ದಕ್ಷಿಣ ಕನ್ನಡದ ಪ್ರಚಲಿತದಲ್ಲಿರುವ ಎಲ್ಲಾ ಕಥೆಗಳು ಆಯಾ ನಿರೂಪಕ ಜಾತಿಗೆ ಅನುಗುಣವಾಗಿ ನಿರೂಪಣೆಗೊಳ್ಳುತ್ತವೆ. ಅಂದರೆ, ಜನಪದರು ತಮ್ಮ ಅನುಭವಗಳನ್ನು ಅವರು ಬಾಳಿ ಬದುಕಿದ ಸಂಸ್ಕೃತಿಯ ಚಿತ್ರಣದೊಂದಿಗೆ, ಜನಾಂಗದ ಪರಂಪರಾಗತ ಹಿನ್ನೆಲೆಯೊಂದಿಗೆ ವಿವರಣೆ ನೀಡುತ್ತಾರೆ. ಕಥೆಯ ನಿರೂಪಕರು ಬದಲಾದಾಗ ಕಥೆಯ ವರ್ಗಸೂಚಿ, ಆಶಯಸೂಚಿ ಬದಲಾಗಬಹುದು.

ಇದೇ ಜನಪದ ಬದುಕಿನ ವೈವಿಧ್ಯ
ಇದೇ ಜನಪದರು, ಅಧ್ಯಯನಕಾರರ ನಡುವಿನ ಸವಾಲು.

## ಟಿಪ್ಪಣಿಗಳು

೧. ನೋಡಿ ಡಾ. ಬಿಳಿಮಲೆ, 'ಸುಳ್ಯ ಪರಿಸರದ ಗೌಡ ಜನಾಂಗ-ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ) ೧೯೮೫.

೨. ಮದುವೆ ಕ್ರಮದಲ್ಲಿ ಗೌಡ ಸಂಸ್ಕೃತಿಯಲ್ಲಿ ಬಂಟಧಾರೆ ಮತ್ತು ಬ್ರಾಹ್ಮಣಧಾರೆ ಎಂಬ ಎರಡೂ ಪದ್ಧತಿಗಳಿವೆ.
''ವರ್ತಮಾನ ಕಾಲದಲ್ಲಿ ಗೌಡರು ಬ್ರಾಹ್ಮಣ್ಯಕ್ಕೆ ಅಂಥ ವಿರೋಧಿಗಳೇನೂ ಅಲ್ಲ. ಬದಲಾಗಿ ಹೆಚ್ಚು ಹೆಚ್ಚು ಬ್ರಾಹ್ಮಣೀಕರಣಕ್ಕೆ ಒಳಗಾಗುತ್ತಿದ್ದಾರೆ. ಸುಮಾರು ಎರಡು ತಲೆಮಾರಿನಷ್ಟು ಹಿಂದೆ ಗೌಡರ ಮದುವೆಗೆ ವೈದಿಕರ ಅಗತ್ಯವಿರಲಿಲ್ಲ. ಆದರೆ ಈಚೆಗೆ ಮದುಮಗಳನ್ನು ಧಾರೆ ಎರೆದು ಕೊಡುವಾಗ ಬ್ರಾಹ್ಮಣ ಇರಲೇಬೇಕು'' (ನೋಡಿ. ಡಾ. ಬಿಳಿಮಲೆ, ನವನೀತ ೧೯೯೭ ಪು. ೨೪೦).

೩. ನೋಡಿ: ಡಾ. ಪುರುಷೋತ್ತಮ ಬಿಳಿಮಲೆ, ೧೯೮೫.

೪. ಗಂಡಿನ ಕಡೆಯ ಮದುವೆಯಲ್ಲಿ 'ತೆರವು ಹಣ' ರೂ. ೧೦-೫ನ್ನು ವಧುವಿನ ಕಡೆಯವರಿಗೆ ತೆರವು ವೀಳ್ಯದ ಸಂದರ್ಭದಲ್ಲಿ ಕೊಡುತ್ತಾರೆ. ತೆರವು ಹಣವನ್ನು ಮದುವೆಯಾದ ನಂತರ ಗುರುಮಠ ಶೃಂಗೇರಿಗೆ ತಲುಪಿಸುವುದು ವಧುವಿನ ಕಡೆಯವರ ಜವಾಬ್ದಾರಿ.

೫. ದಕ್ಷಿಣ ಕನ್ನಡದಲ್ಲಿ ರಾಗಿ ಗೌಡರ ಪ್ರಧಾನ ಬೆಳೆಯಾಗಿತ್ತು. ಗೌಡರು ರಾಗಿಯ ಅಂಬಲಿ ಮಾಡಿ ಕುಡಿಯುತ್ತಿದ್ದರು. ಈ ಕಾರಣದಿಂದ ಅನ್ಯ ಜನಾಂಗದವರು ಗೌಡರನ್ನು 'ಅಂಬಲಿ ಗೌಡ'ರೆಂದು ವ್ಯಂಗ್ಯ ಮಾಡುವುದಿದೆ.

೬. ೮ ಸೂತ್ರದ (೨ ಗುತ್ತಿನ ಮನೆ), ಐನ್ ಮನೆ ಎಂದು ಕರೆಯುತ್ತಾರೆ. ಸುಳ್ಯದ ಉಳುವಾರಿನಲ್ಲಿ, ಪುತ್ತೂರಿನ ಬಲ್ಲಾಡು ಕಟ್ಟೆ, ಮನೆಗಳು ಇದೇ ಮಾದರಿಯಲ್ಲಿವೆ.

೭. ಬಳಿಪದ್ಧತಿ-ನೋಡಿ: ಡಾ. ಪುರುಷೋತ್ತಮ ಬಿಳಿಮಲೆ ೧೯೯೦:೧೦೦-೧೦೧.
೮. ಗೌಡರು ಮಕ್ಕಳ ಕಟ್ಟಿನವರು. ಬಳಿ (ಗೋತ್ರ) ಅಪ್ಪನಿಂದ ಮಗನಿಗೆ ಬರುತ್ತದೆ. ಗೌಡ ಸಂಸ್ಕೃತಿಯಲ್ಲಿ ಅಣ್ಣ ತಂಗಿ, ಒಂದೇ ಬಳಿಯ ಗಂಡು ಹೆಣ್ಣು ಮದುವೆ ನಿಷೇಧವಿದೆ.

## ಪರಾಮರ್ಶನ ಗ್ರಂಥಗಳು


೧. ಪುರುಷೋತ್ತಮ ಬಿಳಿಮಲೆ, ೧೯೮೫ 'ಸುಳ್ಯ ಪರಿಸರದ ಗೌಡ ಜನಾಂಗ ಸಾಂಸ್ಕೃತಿಕ ಅಧ್ಯಯನ' (ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿದ ಪಿಎಚ್‌ಡಿ ಮಹಾ ಪ್ರಬಂಧ - ಅಪ್ರಕಟಿತ) ಮಂಗಳೂರು: ಮಂಗಳಗಂಗೋತ್ರಿ.
೨. ಪುರುಷೋತ್ತಮ ಬಿಳಿಮಲೆ, ೧೯೯೦. 'ಕರಾವಳಿ ಜಾನಪದ', ಮಂಗಳೂರು: ಮಂಗಳಗಂಗೋತ್ರಿ.
೩. ವಿಶ್ವನಾಥ ಬದಿಕಾನ, ೧೯೯೪. 'ಗೌಡ ಕನ್ನಡದ ಜನಪದ ಕಥೆಗಳು - ವರ್ಗ ಮತ್ತು ಆಶಯಸೂಚಿ,' ಹಂಪಿ: ಕನ್ನಡ ವಿಶ್ವವಿದ್ಯಾನಿಲಯ.


## ಗ್ರಂಥ ಋಣ


೧. ಚಿದಾನಂದ ಮೂರ್ತಿ ಎಂ. ೧೯೭೦ 'ಸಂಶೋಧನಾ ತರಂಗ : ಸಂಪುಟ - ೩, ಬೆಂಗಳೂರು: ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾನಿಲಯ.
೨. ದೊಡ್ಡಪ್ಪ ಗೌಡ, ೧೯೭೮. 'ಒಕ್ಕಲಿಗರು ಮತ್ತು ಸಂಪ್ರದಾಯ', ಮೈಸೂರು : ನಭಶ್ರೀ ಪ್ರಕಾಶನ, ಸರಸ್ವತೀಪುರಂ.
೩. ಪೂವಯ್ಯ ಪೇರಿಯನ, ೧೯೭೧. 'ಗೌಡ ಸಂಸ್ಕೃತಿಯ ಅವಲೋಕನ', (ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜದ ಸಂಸ್ಕೃತಿ (ಸಂ) ವೀರಪ್ಪ ಗೌಡ) ಬೆಂಗಳೂರು : ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ.
೧. ವೆಂಕಟಸುಬ್ಬಯ್ಯ ಜಿ. ಸಂ. ೧೯೭೫, 'ಸಂಕ್ಷಿಪ್ತ ಕನ್ನಡ ನಿಘಂಟು' (ಕನ್ನಡ - ಕನ್ನಡ) ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು
೪. ಮೊಣ್ಣಪ್ಪ ಪೂಜಾರಿರ, ೧೯೭೦. 'ಗೌಡರ ಪೂರ್ವ ಪರಿಚಯ' (ಕೊಡಗು ಮತ್ತು ದಕ್ಷಿಣ ಕನ್ನಡದ ಗೌಡ ಸಮಾಜದ ಸಂಸ್ಕೃತಿ (ಸಂ) ವೀರಪ್ಪ ಗೌಡ) ಬೆಂಗಳೂರು, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ.
1. Harold A. Stuart, 1891. South Canara' - Madras District Manuals, Madras : Printed by the Superintendent, Government Press.
2. Kittel F.R.W., 1894. 'A Kannada English Dictionary' Mangalore : Basel Mission Book and Track Depository.
3. Narasimhaiah A.N., 1961. 'Gowda in Kannada', Indian Linguistics, XXII.

## ಲೇಖಕರ ಹೆಸರು ಮತ್ತು ವಿಳಾಸ

ಡಾ. ಕೆ. ರಾಜೇಶ್ವರಿ ಗೌಡ
ಕನ್ನಡ ಪ್ರಾಧ್ಯಾಪಕರು,
'ಶ್ರೀಸನ್ನಿಧಿ', ೯೮/೧, ೨ನೇ ತಿರುವು,
ಡಾ. ಮಾಸ್ತಿರಸ್ತೆ, ಗವೀಪುರಂ ಬಡಾವಣೆ
ಬೆಂಗಳೂರು - ೫೬೦ ೦೧೯.

ಪ್ರೊ. ಡಿ. ಜವರೇಗೌಡ
ಪ್ರಾಂಶುಪಾಲರು
ನೆಹರೂ ಮೆಮೋರಿಯಲ್ ಪದವಿಪೂರ್ವ ಕಾಲೇಜು
ಸುಳ್ಯ, ದ.ಕ.

ಶ್ರೀ ಪೂವಪ್ಪ ಕಣಿಯೂರು
ಉಪನ್ಯಾಸಕರು; ಕನ್ನಡ ವಿಭಾಗ
ನೆಹರು ಮೆಮೋರಿಯಲ್ ಕಾಲೇಜು
ಸುಳ್ಯ, ದ.ಕ

ಪ್ರೊ. ಕೆ.ವಿ. ದಾಮೋದರ ಗೌಡ
ಪ್ರಾಂಶುಪಾಲರು
ನೆಹರು ಮೆಮೋರಿಯಲ್ ಕಾಲೇಜು
ಸುಳ್ಯ, ದ.ಕ.

ಶ್ರೀ ಎನ್.ಎಸ್. ದೇವಿಪ್ರಸಾದ್
ಅಂಚೆ ಸಂಪಾಜೆ - ೫೭೪ ೨೩೪

ಡಾ. ಪುರುಷೋತ್ತಮ ಬಿಳಿಮಲೆ
೬೧೯೮ / ೮, ಡಿ ೬, ವಸಂತಕುಂಜ
ನವದೆಹಲಿ - ೧೧೦ ೦೭೦

ಡಾ. ಅಂಬಳಿಕೆ ಹಿರಿಯಣ್ಣ
ಪ್ರಾಧ್ಯಾಪಕರು, ಜಾನಪದ ವಿಭಾಗ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬.

ಡಾ. ವೈ.ಸಿ. ಭಾನುಮತಿ
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಮಾನಸಗಂಗೋತ್ರಿ, ಮೈಸೂರು

ಡಾ. ನಲ್ಲೂರು ಪ್ರಸಾದ್
ಗೌರವ ಕೋಶಾಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು - ೫೬೦ ೦೧೮.

ಪ್ರೊ. ಹ.ಕ. ರಾಜೇಗೌಡ
ಸಂತೆಬಾಚಿ ಹಳ್ಳಿ, ನೆಲಮಂಗಲ ತಾಲೂಕು
ಮಂಡ್ಯ ಜಿಲ್ಲೆ

ಪ್ರೊ. ಡಿ.ಕೆ. ರಾಜೇಂದ್ರ
ನಿವೃತ್ತ ಪ್ರಾಧ್ಯಾಪಕರು
'ವಂದನ' ಮಾರುತಿ ದೇವಸ್ಥಾನ ರಸ್ತೆ
ಕುವೆಂಪು ನಗರ, ಮೈಸೂರು - ೨೩.

ಶ್ರೀ ಎ.ಕೆ. ಹಿಮಕರ
ಆರನೋಜಿ, ಅಂಚೆ ಗುತ್ತಿಗಾರು
ಸುಳ್ಯ ತಾಲೂಕು - ೫೭೪ ೨೧೮

ಪ್ರೊ. ಎಂ. ಶಿವಣ್ಣ ನೆಲಮನೆ
ಪ್ರಾಧ್ಯಾಪಕ ಮತ್ತು ಮುಖ್ಯಸ್ಥ
ಕನ್ನಡ ವಿಭಾಗ, ನೆಹರೂ ಸ್ಮಾರಕ ಕಾಲೇಜು
ಸುಳ್ಯ ದ.ಕ

ಶ್ರೀ ಸಂಜೀವ ಕುದ್ಪಾಜೆ
ಕನ್ನಡ ಉಪನ್ಯಾಸಕರು
ನೆಹರೂ ಸ್ಮಾರಕ ಮಹಾವಿದ್ಯಾಲಯ
ಸುಳ್ಯ, ದ.ಕ.

ಶ್ರೀ ಯದುಪತಿ ಗೌಡ
ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ - ೫೭೪ ೧೯೯

ಡಾ. ವಿಶ್ವನಾಥ ಬದಿಕಾನ
ಕನ್ನಡ ಉಪನ್ಯಾಸಕ,
ಸಂತ ಅಲೋಶಿಯಸ್ ಕಾಲೇಜು, ಮಂಗಳೂರು

ಡಾ. ಕೆ. ಚಿನ್ನಪ್ಪ ಗೌಡ
ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ - ೫೭೪ ೧೯೯

